# ಮುನ್ನುಡಿ

ಭಾರತದಲ್ಲಿಂದು ಪ್ರಜಾಪ್ರಭುತ್ವ ಪದ್ಧತಿಯ ರಾಜ್ಯದಾಡಳಿತೆಯು ನಡೆಯುತ್ತದೆ. ನಮ್ಮ ರಾಜ್ಯಘಟನೆಯನ್ವಯ ರಾಜ್ಯದಾಡಳಿತೆಯಲ್ಲಿ ಭಾಗ ವಹಿಸಲು ಭಾರತದ ಪ್ರತಿಯೊಬ್ಬ ನಾಗರಿಕನಿಗೆ ಸಮಾನ ಹಕ್ಕು, ಬಾಧ್ಯತೆ ಗಳು ಮತ್ತು ಅವಕಾಶಗಳು ಇವೆ. ಭಾರತವು ಹಳ್ಳಿಗಳ ನಾಡು. ಆದ್ದ-ರಿಂದ ಸ್ವಾಭಾವಿಕವಾಗಿ ಹಳ್ಳಿಗಳ ಜನರು ರಾಜ್ಯದಾಡಳಿತೆಯ ಪದ್ಧತಿ ಯನ್ನು ಅರಿತುಕೊಳ್ಳುವದು ಆವಶ್ಯಕವಾಗಿದೆ.

ಅವರಿಗೆ ರಾಜ್ಯದಾಡಳಿತೆಗೆ ಬೇಕಾಗುವ ರಾಜಕೀಯ ಶಿಕ್ಷಣವನ್ನು ಅವರವರ ಗ್ರಾಮಗಳಲ್ಲಿ ಗ್ರಾಮಪಂಚಾಯತಿಗಳ ಮುಖಾಂತರ ಕೊಡ ಬಹುದು. ಈ ಗ್ರಾಮಪಂಚಾಯತಿಗಳು ರಾಜಕೀಯ ಶಿಕ್ಷಣದ ಪ್ರಯೋಗ ಶಾಲೆಗಳಿದ್ದಂತೆ. ಆದ್ದರಿಂದ ಈಗಿನ ಬದಲಾದ ಪರಿಸ್ಥಿತಿಯಲ್ಲಿ ಅವುಗಳ ಮಹತ್ವ ಹೆಚ್ಚಾಗಿದೆ. ಗ್ರಾಮಪಂಚಾಯತ ಕಾನೂನು ೧೯೩೩ರಲ್ಲಿ ಅಮಲಿನಲ್ಲಿ ಬಂದರೂ, ಅದರಿಂದ ಆಗಬೇಕಾದಷ್ಟು ಪ್ರಗತಿಯು ಆಗಲಿಲ್ಲ. ಹಳ್ಳಿಗಳ ಸುಧಾರಣೆಗೆ ವಿಶೇಷ ಮಹತ್ವಕೊಡುವ ಕಾಂಗ್ರೆಸ್ ಪಕ್ಷವು ಅಧಿಕಾರಾರೂಢವಾದನಂತರ, ಅದು ಆ ಕಾನೂನಿನಲ್ಲಿ ಅನೇಕ ತಿದ್ದುಪಡೆ ಗಳನ್ನು ಮಾಡಿ ಆ ಕಾನೂನನ್ನು ಹೆಚ್ಚು ವ್ಯಾಪಕ ಮಾಡಿತು. ಕಾಂಗ್ರೆಸ್ ಸರಕಾರದ ಪ್ರೋತ್ಸಾಹನದಿಂದ ಜನರಾದರೂ ಹಳ್ಳಿಗಳ ಆಡಳಿತೆಯಲ್ಲಿ ವಿಶೇಷ ಆಸ್ಥೆ ತೋರಿಸಹತ್ತಿದರು.

ಈಗ ಎರಡು ಸಾವಿರ ಅಥವಾ ಅದಕ್ಕಿಂತ ಕಡಿಮೆ ಜನವಸತಿಯುಳ್ಳ ಗ್ರಾಮದಲ್ಲಿ ಕೂಡ ಪಂಚಾಯತಿಯನ್ನು ಸ್ಥಾಪಿಸಬಹುದು. ಆದಕಾರಣ ಗ್ರಾಮಪಂಚಾಯತ ಕಾನೂನಿನ ಜ್ಞಾನವು ಹೆಚ್ಚು ಜನರಿಗೆ ಆಗುವದು ಅವಶ್ಯವಿದೆ. ಈ ದೃಷ್ಟಿಯಿಂದಲೆ ಪ್ರಸ್ತುತ ಪುಸ್ತಕದಲ್ಲಿ ಗ್ರಾಮಪಂಚಾ-ಯತ ಕಾನೂನನ್ನು ಕಾಲಕಾಲಕ್ಕೆ ಆದ ತಿದ್ದುಪಡೆಗಳೊಂದಿಗೆ ಸುಲಭವಾದ ಶೈಲಿಯಲ್ಲಿ ಭಾಷಾಂತರಿಸಿ ಕೊಡಲಾಗಿದೆ. ಮತ್ತು ಸದರ ಕಾನೂನಿನ ಕಲಮುಗಳನ್ವಯ ಮಾಡಲ್ಪಟ್ಟ ಎಲ್ಲ ಮಹತ್ವದ ಹಾಗೂ ಉಪಯುಕ್ತ ನಿಯಮಗಳನ್ನು ಅದರಲ್ಲಿ ಕೊಟ್ಟಿದೆ.

ಈ ಪುಸ್ತಕವು ಗ್ರಾಮಪಂಚಾಯತಿಯವರಿಗೂ, ಗ್ರಾಮಪಂಚಾಯತಿಯ ರಚನೆ, ಆಡಳಿತೆ, ಇತ್ಯಾದಿ ವಿಷಯಗಳಲ್ಲಿ ಆಸ್ಥೆಯುಳ್ಳವರಿಗೂ ಮತ್ತು ಜನಸಾಮಾನ್ಯರಿಗೂ ಉಪಯುಕ್ತವಾಗಬಹುದೆಂದು ಆಶಿಸಲಾಗಿದೆ.

ಇದು ಪ್ರಥಮ ಕೃತಿಯಾದುದರಿಂದ ಇದರಲ್ಲಿ ಅನೇಕ ಕುಂದು ಕೊರತೆಗಳಿರಬಹುದು. ಅವೆಲ್ಲವುಗಳನ್ನು ಮುಂದಿನ ಆವೃತ್ತಿಯಲ್ಲಿ ತಿದ್ದಿಕೊಳ್ಳಲಾಗುವದು. ಸಲಹೆ-ಸೂಚನೆಗಳಿಗೆ ಸ್ವಾಗತವಿದೆ.

ಪ್ರಕಾಶಕರು ಈ ಪುಸ್ತಕವನ್ನು ಬರೆಯಲು ಅಣಿಮಾಡಿಕೊಟ್ಟು ಸಕಾಲದಲ್ಲಿ ಪ್ರಕಟಿಸಿದ್ದಕ್ಕಾಗಿ ನಾನು ಅತ್ಯಂತ ಋಣಿಯಾಗಿದ್ದೇನೆ.

ಧಾರವಾಡ,<br>
ತಾ. ೨೮-೮-೧೯೫೨

**ಲೇಖಕ.**

# ಪ್ರಕಾಶಕರ ಮಾತು

ಇದೀಗ ನಾವು ಪ್ರಕಟಿಸುವ ಕಾಯದೆಯ ಪುಸ್ತಕವು 'ಗ್ರಾಮ-ಪಂಚಾಯತಿಯ ಕಾಯದೆ' ಎಂಬುದು. ಇದಕ್ಕೂ ಮೊದಲು ನಾವು 'ಮುಂಬಯಿ ಪೋಲೀಸ ಆಕ್ಟ, ೧೯೫೧' ಎಂಬುದನ್ನು ಪ್ರಸಿದ್ಧಪಡಿಸಿ, ಪೋಲೀಸರಿಗೂ, ಗ್ರಾಮದ ಪೋಲೀಸ ಪಾಟೀಲರಿಗೂ ಒಳ್ಳೆ ಸಹಾಯ-ವಾಗುವಂತೆ ಪ್ರಯತ್ನಿಸಿದೆವು. ಆ ಕಾಲಕ್ಕೆ ನಾವು ಕನ್ನಡಕ್ಕೆ ವಿವಿಧ ಕಾಯ್ದೆ ಕಾನೂನುಗಳ ಪುಸ್ತಕಗಳನ್ನು ಪರಿವರ್ತಿಸಿ ಪ್ರಕಟಗೊಳಿಸುವ ಭರವಸೆಯನ್ನಿತ್ತಿದ್ದೆವು. ಅದಕ್ಕನುಸರಿಸಿ ಪ್ರಕಟಿಸಿದ ಈ ಪುಸ್ತಕವೇ 'ಗ್ರಾಮಪಂಚಾಯತಿ ಕಾಯದೆ'ಯು.

ಹಳ್ಳಿಗಳಿಂದ ವಿಶಿಷ್ಟವಾದ ಭಾರತದಲ್ಲಿ ಸದ್ಯ ಸ್ವತಂತ್ರದಾಡಳಿತೆ ನಡೆದಿದೆ. ಹಳ್ಳಿಯಿಂದ ಮೊದಲಾಗಿ ರಾಜ್ಯಕಾರಭಾರ ನಿರ್ವಹಣೆ ಸರಿಯಾಗಿ ಸಾಗುವದವಶ್ಯವಿದೆ. ಹಳ್ಳಿಗಳ ಆಡಳಿತಗಾರರೆನ್ನಿಸಿದ ಗ್ರಾಮಪಂಚಾಯಿತಿಯವರಿಗೂ, ಪಾಟೀಲ, ತಲಾಠಿಯರಿಗೂ ಗ್ರಾಮ ಕಾಯದೆಗಳ ಸಂಬಂಧ ಮೇಲೆ ಮೇಲೆ ಉಂಟಾಗುವದು. ಕನ್ನಡದಲ್ಲಿ ಈ ವಿಷಯಗಳ ಬಗೆಗೆ ಮೇಲ್ತರದ ಪುಸ್ತಕದ ಕೊರತೆಯಿದೆ. ಅದನ್ನು ಪೂರ್ಣಮಾಡುವ ಕುರಿತು ನಮ್ಮ ಕೆಲ ಹಳ್ಳಿಯ ಸದ್‌ಗೃಹಸ್ಥರ ಸೂಚನೆಯನ್ನು ಮನ್ನಿಸಿ ನಾವು ಈ ಪುಸ್ತಕವನ್ನು ಇಲ್ಲಿಯ "ಶ್ರೀ. ನಾಯಿಕ ವಕೀಲರು, B. A., L L. B. ಇವರ ಸಹಾಯ ಸಲಹೆಗಳೊಂದಿಗೆ ಸಿದ್ಧಪಡಿಸಿ ಪ್ರಕಟಿಸಿರುವೆವು. ಈ ಬಗೆಗೆ ನಾವು ಶ್ರೀಮಾನ್‌ರ ಆಭಾರವನ್ನು ಸ್ಮರಿಸುವೆವು.

ಗ್ರಾಮಪಂಚಾಯತಿಗಳೂ, ಹಳ್ಳಿಯ ಅಧಿಕಾರಿಗಳೂ ಈ ನಮ್ಮ ಪುಸ್ತಕವನ್ನು ಆದರಿಸಿ ಕೊಂಡದ್ದಾದರೆ ಕಾಯದೆಯ ಪುಸ್ತಕಗಳನ್ನು ಕನ್ನಡಿಗರಿಗೆ ಪೂರೈಸಿಕೊಡುವ ನಮ್ಮ ಸಾಹಸಕ್ಕೆ ಕೈಗೊಟ್ಟಂತಾಗುವದು.

ಬಲ್ಲವರು ಈ ಪುಸ್ತಕವನ್ನೋದಿ ಮಾಡಿದ ಸೂಚನೆಗಳನ್ನು ಸ್ವಾಗತಿಸುವೆವು.

ಧಾರವಾಡ,
ತಾ. ೨೮-೮-೧೯೫೨

ಪ್ರಕಾಶಕ.

# ಪರಿವಿಡಿ

## ಮೊದಲನೇ ಭಾಗ


| | | | |
|---|---|---|---|
| ವಿಭಾಗ | ೧ | ಪ್ರಾರಂಭಿಕ | ಪುಟ ೨ |
| | | ( ಸಂಕ್ಷಿಪ್ತ ಹೆಸರು, ವ್ಯಾಪ್ತಿ, ವ್ಯಾಖ್ಯೆಗಳಿಂದ ಕೂಡಿದ್ದು ) | |
| ,, | ೨ | ಪಂಚಾಯತಗಳ ಸ್ಥಾಪನೆ ಮತ್ತು ರಚನೆ | ೫ |
| ,, | ೩ | ಆಡಳಿತೆಯ ಸಂಬಂಧದ ಅಧಿಕಾರಿಗಳು ಮತ್ತು ಕರ್ತವ್ಯಗಳು | ೨೧ |
| ,, | ೪ | ಗ್ರಾಮಪಂಚಾಯತಿಯ ಸಂಸ್ಥಾಪನೆ, ಅದರ ಆಸ್ತಿ ಮತ್ತು ಫಂಡು | ೩೧ |
| ,, | ೫ | ನೌಕರವರ್ಗ ಮತ್ತು ಲೆಖ್ಖಗಳು | ೩೪ |
| ,, | ೬ | ನ್ಯಾಯಪಂಚಾಯತಿಗಳ ರಚನೆ ಮತ್ತು ಅಧಿಕಾರಗಳು | ೩೮ |
| ,, | ೭ | ದಾವೆಗಳಲ್ಲಿ ಮತ್ತು ಖಟ್ಲೆಗಳಲ್ಲಿ ಪಂಚಾಯತಗಳು ಕೆಲಸ ನಡಿಸುವ ಕ್ರಮ ( ರೀತಿ ) | ೫೫ |
| ,, | ೮ | ಅಮಲ ಬಜಾವಣೆ | ೬೭ |
| ,, | ೮ಅ. | ,, | ೭೩ |
| ,, | ೯ | ಕರ ಕೂಡ್ರಿಸುವದು ಮತ್ತು ಬರತಕ್ಕ ರಕಮುಗಳನ್ನು ವಸೂಲ ಮಾಡುವದು | ೭೫ |
| ,, | ೧೦ | ಪಂಚಾಯತಗಳಿಗೆ ಆರ್ಥಿಕ ಸಹಾಯ | ೮೩ |
| ,, | ೧೧ | ನಿರ್ಬಂಧ | ೮೪ |
| ,, | ೧೨ | ನಿಯಮಗಳು ಮತ್ತು ಉಪನಿಯಮಗಳು | ೯೮ |
| ,, | ೧೩ | ಸಂಕೀರ್ಣ | ೧೦೭ |

# ಎರಡನೇ ಭಾಗ

## ನಿಯಮಗಳು


| | | |
|---|---|---|
| ೧ | ೧೦೮ (೧)(ಅ) ಕಲಮಿನನ್ವಯ ಕಲೆಕ್ಟರನು ಮಾಡಬೇಕಾದ ವಿಚಾರಣೆಯ ಸಂಬಂಧ ನಿಯಮಗಳು | ೧ |
| ೨ | ಗ್ರಾಮಪಂಚಾಯತಗಳ ಚುನಾವಣೆಯ ನಿಯಮಗಳು | ೫ |
| ೩ | ಸೆಕ್ರೆಟರಿಯ ಸಂಬಂಧದ ನಿಯಮಗಳು | ೨೯ |
| ೪ | ಮುಂಗಡ ಪತ್ರ ಮತ್ತು ಲೆಕ್ಕಗಳ ಸಂಬಂಧದ ನಿಯಮಗಳು | ೩೯ |
| ೫ | ನ್ಯಾಯಪಂಚಾಯತಗಳ ನಿಯಮಗಳು | ೧ |
| ೬ | ಸೆಕ್ರೆಟರಿಯ ಜ್ಯುಡಿಸಿಯಲ್ ಕಾರಕೂನನೆಂದು ಮಾಡಬೇಕಾದ ಕೆಲಸಗಳು | ೧೯ |
| ೭ | ಸರಪಂಚನ ಅಥವಾ ಉಪಸರಪಂಚನ ಸ್ಥಾನವು ಬರಿದಾದ ಬಗ್ಗೆ ಕೊಡಬೇಕಾದ ನೋಟೀಸು | ೨೨ |
| ೮ | ಪಂಚಾಯತಿಯ ಫಂಡನ್ನು ತಾಬೆಯಲ್ಲಿಡುವವರ ಸಂಬಂಧದ ನಿಯಮಗಳು | ೨೩ |
| ೯ | ವಸ್ತುಗಳ ಮಾರಾಟದ ಮೇಲೆ ಕರಕೂಡಿಸುವ ಬಗ್ಗೆ ನಿಯಮ | ೨೪ |
| ೧೦ | ಕರದ ಅಥವಾ ಫೀಯ ಪರಮಾವಧಿ ದರಗಳನ್ನು ಗೊತ್ತು ಮಾಡುವ ಬಗ್ಗೆ ನಿಯಮಗಳು | ೨೫ |
| ೧೧ | ಗ್ರಾಮಾಧಿಕಾರಿಗಳ ಪ್ರತಿಫಲವನ್ನು ಗೊತ್ತುಮಾಡುವ ಬಗ್ಗೆ ನಿಯಮವು | ೩೧ |
| ೧೨ | ಪಂಚಾಯತಿಗೆ ಲೋಕಲಬೋರ್ಡು ಯಾವ ಕಾರಣಗಳ ಮೇಲೆ ಸಾಲ ಕೊಡುವ ಸಂಬಂಧ ನಿಯಮಗಳು | ೩೩ |
| ೧೩ | ಭೂಮಿ/ಮನೆಗಳ ಮತ್ತು ಒಡೆಯರ ಅಥವಾ ಭೋಗವಟಿ ಮಾಡುವವರ ಮೇಲೆ ಕರ ಹೇರುವ ಬಗ್ಗೆ ನಿಯಮಗಳು | ೩೫ |

೧೪ ಬೇಡಿಕೆಯ ಪತ್ರದ ನಮೂನೆ ೪೭

೧೫ ವಾರಂಟಿನ ನಮೂನೆ, ಜಂಗಮ ಆಸ್ತಿಯ ಜಪ್ತಿ, ಲಿಲಾವು ಮತ್ತು ಮಾರಾಟಗಳ ಬಗ್ಗೆ ನಿಯಮಗಳು ೪೮

೧೬ ಜಪ್ತಿ ವಾರಂಟಿನ ನಮೂನೆ ೫೧

೧೭ ಯಾದಿ ಮತ್ತು ನೋಟೀಸಿನ ನಮೂನೆ ೫೨

೧೮ ೯೧ (೪)ನೇ ಕಲಮಿನನ್ವಯ ಫೀ ದರಗಳನ್ನು ಗೊತ್ತು ಪಡಿಸುವ ನಿಯಮಗಳು

೧೯ ೧) ಕರ ಮತ್ತು ಫೀಗಳ ಸಂಬಂಧ ನಿಯಮಗಳು ೫೬
೨) ಯಾತ್ರಿಕರ ಮೇಲೆ ಕರ ೫೮
೩) ಜಾತ್ರೆ ಮತ್ತು ಉತ್ಸವಗಳ ಮೇಲೆ ಕರ ೫೯
೪) ಆಕ್ಟ್ರಾಯ ೬೨
೫) ಮದುವೆ, ದತ್ತಕ ಮತ್ತು ಮೇಜವಾನಿಗಳ ಮೇಲೆ ಕರ ೬೮
೬) ಜನರಲ್ ಸ್ಯಾನಿಟರಿ ಸೆಸ್ ೭೨
೭) ಸ್ಪೆಶಲ್ ಸ್ಯಾನಿಟರಿ ಸೆಸ್ ೭೫
೮) ಪೇಟೆ ಮತ್ತು ಸಂತೆಗಳ ಮೇಲಿನ ಫೀಗಳು ೭೮
೯) ವಾಹನ ಮತ್ತು ಪ್ರಾಣಿಗಳ ಮೇಲೆ ಜಕಾತಿ ೮೦
೧೦) ಅಂಗಡಿ ಮತ್ತು ಹಾಟೆಲ್‌ಗಳ ಮೇಲೆ ಕರ ೮೪
೧೧) ಕಾರಖಾನೆ ಮತ್ತು ಗಿರಣಿಗಳ ಮೇಲೆ ಕರ ೮೬

**ಸೂಚನೆ:—** ಪಂಚಾಯತಿಗೆ ಲೋಕಲಬೋರ್ಡು ಸಾಲವನ್ನು ಕೊಡುವ ಕರಾರುಗಳ ನಿಯಮಗಳು ಮತ್ತು ಮನೆ ಮತ್ತು ಭೂಮಿಗಳ ಒಡೆಯರ ಅಥವಾ ಭೋಗವಟೆ ಮಾಡುವವರ ಮೇಲೆ ಕರ ಹೇರುವ ಸಂಬಂಧದ ೩೪ನೇ ಪುಟದಲ್ಲಿ ಅಚ್ಚಾದ ನಿಯಮಗಳು ಪುನಃ ೩೫ನೇ ಪುಟದಲ್ಲಿ ಅಚ್ಚಾಗಿವೆ. ಆದ್ದರಿಂದ ೩೪ನೇ ಪುಟವನ್ನು ಓದಬಾರದು

# ಮುಂಬಯಿ

# ಗ್ರಾಮ ಪಂಚಾಯತಿ

## ಕಾನೂನು

## ೧೯೩೩ನೇ ಇಸ್ವಿಯ ಮುಂಬಯಿ ಕಾನೂನು ನಂ. ೬

(ಗವ್ಹರ್ನರ-ಜನರಲ್ ಇವರ ಒಪ್ಪಿಗೆ ಪಡೆದನಂತರ ಮುಂಬೈ ಸರಕಾರದ ಗ್ಯಾಝಿಟ್‌ನಲ್ಲಿ ದಿನಾಂಕ ೧೨ ಜೂನ ೧೯೩೩ನೇ ದಿನ ಮೊದಲನೇ ಸಲ ಪ್ರಸಿದ್ಧಿಸಲ್ಪಟ್ಟಿತು ಮತ್ತು ಅಂದಿನಿಂದ ಜಾರಿಯಲ್ಲಿ ಬಂದಿತು)

ಈ ಕಾನೂನು

(೧) ೧೯೩೫ ನೇ ಇಸ್ವಿಯ ಮುಂಬೈ ಕಾನೂನ ನಂಬರು ೩೪
(೨) ೧೯೩೬ ನೇ ಇಸ್ವಿಯ ,, ,, ,, ೨೪
(೩) ೧೯೩೯ ನೇ ಇಸ್ವಿಯ ,, ,, ,, ೧೮
(೪) ೧೯೪೦ ನೇ ಇಸ್ವಿಯ ,, ,, ,, ೪
(೫) ೧೯೪೫ ನೇ ಇಸ್ವಿಯ ,, ,, ,, ೨ ಮತ್ತು ೧೪.
(೬) ೧೯೪೬ ನೇ ಇಸ್ವಿಯ ,, ,, ,, ೨೪
(೭) ೧೯೪೭ ನೇ ಇಸ್ವಿಯ ,, ,, ,, ೬೦
(೮) ೧೯೪೯ ನೇ ಇಸ್ವಿಯ ,, ,, ,, ೪
(೯) ೧೯೫೦ ನೇ ಇಸ್ವಿಯ ,, ,, ,, ೧೭ ಮತ್ತು ೩೧
(೧೦) ೧೯೫೧ ನೇ ಇಸ್ವಿಯ ,, ,, ,, ೧೦

ಇವುಗಳಿಂದ ತಿದ್ದುಪಡಿಯಾದದು.

**ಗ್ರಾಮ ಪಂಚಾಯತಗಳ ರಚನೆಯ ಸಂಬಂಧದ ಕಾಯಿದೆಯನ್ನು ಸುಧಾರಿಸಿ ಒಟ್ಟು ಗೂಡಿಸುವ ವಿಷಯದ ಕಾನೂನು.**

ಗ್ರಾಮಪ್ರದೇಶಗಳಲ್ಲಿ ಸ್ಥಾನಿಕ ಸ್ವರಾಜ್ಯದ ಬೆಳವಣಿಗೆಯನ್ನು ಇನ್ನು ಹೆಚ್ಚಾಗಿ ಮಾಡುವದಕ್ಕೂ, ದಿವಾಣಿ ಮತ್ತು ಫೌಜದಾರೀನ್ಯಾಯದ ಆಡಳಿತೆಯು ಹೆಚ್ಚು ಒಳ್ಳೇಯದಾಗಿ ನಡೆಯುವದಕ್ಕೂ, ಗ್ರಾಮಪಂಚಾಯತಗಳ ಬೆಳವಣಿಗೆಯನ್ನು ಪ್ರೋತ್ಸಹಿಸಿ ಅವುಗಳ ಉಪಯುಕ್ತತೆಯನ್ನು ಹೆಚ್ಚಿಸುವ ಉದ್ದೇಶದಿಂದ ಗ್ರಾಮಪಂಚಾಯತಗಳ ರಚನೆಯ ವಿಷಯದ ಕಾನೂನನ್ನು ಸುಧಾರಿಸಿ ಒಟ್ಟುಗೂಡಿಸುವುದು ವಿಹಿತವಿರುವದರಿಂದ ಮತ್ತು ಈ ಕಾನೂನನ್ನು ಪಾಸುಮಾಡುವದರ ಸಲುವಾಗಿ ಭಾರತ-ಸರಕಾರದ ಕಾನೂನಿನ ೮೦ ಅ ಕಲಮಿನ ೩ ನೇ ಉಪಕಲಮಿನನ್ವಯ ತೆಗೆದು ಕೊಳ್ಳಬೇಕಾದ ಗವ್ಹರ್ನರ ಜನರಲ್‌ರ ಒಪ್ಪಿಗೆಯನ್ನು ಮುಂಚಿತಗಾಗಿ ಪಡೆದಿರುವದರಿಂದ ಈ ಮೂಲಕ ಈ ಕೆಳಗಿನಂತೆ ಕಾನೂನು ಮಾಡಲ್ಪಟ್ಟಿದೆ.

# ವಿಭಾಗ ೧

## ಪ್ರಾರಂಭಿಕ

**೧. ಸಂಕ್ಷಿಪ್ತ ಹೆಸರು :**

ಈ ಕಾನೂನಿಗೆ ೧೯೩೩ ನೇ ಇಸ್ವಿಯ ಮುಂಬಯಿ ಗ್ರಾಮಪಂಚಾ-ಯತಗಳ ವಿಷಯದ ಕಾನೂನು ಎನ್ನಬಹುದು.

**೨. ವ್ಯಾಪ್ತಿ :**

ಮುಂಬಯಿ ನಗರವನ್ನು ಹೊರ್ತು ಪಡಿಸಿ ಮುಂಬಯಿ ಪ್ರಾಂತಕ್ಕೆಲ್ಲ ಈ ಕಾನೂನನ್ನು ಅನ್ವಯಿಸಲಾಗಿದೆ.

**೩. ವ್ಯಾಖ್ಯೆಗಳು:**

ಈ ಕಾನೂನಿನಲ್ಲಿ ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವುದೇ ಬಾಧೆ ಬರದಿದ್ದರೆ–

(೧) "ಪರಿಶಿಷ್ಟ ಜನಾಂಗಗಳು" ಅಂದರೆ ಭಾರತ ರಾಜ್ಯ ಘಟನೆಯ ೩೪೨ ನೇ ನಿಬಂಧನೆಯನ್ವಯ ಮುಂಬಯಿ ರಾಜ್ಯದ ಸಂಬಂಧದಲ್ಲಿ

‘ ಪರಿಶಿಷ್ಟ ಜನಾಂಗಗಳು ’ ಎಂದು ತಿಳಿಯಲ್ಪಡುವಂಥ ಜನಾಂಗಗಳು ಅಥವಾ ಗುಂಪುಗಳು ಅಥವಾ ಇಂಥ ಜನಾಂಗಗಳ ಅಥವಾ ಗುಂಪುಗಳ ಭಾಗಗಳು ಇಲ್ಲವೆ ಪಂಗಡಗಳು ಎಂದು ತಿಳಿಯಬೇಕು.

(೧ ಅ) “ಉಪನಿಯಮಗಳು” ಅಂದರೆ ೧೧೮ ನೇ ಕಲಮಿನನ್ವಯ ಜಿಲ್ಹಾ ಲೋಕಲ್ ಬೋರ್ಡಿನಿಂದ ಮಾಡಲ್ಪಟ್ಟ ಉಪನಿಯಮಗಳು ಎಂಪರ್ಥವಾಗುತ್ತದೆ.

(೨) “ಖಟ್ಲೆಯು” ಎಂಬುದನ್ನು ಯಾವುದೇ ನ್ಯಾಯದ ಸಂಬಂಧ ದಲ್ಲಿ ಉಪಯೋಗಿಸಿದಾಗ ಅದರ ಅರ್ಥವು ನ್ಯಾಯ ಪಂಚಾಯತದಿಂದ ವಿಚಾರಿಸಲ್ಪಡಬಹುದಾದ ಯಾವುದೇ ಅಪರಾಧದ ಸಂಬಂಧದ ಫೌಜದಾರಿ ವಿಚಾರಣೆ ಎಂದರ್ಥವಾಗುತ್ತದೆ.

(೩) “ ಚೇರಮನ್ ” ಅಂದರೆ ೩೭ ಅ ಕಲಮಿನನ್ವಯ ನೇಮಿಸ-ಲ್ಪಟ್ಟ ನ್ಯಾಯಪಂಚಾಯತಿಯ ಚೇಅರಮನ್ ಎಂದರ್ಥ.

(೪) “ ಜಿಲ್ಹಾ ಲೋಕಲ್ ಬೋರ್ಡ ” ಎಂಬದನ್ನು ಯಾವುದೇ ಸ್ಥಾನಿಕ ಕ್ಷೇತ್ರದ ಸಂಬಂಧದಲ್ಲಿ ಉಪಯೋಗಿಸಿದಾಗ ಅದರ ಅರ್ಥವು ಅಂಥ ಸ್ಥಾನಿಕ ಕ್ಷೇತ್ರವು ಇರುವ ಜಿಲ್ಹೆಯ ಬಗ್ಗೆ ೧೯೨೩ ನೇ ಇಸ್ವಿಯ ಮುಂಬಯಿ ಲೋಕಲ್ ಬೋರ್ಡುಗಳ ಕಾನೂನಿನನ್ವಯ ಸ್ಥಾಪಿಸಲ್ಪಟ್ಟ ಜಿಲ್ಹಾ ಲೋಕಲ್ ಬೋರ್ಡು ಎಂದರ್ಥವಾಗುತ್ತದೆ.

(೫) “ ಪರಿಶಿಷ್ಟ ಜಾತಿಗಳು ” ಅಂದರೆ ಭಾರತ-ರಾಜ್ಯಘಟನೆಯ ೩೪೧ ನೇ ನಿಬಂಧನೆಯನ್ವಯ ಮುಂಬಯಿ ರಾಜ್ಯದ ಸಂಬಂಧದಲ್ಲಿ ‘ ಪರಿಶಿಷ್ಟ ಜಾತಿಗಳು ’ ಎಂದು ತಿಳಿಯಲ್ಪಡುವಂಥ ಜಾತಿಗಳು ಇಲ್ಲವೆ ಜನಾಂಗಗಳು ಅಥವಾ ಇಂಥ ಜಾತಿ, ವಂಶ, ಜನಾಂಗ ಇವುಗಳ ಭಾಗಗಳು ಅಥವಾ ಪಂಗಡಗಳು ಎಂದು ತಿಳಿಯಬೇಕು. ಮತ್ತು ಮುಂಬಯಿ ರಾಜ್ಯದ ಸಂಬಂಧದಲ್ಲಿ ಆ ೩೪೧ ನೇ ನಿಬಂಧನೆಯನ್ವಯ ಪ್ರಕಟನೆಯನ್ನು ಹೊರಡಿಸುವ ವರೆಗೆ ಭಾರತ ಸರಕಾರದ ೧೯೩೬ನೇ ಇಸ್ವಿಯ (ಪರಿಶಿಷ್ಟ ಜಾತಿಗಳ) ಆಜ್ಞೆಯಲ್ಲಿ ವ್ಯಾಖ್ಯೆಮಾಡಲ್ಪಟ್ಟ ಜಾತಿಗಳು ಎಂದು ತಿಳಿಯಬೇಕು.

(೬) "ಅಪರಾಧ" ಅಂದರೆ ಆಯಾ ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಿಂದ ದಂಡಿಸಲ್ಪಡಬೇಕಾದ ಯಾವುದೇ ಕೃತಿ ಅಥವಾ ಲೋಪ (ಕರ್ತವ್ಯ ಚ್ಯುತಿ)

(೭) " ಪಂಚಾಯತ " ಅಂದರೆ ಈ ಕಾನೂನಿನನ್ವಯ ಸ್ಥಾಪಿಸಲ್ಪಟ್ಟ ಪಂಚಾಯತವು.

(೮) " ಠರಾಯಿಸಿದ್ದು" ಅಂದರೆ ನಿಯಮಗಳನ್ವಯ ಠರಾಯಿಸಿದ್ದು ಎಂದರ್ಥ.

(೯) " ಮುಲ್ಕೀ ಗ್ರಾಮ " ಅಂದರೆ ಮುಲ್ಕೀ ಲೆಖ್ಖಗಳಲ್ಲಿ ಒಂದು ಗ್ರಾಮವೆಂದು ಮಾನ್ಯಮಾಡಲ್ಪಟ್ಟ ಯಾವುದೇ ಸ್ಥಾನಿಕ ಕ್ಷೇತ್ರವು.

(೧೦) " ನಿಯಮಗಳು " ಅಂದರೆ ೧೦೮ ನೇ ಕಲಮಿನನ್ವಯ (ಪ್ರಾಂತಿಕ ಸರಕಾರದವರು) ಮಾಡಿದ ನಿಯಮಗಳು ಎಂದರ್ಥ.

(೧೧) " ಸರಪಂಚ " ಅಂದರೆ ೧೪ ನೇ ಕಲಮಿನನ್ವಯ ಚುನಾಯಿಸಲ್ಪಟ್ಟ ಸರಪಂಚನು.

(೧೨) " ಸ್ಕೂಲ ಬೋರ್ಡ " ಅಂದರೆ ೧೯೪೭ ನೇ ಇಸ್ವಿಯ ಮುಂಬಯಿ ಪ್ರಾಥಮಿಕ ಶಿಕ್ಷಣದ ಕಾನೂನಿನ ೩ನೇ ಕಲಮಿನನ್ವಯ ರಚಿಸಲ್ಪಟ್ಟ ಸ್ಕೂಲಬೋರ್ಡ.

(೧೩) " ದಾವೆ " ಅಂದರೆ ಈ ಕಾನೂನಿನನ್ವಯ ನ್ಯಾಯಪಂಚಾಯತದಿಂದ ವಿಚಾರಣೆಮಾಡಲ್ಪಡಬಹುದಾದ ದಿವಾಣಿ ದಾವೆ ಎಂದರ್ಥ.

(೧೪) " ಕರ " ಅಂದರೆ ಈ ಕಾನೂನಿನ್ವಯ ಹೇರಲ್ಪಡಬಹುದಾದ ಕರ, ಸೆಸ್ಸು, ಪಟ್ಟಿ ಅಥವಾ ಇತರ ಸುಂಕ. ಎಂದರ್ಥವಾಗುತ್ತದೆ. ಆದರೆ ಅದರಲ್ಲಿ 'ಫೀ' ಯ ಸಮಾವೇಶವಾಗುವದಿಲ್ಲ.

(೧೫) " ಪಂಚಾಯತದ ಅಧಿಕಾರದ ಅವಧಿ " ಅಂದರೆ ೧೧ ನೇ ಕಲಮಿನನ್ವಯ ಪಂಚಾಯತದ ಚುನಾಯಿಸಲ್ಪಟ್ಟ ಸದಸ್ಯರು ಹುದ್ದೇ ಧಾರಣ ಮಾಡುವ ಕಾಲಾವಧಿ ಎಂದರ್ಥವು.

(೧೬) " ಗ್ರಾಮ " ಅಂದರೆ ೪ ನೇ ಕಲಮಿನನ್ವಯ ಗ್ರಾಮವೆಂದು ಜಾಹೀರ ಮಾಡಲ್ಪಟ್ಟ ಯಾವುದೇ ಸ್ಥಾನಿಕ ಕ್ಷೇತ್ರವು.

(೧೭) " ನ್ಯಾಯಪಂಚಾಯತ " ಅಂದರೆ ದಾವೆಗಳ ಮತ್ತು ಖಟ್ಲೆಗಳ ವಿಚಾರಣೆಯ ಬಗ್ಗೆ ೩೭ ಕಲಮಿನನ್ವಯ ರಚಿಸಲ್ಪಟ್ಟ ನ್ಯಾಯ ಪಂಚಾಯತವು.

# ವಿಭಾಗ ೨

## ಪಂಚಾಯತಗಳ ಸ್ಥಾಪನೆ ಮತ್ತು ರಚನೆ.

೪. ಗ್ರಾಮವೆಂದು ಜಾಹೀರ ಮಾಡುವದು.

(೧) ಠರಾಯಿಸಬಹುದಾದಂಥ ವಿಚಾರಣೆಯನ್ನು ಮಾಡಿದ ನಂತರ, ಯಾವುದೊಂದು ಮುಲ್ಕೀ ಗ್ರಾಮವನ್ನು, ಮುಲ್ಕೀ ಗ್ರಾಮಗಳ ಗುಂಪನ್ನು ಅಥವಾ ಮುಲ್ಕೀ ಗ್ರಾಮದ ಭಾಗವಾಗಿದ್ದ ಮಜರೆ (ಸಣ್ಣಹಳ್ಳಿ)ಗಳ ಒಂದು ಗುಂಪನ್ನು ಒಳಗೊಂಡ ಯಾವುದೇ ಸ್ಥಾನಿಕ ಕ್ಷೇತ್ರದಲ್ಲಿ ಜನವಸತಿಯು ೨ಸಾವಿರಕ್ಕಿಂತ ಕಡಿಮೆ ಇರುವದಿಲ್ಲವೆಂದು ಪ್ರಾಂತಿಕ ಸರಕಾರದವರಿಗೆ ತೃಪ್ತಿಯಾದರೆ ಅವರು ಸರಕಾರಿ ಗ್ಯಾಝೀಟಿನಲ್ಲಿ ಜಾಹೀರ ನಾಮೆಯನ್ನು ಕೊಟ್ಟು, ಇಂಥ ಸ್ಥಾನಿಕ ಕ್ಷೇತ್ರವು ಒಂದು ಗ್ರಾಮವಾಗಿರುವದೆಂದು ಜಾಹೀರ ಮಾಡಬೇಕು.

ಆದರೆ, ಗೊತ್ತುಪಡಿಸುವದೇನಂದರೆ, ಪ್ರಾಂತಿಕ ಸರಕಾರದವರು ಸರಕಾರಿ ಗ್ಯಾಝೀಟಿನಲ್ಲಿ ಜಾಹೀರ ನಾಮೆಯನ್ನು ಕೊಟ್ಟು ೨ಸಾವಿರಕ್ಕಿಂತ ಕಡಿಮೆ ಜನವಸತಿಯುಳ್ಳ ಯಾವುದೇ ಸ್ಥಾನಿಕ ಕ್ಷೇತ್ರವು ಈ ಕಲಮಿನನ್ವಯ ಒಂದು ಗ್ರಾಮವಾಗಿದೆಯೆಂದು ಜಾಹೀರ ಮಾಡಬೇಕೆಂದು ಆಜ್ಞೆ ಮಾಡಬಹುದು.

(೨) ಪ್ರಾಂತಿಕ ಸರಕಾರದವರು ಜಿಲ್ಹಾ ಲೋಕಲ್ ಬೋರ್ಡಿನವರೊಂದಿಗೆ ಆಲೋಚನೆ ಮಾಡಿದಬಳಿಕ, ಅದೇ ಪ್ರಕಾರ ಒಂದು ಜಾಹೀರ ಪ್ರಕಟನೆಯನ್ನು ಕೊಟ್ಟು ಯಾವುದೇ ಕಾಲಕ್ಕೆ—

ಅ] ಯಾವುದೇ ಸ್ಥಾನಿಕ ಕ್ಷೇತ್ರವನ್ನು ಯಾವುದೇ ಗ್ರಾಮದಲ್ಲಿ ಸೇರ್ಪಡೆ ಮಾಡಬಹುದು ಅಥವಾ ಯಾವುದೇ ಗ್ರಾಮದಿಂದ ಸಹ ಹೊರ ಪಡಿಸಬಹುದು ಅಥವಾ ಇತರ ರೀತಿಯಿಂದ ಯಾವುದೇ ಗ್ರಾಮದ ಮೇರೆಗಳನ್ನು ಬದಲಾಯಿಸಬಹುದು ಅಥವಾ [ಬ] ಯಾವುದೇ ಸ್ಥಾನಿಕ ಕ್ಷೇತ್ರವು ಗ್ರಾಮವಾಗಿರುವುದು ಬಂದಾಗಿರುವದೆಂದು ಜಾಹೀರ ಮಾಡಬಹುದು.

**೫. ಪಂಚಾಯತಿಗಳ ಸ್ಥಾಪನೆ.**

೪ನೇ ಕಲಮಿನನ್ವಯ ಗ್ರಾಮವೆಂದು ಜಾಹೀರ ಮಾಡಲ್ಪಟ್ಟ ಪ್ರತಿಯೊಂದು ಗ್ರಾಮದಲ್ಲಿ ಒಂದು ಪಂಚಾಯತವು ಇರಬೇಕು.

**೬. ಪಂಚಾಯತಗಳ ರಚನೆ.**

(೧) ಕಲೆಕ್ಟರನು ಜಿಲ್ಹಾ ಲೋಕಲ್ ಬೋರ್ಡಿನ ಸಂಗಡ ಆಲೋಚನೆ ಮಾಡಿದ ನಂತರ ಠರಾಯಿಸ ಬಹುದಾದಷ್ಟು ಸಂಖ್ಯೆಯ ಚುನಾಯಿಸಲ್ಪಟ್ಟ ಸಭಾಸದರು ಯಾವುದೊಂದು ಪಂಚಾಯತಿಯಲ್ಲಿ ಇರತಕ್ಕದ್ದು ಮತ್ತು ಸಭಾಸದರ ಸಂಖ್ಯೆಯು ೭ಕ್ಕಿಂತ ಕಡಿಮೆ ಇಲ್ಲವೆ ೧೫ಕ್ಕಿಂತ ಹೆಚ್ಚಿಗೆ ಇರಕೂಡದು.

ಪ್ರಾಂತಿಕ ಸರಕಾರದವರು ೧೦೪ನೇ ಕಲಮಿನ ೧ನೇ ಉಪಕಲಮಿನ ಬ ಕಲಮಿನನ್ವಯ ಠರಾಯಿಸಬಹುದಾದ ಸ್ಥಳಗಳನ್ನು ಹೆಣ್ಣುಮಕ್ಕಳ, ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಜನಾಂಗಗಳ ಪ್ರತಿನಿಧಿಗಳ ಸಲುವಾಗಿ ಇಂಥ ಯಾವುದೇ ಪಂಚಾಯತಿಯಲ್ಲಿ ಕಾದಿಡಬೇಕು.

ಆದರೆ ಗೊತ್ತು ಪಡಿಸುವದೇನಂದರೆ, ಗ್ರಾಮದಲ್ಲಿಯ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಜನಾಂಗಗಳ ಜನಸಂಖ್ಯೆಯ ಪ್ರಮಾಣದ ಮೇಲಿಂದ ಇಂಥ ಜಾತಿಗಳ ಮತ್ತು ಜನಾಂಗಗಳ ಸಲುವಾಗಿ ಸ್ಥಳಗಳನ್ನು ಕಾಯ್ದಿಡುವದು ಅವಶ್ಯವೆಂದು ಪ್ರಾಂತಿಕ ಸರಕಾರದವರು ಅಭಿಪ್ರಾಯ ಪಡದ ಹೊರ್ತು ಇಂಥವರ ಸಲುವಾಗಿ ಯಾವುದೇ ಸ್ಥಳವನ್ನು ಕಾದಿಡತಕ್ಕದ್ದಲ್ಲ.

(೧ಅ) ೧ನೇ ಉಪಕಲಮಿನಲ್ಲಿ ಏನೇ ವಿಷಯವಿದ್ದರೂ ೧೦೪ನೇ ಕಲಮಿನ ೧ನೇ ಉಪಕಲಮಿನ [ಬ] ಕಲಮಿನನ್ವಯ ಗೊತ್ತುಮಾಡಲ್ಪಟ್ಟ ಸ್ತ್ರೀಯರ ಪರಿಶಿಷ್ಟ ಜಾತಿಗಳ ಮತ್ತು ಜನಾಂಗಗಳ ಸಲುವಾಗಿ ಸ್ಥಳಗಳನ್ನು ಕಾದಿಡುವ ಪದ್ಧತಿಯು ಭಾರತ ರಾಜ್ಯ ಘಟನೆಯು ಜಾರಿಯಲ್ಲಿ ಬಂದ ೧೦ ವರ್ಷಗಳ ನಂತರ ರದ್ದಾಗುವದು.

ಆದರೆ ಈ ಕಲಮಿನಲ್ಲಿಯ ಯಾವುದೇ ವಿಷಯವು ಹೀಗೆ ಕಾದಿಡಲ್ಪಟ್ಟ ಸ್ಥಳಗಳಲ್ಲಿಯ ಯಾವುದೇ ಸ್ಥಳಕ್ಕಾಗಿ ಚುನಾಯಿಸಲ್ಪಟ್ಟ ವ್ಯಕ್ತಿಯು ಅವನು ಇಲ್ಲವೆ ಅವಳು ಯಾವ ಅಧಿಕಾರಾವಧಿಯವರೆಗೆ ಕ್ರಮಬದ್ಧವಾಗಿ ಚುನಾಯಿ

ಸಲ್ಪಟ್ಟಿರುವನೋ (ಳೋ) ಆ ಅಧಿಕಾರಾವಧಿಯಲ್ಲಿ ಹೀಗೆ ಸ್ಥಳಗಳನ್ನು ಕಾದಿಡುವ ಪದ್ಧತಿಯು ರದ್ದಾಯಿತೆಂಬ ಒಂದೇ ಕಾರಣದಿಂದ ಸಭಾಸದನಾ (ಳಾ) ಗಿ ಉಳಿಯಲು ಅಪಾತ್ರನ (ಳ) ನ್ನಾಗಿ ಮಾಡಲಾರದು.

(೨) ಕಲೆಕ್ಟರನು ಜಿಲ್ಹಾ ಲೋಕಲ್ ಬೋರ್ಡಿನೊಡನೆ ಆಲೋಚನೆ ಮಾಡಿದನಂತರ ಯಾವುದೇ ಪಂಚಾಯತದ ಚುನಾಯಿಸಲ್ಪಟ್ಟ ಸಭಾಸದರ ಸಂಖ್ಯೆಯು ೭ ಕ್ಕಿಂತ ಹೆಚ್ಚಿರಬೇಕೆಂದು ನಿರ್ಣಯಿಸಿದಾಗ್ಗೆ ೭ ಕ್ಕಿಂತ ಹೆಚ್ಚು ಜನ ಸಭಾಸದರನ್ನು ಚುನಾಯಿಸಲಿಕ್ಕೆ ತಪ್ಪಿದಲ್ಲಿ ಅದರಿಂದ ಪಂಚಾಯತದ ರಚನೆಗೆ ಬಾಧೆ ಬರಲಾರದು.

(೩) ಯಾವುದೇ ಕಾರಣದ ಮೂಲಕ ಅಧಿಕಾರವನ್ನು ಸ್ವೀಕರಿಸಲು ಅರ್ಹತೆಯುಳ್ಳ ಜನರು ಚುನಾವಣೆಯಲ್ಲಿ ಅವಶ್ಯ ಸಂಖ್ಯೆಯಲ್ಲಿ ಚುನಾಯಿಸಲ್ಪಡದಿದ್ದರೆ ಜಿಲ್ಹಾ ಲೋಕಲ್ ಬೋರ್ಡಿನ ಸ್ಥಾಯಿ ಸಮಿತಿಯವರು, ಜಿಲ್ಹಾ ಕಲೆಕ್ಟರರು ಚುನಾಯಿಸಲ್ಪಟ್ಟ ಸದಸ್ಯರ ಹೆಸರುಗಳನ್ನು ಠರಾಯಿಸಿದ ರೀತಿಯಲ್ಲಿ ಪ್ರಸಿದ್ಧಿಸಿದ ತಾರೀಖಿನಿಂದ ೬ವಾರಗಳೊಳಗೆ, ಚುನಾಯಿಸಲ್ಪಡಲಿಕ್ಕೆ ಅರ್ಹರಾಗಿರಬಹುದಾದಂಥ ಅವಶ್ಯವಿರುವ ಸಂಖ್ಯೆಯಷ್ಟು ಜನರನ್ನು ನೇಮಿಸಬೇಕು. ಜಿಲ್ಹಾ ಲೋಕಲ್ ಬೋರ್ಡಿನ ಸ್ಥಾಯಿಸಮಿತಿಯವರು ಇಂಥ ಎಲ್ಲ ಅಥವಾ ಯಾವುದೇ ನೇಮಣೂಕನ್ನು ನಿರ್ದಿಷ್ಟಪಡಿಸಿದ ಅವಧಿಯಲ್ಲಿ ಮಾಡಲಿಕ್ಕೆ ತಪ್ಪಿದರೆ ಕಲೆಕ್ಟರನು ಇಂಥ ನೇಮಣೂಕಗಳನ್ನು ಮಾಡಬೇಕು, ಮತ್ತು ಹೀಗೆ ನೇಮಿಸಲ್ಪಟ್ಟ ಜನರು ೧ನೇ ಉಪಕಲಮಿನನ್ವಯ ಯೋಗ್ಯರೀತಿಯಿಂದ ಚುನಾಯಿಸಲ್ಪಟ್ಟವರೆಂದು ತಿಳಿಯಬೇಕು.

## ೭. ಚುನಾವಣೆ

(೧) ಪಂಚಾಯತದ ಸಭಾಸದರ ಚುನಾವಣೆಯು ಕಲೆಕ್ಟರನು ಈ ಬಗ್ಗೆ ನೇಮಿಸಬಹುದಾದ ತಾರೀಖಿನ ದಿನ ನಡೆಯಬೇಕು.

(೨) ಗ್ರಾಮದಲ್ಲಿ ವಾಡಿಕೆಯಾಗಿ ವಾಸಮಾಡುವ ಯಾವತ್ತು ಪ್ರೌಢರು ಮತ್ತು ಆ ಗ್ರಾಮದಲ್ಲಿ ಮನೆಪಟ್ಟಿ ಆಕರಿಸಲ್ಪಟ್ಟ ಮನೆಯ ಒಡೆಯ ರಾಗಿರುವ ಇಲ್ಲವೆ ೧೯೨೩ ನೇ ಇಸ್ವಿಯ ಮುಂಬಯಿ ಲೋಕಲ್ ಬೋರ್ಡು

ಗಳ ಕಾನೂನಿನ ೯೩ ನೇ ಕಲಮಿನನ್ವಯ ಕರ ಆಕರಿಸಲ್ಪಟ್ಟ ಭೂ-ಮಾಲಿಕ ರಾಗಿರುವ ಯಾವತ್ತೂ ಪ್ರೌಢರು ಇಂಥ ಚುನಾವಣೆಯಲ್ಲಿ ಮತಕೊಡಲು ಹಕ್ಕುಳ್ಳವರಾಗುವರು.

ಇಂಥ ಚುನಾವಣೆಯು ಠರಾಯಿಸಲ್ಪಟ್ಟ ರೀತಿಯಲ್ಲಿ ಜರುಗತಕ್ಕದ್ದು.

(೩) ಕಲೆಕ್ಟರನು ತನಗೆ ಅವಶ್ಯ ತೋರಬಹುದಾದ ವಿಚಾರಣೆ ಮಾಡಿದ ನಂತರ ವಿವಾದದ ಅಥವಾ ಸಂಶಯದ ಯಾವುದೇ ಸಂಗತಿಯಲ್ಲಿ ಇಂಥ ಚುನಾವಣೆಯಲ್ಲಿ ಮತ ಕೊಡಲಿಕ್ಕೆ ಯಾವನು ಅರ್ಹನೆಂಬುದನ್ನು ನಿರ್ಣಯಿಸಬೇಕು.

**೮: ಅಪಾತ್ರತೆಗಳು.**

ಯಾವನಾದರೂ,

ಅ] ೨೧ ವರ್ಷಗಳಿಗಿಂತ ಕಡಿಮೆ ವಯಸ್ಸಿನವನಿದ್ದರೆ, ಅಥವಾ

ಬ] ವಾಡಿಕೆಯಾಗಿ ಆ ಗ್ರಾಮದಲ್ಲಿ ವಾಸಮಾಡುತ್ತಿರದಿದ್ದರೆ, ಅಥವಾ

ಕ] ನೈತಿಕ ಅದಃಪತನವುಳ್ಳದ್ದಾಗಿರುವ ಮತ್ತು ಫೌಜದಾರಿ ಕೋರ್ಟಿ ನಿಂದ ೬ ತಿಂಗಳಿಗಿಂತ ಅಧಿಕ ಅವಧಿಯ (ಕಾರಾಗೃಹದ) ಶಿಕ್ಷೆ ಯಾಗತಕ್ಕ ಅಥವಾ ಜೀವಾವಧಿ ಶಿಕ್ಷೆಯಾಗತಕ್ಕ ಯಾವುದೊಂದು ಅಪರಾಧದ ಬಗ್ಗೆ ಕಾರಾಗೃಹದ ಅಥವಾ ಫಟಕಿ ಶಿಕ್ಷೆ ಕೊಡಲ್ಪಟ್ಟಿದ್ದರೆ, ಇಂಥ ಶಿಕ್ಷೆಯು ಆಮೇಲೆ ಬದಲಿಸಲ್ಪಡದಿದ್ದರೆ ಅಥವಾ ಮಾಫ ಮಾಡಲ್ಪಡದಿದ್ದರೆ ಇಂಥ ಶಿಕ್ಷೆಯು ಮುಗಿಯುವವರೆಗೆ ಮತ್ತು ಇಂಥ ಶಿಕ್ಷೆಯ ಮೂಲಕ ಬರಬಹು ದಾದ ಅಪಾತ್ರತೆಯು ಪ್ರಾಂತಿಕ ಸರಕಾರದವರಿಗೆ ಈ ಮೂಲಕ ಮಾಡಲಿಕ್ಕೆ ಅಧಿಕಾರವಿರುವ ಆಜ್ಞೆಯಿಂದ ತೆಗೆದು ಹಾಕಲ್ಪಡದಿದ್ದರೆ, ಅಥವಾ

ಡ] ಯೋಗ್ಯ ಕೋರ್ಟಿನಿಂದ ಭ್ರಮಿಷ್ಟನೆಂದು ಠರಾಯಿಸಲ್ಪಟ್ಟಿದ್ದರೆ, ಅಥವಾ

ಈ] ನಾದಾರನೆಂದು ಠರಾಯಿಸಲ್ಪಟ್ಟು ಋಣಮುಕ್ತನಾಗಿರದಿದ್ದರೆ, ಅಥವಾ

ಫ] ೨೧ನೇ ಕಲಮಿನನ್ವಯ ಅಧಿಕಾರದಿಂದ ತೆಗೆದು ಹಾಕಲ್ಪಟ್ಟ ತಾರೀಖಿನಿಂದ ೫ ವರ್ಷಗಳು ಗತಿಸದಿದ್ದರೆ, ಮತ್ತು ಹೀಗೆ ಅಧಿಕಾರದಿಂದ ತೆಗೆದುಹಾಕಲ್ಪಟ್ಟದ್ದರಿಂದುಂಟಾದ ಅವನ ಅಪಾತ್ರತೆಯು ಹೀಗೆ ತೆಗೆದು ಹಾಕಲ್ಪಟ್ಟ ತಾರೀಖಿನಿಂದ ಒಂದು ವರ್ಷವು ಗತಿಸಿದ ನಂತರ ಜಿಲ್ಲಾ ಲೋಕಲ್ ಬೋರ್ಡಿಗೆ ಇದರ ಮೂಲಕ ಮಾಡಲಿಕ್ಕೆ ಅಧಿಕಾರವಿರುವ ಆಜ್ಞೆಯಿಂದ ತೆಗೆದು ಹಾಕಲ್ಪಡದಿದ್ದರೆ ಅಥವಾ

ಗ] ಪಂಚಾಯತದ ಆಧೀನದಲ್ಲಿರುವ ಅಥವಾ ಅದು ಕೊಡಬಹು ದಾದ ಯಾವುದೇ ನಂಬಳದ ಅಧಿಕಾರ ಸ್ಥಾನವನ್ನು ಅಥವಾ ಲಾಭದ ಸ್ಥಳ ವನ್ನು ಇಂಥ ಅಧಿಕಾರದ ಅಥವಾ ಲಾಭದ ಸ್ಥಳವನ್ನು ಧಾರಣ ಮಾಡುತ್ತಿ ದ್ದಾಗ ಧಾರಣ ಮಾಡಿದರೆ ಅಥವಾ

ಹ] ಪಂಚಾಯತಿಯ ಆಜ್ಞೆಯ ಮೇರೆಗೆ ಮಾಡಿದ ಯಾವುದೇ ಕೆಲಸದಲ್ಲಿ ಅಥವಾ ಪಂಚಾಯತಿಯಕೂಡ ಇಲ್ಲವೆ ಪಂಚಾಯತದ ನೇತೃತ್ವ ದಲ್ಲಿ ಅಥವಾ ಅದರಿಂದ ಇಲ್ಲವೆ ಅದರ ವತಿಯಿಂದ ಮಾಡಿದ ಯಾವುದೇ ಕರಾರಿನಲ್ಲಿ ಅಥವಾ ನೌಕರಿಯಲ್ಲಿ ಯಾರ ಅಥವಾ ಯಾವನ ಪಾಲುಗಾರನ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷವಾದ ಯಾವುದೇ ಪಾಲು ಅಥವಾ ಹಿತಸಂಬಂಧ ವಿದ್ದರೆ ಅಥವಾ

ಇ] ಪಂಚಾಯತಕ್ಕೆ ಕೊಡತಕ್ಕ ಯಾವುದೇ ಕರ ಅಥವಾ ಫೀಯನ್ನು ಸದರೀ ಮನುಷ್ಯನಿಗೆ ೯೧ ನೇ ಕಲಮಿನ ೧ ನೇ ಉಪಕಲಮಿನನ್ವಯ ಸಾದರ ಮಾಡಿದ ಬಿಲ್ಲಿನಲ್ಲಿ ಇಂಥ ಕರದ ಅಥವಾ ಫೀ ರಕಮು ಕೊಡಲ್ಪಡ ತಕ್ಕದ್ದೆಂದು ಹೇಳಿದ ತಾರೀಖಿನಿಂದ ಅಥವಾ ಅದಕ್ಕಿಂತ ಮೊದಲು ೩ ತಿಂಗಳು ಗಳೊಳಗೆ, ಪಂಚಾಯತಕ್ಕೆ ಯಾವುದೇ ಕರ ಅಥವಾ ಫೀ ಯನ್ನು ಕೊಡಲಿಕ್ಕೆ ತಪ್ಪಿದರೆ ಅಥವಾ

ಜ] ಸರಕಾರದ ನೌಕರನಾಗಿದ್ದರೆ ಅಥವಾ ಯಾವುದೇ ಸ್ಥಾನಿಕ ಅಧಿಕಾರಿ ಸಂಘದ ನೌಕರನಾಗಿದ್ದರೆ,

ಅವನು ಪಂಚಾಯತದ ಸಭಾಸದನಾಗಲಾರನು ಅಥವಾ ಸಭಾಸದ ನಾಗಿ ಉಳಿಯಲಾರನು.

ವಿವರಣೆ [೧] ಯಾವುದೇ ವ್ಯಕ್ತಿಯು ಯಾವುದೇ ಸಂಸ್ಥಾಪಿತ ಅಥವಾ ನೊಂದಾಯಿಸಲ್ಪಟ್ಟ ಕಂಪನಿಯ ಅಥವಾ ೧೯೧೨ನೇ ಇಸ್ವಿಯ ಮುಂಬಯಿ ಸಹಕಾರಿ ಸಂಘಗಳ ಕಾನೂನಿನ್ವಯ ಅಥವಾ ೧೯೨೫ ನೇ ಇಸ್ವಿಯ ಮುಂಬಯಿ ಸಹಕಾರಿ ಸಂಘಗಳ ಕಾನೂನಿನ್ವಯ ನೊಂದಾಯಿಸಲ್ಪಟ್ಟ ಯಾವುದೊಂದು ಸಹಕಾರೀ ಸಂಘದ ಶೇಅರ [ಹಿಸೆ] ಧಾರಣ ಮಾಡುವವನು ಅಥವಾ ಸದಸ್ಯನಿರುತ್ತಾನೆಂಬ ಕಾರಣದಿಂದ ಯಾವನೊಬ್ಬ ಮನುಷ್ಯನು ಸದರ ಪಂಚಾಯತದ ನಡುವೆ ಆದ ಯಾವುದೇ ಕರಾರಿನಲ್ಲಿ ಹಿತ ಸಂಬಂಧ ಪುಕೃವನಿರುತ್ತಾನೆಂದು ತಿಳಿಯಲ್ಪಡಬಾರದು.

ವಿವರಣೆ [೨] ಈ ಕಲಮಿನ [ಜ] ರಕಮಿನ ಕಾರಣದಿಂದ, ಕೆಲಸ ಮಾಡುವ ಮುಲ್ಕೀ ಅಥವಾ ಪೋಲಿಸ ಪಾಟೀಲನ ಕೆಲಸಮಾಡುವವನು ಸರಕಾರಿ ನೌಕರದಾರರೆಂದು ತಿಳಿಯಲ್ಪಡತಕ್ಕವಲ್ಲ.

**೯. ಕಲೇಕ್ಟರನು ಚುನಾವಣಿಗಳ ಕ್ರಮಬದ್ಧತೆಯನ್ನು ನಿರ್ಧರಿಸುವುದು.**

(೧) ೮ನೇ ಕಲಮಿನ ಠರಾವುಗಳ ವಿರುದ್ಧವಾಗಿ ಯಾವನೇ ಸಭಾಸದನು ಚುನಾಯಿಸಲ್ಪಟ್ಟಿದ್ದನೆಂದು ಅಥವಾ ಇಂಥ ಚುನಾವಣಿಯ ಸಂಬಂಧದಲ್ಲಿ ಯಾವುದೇ ಭ್ರಷ್ಟ [ಲಂಚಗಾರಿಕೆಯ] ಅಥವಾ ಅಕ್ರಮ ಕೃತಿಯು ಮಾಡಲ್ಪಟ್ಟಿದ್ದರೆ, ಅಥವಾ ೧೧೮ ನೇ ಕಲಮಿನ ೧ ನೇ ಉಪಕಲಮಿನ [ಕ] ರಕಮಿನನ್ವಯ ಮಾಡಲ್ಪಟ್ಟ ನಿಯಮಗಳನ್ನು ಪಾಲಿಸುವಲ್ಲಿ ಯಾವನೇ ಅಧಿಕಾರಿಯಿಂದ ಪ್ರಮಾದವಾದಲ್ಲಿ ಮತ್ತು ಇಂಥ ಅಕ್ರಮತೆಯಿಂದ ಭ್ರಷ್ಟ ಕೃತಿಯಿಂದ, ಗೈರ ಶಿಸ್ತಿನಿಂದ ಅಥವಾ ಪ್ರಮಾದದಿಂದ ಸದರೀ ಚುನಾವಣಿಯ ಪರಿಣಾಮಕ್ಕೆ ವಿಶೇಷ ಬಾಧೆಯುಂಟಾಗಿದೆಯೆಂದು, ತನಗೆ ಅವಶ್ಯ ತೋರಿದ ವಿಚಾರಣೆಯನಂತರ ಕಲೆಕ್ಟರನಿಗೆ ತೃಪ್ತಿಯಾದರೆ, ಅವನು ೧ ಅ ಉಪ ಕಲಮಿಗೆ ಒಳಪಟ್ಟು ಸದರೀ ಸಭಾಸದನ ಚುನಾವಣಿಯು ಅಕ್ರಮ ವಿರುವದೆಂದು ಜಾಹೀರ ಮಾಡಬಹುದು ಮತ್ತು ಇಂಥ ಜಾಹೀರ ನಾಮೆಯು ಕೊನೆಯದಾಗುವದು.

ಆದರೆ ಗೊತ್ತುಪಡಿಸುವದೇನಂದರೆ, ಯಾವನೇ ಸಭಾಸದನು ಭ್ರಷ್ಟ ಕೃತಿಯನ್ನು ಮಾಡಿರುತ್ತಾನೆಂದು ಕಲೆಕ್ಟರನಿಗೆ ತೃಪ್ತಿಯಾದಾಗ ಅವನು— ಇಂಥ ಭ್ರಷ್ಟಕೃತಿಯಿಂದ ಸದರೀ ಚುನಾವಣೆಯ ಮೇಲೆ ವಿಶೇಷ ಪರಿಣಾಮ ವಾಗಿರಲಿ ಅಥವಾ ಆಗದಿರಲಿ— ಇಂಥ ಸಭಾಸದನ ಚುನಾವಣೆಯು ಕಾಯಿದೇ ಶೀರ ಅಲ್ಲವೆಂದು ಠರಾಯಿಸಬೇಕು ಮತ್ತು ಇಂಥ ಠರಾವು ಕೊನೆಯದಾಗು ವದು.

**ವಿವರಣೆ**— ಈ ಉಪಕಲಮಿನಲ್ಲಿಯ "ಪ್ರಮಾದ" ಈ ಸಂಜ್ಞೆಯಲ್ಲಿ ೧೦೮ ನೇ ಕಲಮಿನ ೧ ನೇ ಉಪಕಲಮಿನ ಕ ರಕಮಿನನ್ವಯ ಮಾಡಲ್ಪಟ್ಟ ನಿಯಮಗಳ ಯಾವುದೇ ಉಲ್ಲಂಘಿಸಿ ಇಲ್ಲವೆ ಅವುಗಳನ್ನು ಪಾಲಿಸುವದರಲ್ಲಿ ಆದ ಚ್ಯುತಿ ಅಥವಾ ಅವುಗಳನ್ನು ಪಾಲಿಸದಿರುವುದು ಸಮಾವೇಶ ವಾಗು ತ್ತದೆ.

(೧೮) ೧ ನೇ ಉಪಕಲಮು ಯಾವ ಪ್ರಕರ್ಣಕ್ಕೆ ಅನ್ವಯಿಸುವ ದಿಲ್ಲವೋ ಆ ಪ್ರಕರ್ಣದಲ್ಲಿ ಚುನಾವಣೆಯ ಕ್ರಮ ಬದ್ಧತೆಯಬಗ್ಗೆ ಇಬ್ಬರು ಅಥವಾ ಇಬ್ಬರಿಗಿಂತ ಅಧಿಕ ಉಮೇದವಾರರ ನಡುವೆ ವಾದ ಹುಟ್ಟಿದರೆ, ಕಲೆಕ್ಟರನು ಪ್ರತಿಯೊಬ್ಬ ಉಮೇದವಾರನಿಗೆ ಬಿದ್ದ ಮತಗಳನ್ನು ಪರಿಶೀಲಿಸಿ ಮತ್ತು ಅವುಗಳ ಎಣಿಕೆಮಾಡಿ, ಯಾವ ಉಮೇದವಾರನಿಗೆ ಕ್ರಮಬದ್ಧವಾಗಿ ಬಿದ್ದ ಮತಗಳ ಸಂಖ್ಯೆಯು ಹೆಚ್ಚಿನದಿರುವದೋ ಅವನು ಯೋಗ್ಯರೀತಿಯಿಂದ ಚುನಾಯಿಸಲ್ಪಟ್ಟಿರುವನೆಂದು ಜಾಹೀರ ಮಾಡಬೇಕು. ಆದರೆ, ಇಂಥ ಎಣಿಕೆ ಮಾಡುವ ಉದ್ದೇಶಕ್ಕಾಗಿ, ಯಾವುದೇ ಮತವನ್ನು ಕೊಡುವಾಗ್ಗೆ ಇಲ್ಲವೆ ದೊರಕಿಸುವಾಗ್ಗೆ ಯಾವುದೇ ಜ್ಞಾತ ಅಥವಾ ಅಜ್ಞಾತ ವ್ಯಕ್ತಿಯಿಂದ ಭ್ರಷ್ಟತನದ ಕೃತಿಯಾಗಿದೆಯೆಂದು ಕಲೆಕ್ಟರನಿಗೆ ಕಂಡು ಬಂದರೆ, ಅಂಥ ಮತವನ್ನು ಗಣನೆಯಲ್ಲಿ ಹಿಡಿಯಬಾರದು.

ಮತ್ತು ಗೊತ್ತುಪಡಿಸುವದೇನಂದರೆ, ಹೀಗೆ ಎಣಿಕೆಯಾದನಂತರ ಯಾರೇ ಉಮೇದವಾರರಿಗೆ ಸಮಾನ ಮತಗಳು ದೊರೆತದ್ದು ಕಂಡುಬಂದರೆ ಮತ್ತು ಒಂದು ಅಧಿಕ ಮತದಿಂದ ಉಮೇದವಾರರಲ್ಲಿ ಒಬ್ಬನು ಚುನಾಯಿತ ನಾದನೆಂದು ಸಾರಲು ಬರುತ್ತಿದ್ದರೆ, ಕಲೆಕ್ಟರನ ಸಮಕ್ಷಮ ಅವನು

ಠರಾಯಿಸಬಹುದಾದ ರೀತಿಯಿಂದ ಚೀಟಿಯನ್ನು ಹಾಕಿ, ಪ್ರಸಂಗಾನುಸಾರ ಆರಿಸಿದ ಉಮೇದವಾರ ಅಥವಾ ಉಮೇದವಾರರು ದೊರಕಿಸಿದರೆಂದು ಕಂಡುಬಂದ ಕ್ರಮಬದ್ಧ ಮತಗಳಿಗೆ ಒಂದು ಅಧಿಕ ಮತ ಕೂಡಿಸಬೇಕು.

(೩) ಯಾವ ಮನುಷ್ಯನು,

ಅ] ಯಾವನೇ ಮತದಾರನನ್ನು ಯಾವನೇ ಉಮೇದವಾರನಿಗೆ ಮತ ಕೊಡುವಂತೆ ಅಥವಾ ಕೊಡದಿರುವಂತೆ ಮನವಲಿಸುವ ಹೇತುವಿನಿಂದ, ಯಾವನೇ ಮನುಷ್ಯನಿಗೆ ಯಾವುದೇ ಹಣ ಅಥವಾ ಬೆಲೆಯುಳ್ಳ ಪ್ರತಿಫಲ ವಸ್ತು ಕೊಡಮಾಡುವನೋ ಅಥವಾ ಕೊಡುವನೋ ಅಥವಾ ಅವನಿಗೆ ವ್ಯಕ್ತಿಶಃ ಲಾಭಮಾಡಿ ಕೊಡುವೆನೆಂದು ಯಾವುದೇ ವಚನವನ್ನು ಕೊಡುವನೋ ಅಥವಾ ಅವನಿಗೆ ಹಾನಿಯುಂಟುಮಾಡುವ ಅಂಜಿಕೆಯನ್ನು ತೋರಿಸುವನೋ, ಅಥವಾ

ಬ] ಮತವನ್ನು ಕೊಡುವ ಮನುಷ್ಯನಲ್ಲದ, ಒಬ್ಬ ಮತದಾರನ ಹೆಸರಿನಲ್ಲಿ ಇಂಥ ಮತವನ್ನು ಕೊಡುವನೋ, ಮತ ಸಂಗ್ರಹಿಸುವನೋ, ಅಥವಾ ಮತಕೊಡುವಂತೆ ಸಹಾಯ ಮಾಡುವನೋ,

ಅವನು ಭ್ರಷ್ಟ (ಲಂಚಗಾರಿಕೆಯ) ಕೃತಿಯನ್ನು ಮಾಡಿದನೆಂದು ತಿಳಿಯಬೇಕು.

**ವಿವರಣೆ:**— (೧) ಯಾವುದೊಂದು ಭ್ರಷ್ಟ ಕೃತ್ಯವು ಯಾವನೊಬ್ಬ ಉಮೇದವಾರನಿಂದ ಬುದ್ಧಿಪೂರ್ವಕವಾಗಿ ಮತ್ತು ಅವನ ಸಮ್ಮತಿಯಿಂದ ಮಾಡಲ್ಪಟ್ಟರೆ, ಅಥವಾ ಸದರೀ ಚುನಾವಣೆಯ ಸಂಬಂಧದಲ್ಲಿ ಇಂಥ ಉಮೇದವಾರನ ಸಾಮಾನ್ಯ ಅಥವಾ ವಿಶೇಷ ಅಧಿಕಾರದನ್ವಯ ಕೆಲಸ ಮಾಡುವ ಮನುಷ್ಯನಿಂದ ಮಾಡಲ್ಪಟ್ಟಿದ್ದರೆ, ಅದು ಸದರೀ ಉಮೇದವಾರನಿಂದ ಮಾಡಲ್ಪಟ್ಟಿರುತ್ತದೆಂದು ತಿಳಿಯಬೇಕು.

**ವಿವರಣೆ:**— (೨) "ವೈಯುಕ್ತಲಾಭದ ವಚನವು"

(೧) ಎಂಬ ಸಂಜ್ಞೆಯಲ್ಲಿ ಪಂಚಾಯತದಮುಂದೆ ವಿಚಾರಣೆಗೆ ಬರಬಹುದಾದ ಯಾವುದೇ ವಿಶಿಷ್ಟ ಯೋಜನೆಗೆ ಅನುಕೂಲವಾಗಿ ಇಲ್ಲವೆ ತದ್ವಿರುದ್ಧ ಮತ ಕೊಡಲಿಕ್ಕೆ ಕೊಟ್ಟ ವಚನವು ಸೇರುವದಿಲ್ಲ, ಆದರೆ

(೨) ಅದಕ್ಕೆ ಒಳಪಟ್ಟು, ಸದರೀ ಮನುಷ್ಯನ ಸ್ವಂತದ, ಅಥವಾ ಅವನು ಯಾರ ಹಿತವನ್ನು ಇಚ್ಛಿಸುವನೋ ಅವನ, ಹಿತಾರ್ಥದಬಗ್ಗೆ ಕೊಟ್ಟ ವಚನವು ಸದರ ಸಂಜ್ಞೆಯಲ್ಲಿ ಸೇರುತ್ತದೆ.

## (೯ ಅ) ಅಪಾತ್ರತೆಯುಂಟಾದರೆ ಜಾಹೀರ ಮಾಡುವದು.

ತನಗೆ ಅವಶ್ಯತೋರುವ ವಿಚಾರಣೆಯನ್ನು ಮಾಡಿದ ನಂತರ ಮತ್ತು ಸಂಬಂಧಪಟ್ಟ ಸಭಾಸದನು ಹೇಳಬೇಕಾದದ್ದನ್ನು ಹೇಳಿದ್ದಕ್ಕೆ ಅವನಿಗೆ ಸಂಧಿಯನ್ನು ಕೊಟ್ಟನಂತರ, ಕಲೆಕ್ಟರನಿಗೆ, ಯಾವುದೇ ಕಾಲಕ್ಕೆ—

ಅ] ೬ ನೇ ಕಲಮಿನ ೩ ನೇ ಉಪಕಲಮಿನನ್ವಯ ನೇಮಿಸಲ್ಪಟ್ಟ ಸಭಾಸದನು ತನ್ನ ನೇಮಣೂಕಿಯ ಕಾಲಕ್ಕೆ ೮ ನೇ ಕಲಮಿನಲ್ಲಿ ಹೇಳಿದ ಅಪಾತ್ರತೆಗಳಪೈಕಿ ಯಾವುದೊಂದು ಅಪಾತ್ರತೆಗೆ ಒಳಪಟ್ಟಿರುತ್ತಾನೆಂದು, ಅಥವಾ

ಬ] ಯಾವನೊಬ್ಬ ಚುನಾಯಿಸಲ್ಪಟ್ಟ ಅಥವಾ ನೇಮಿಸಲ್ಪಟ್ಟ ಸಭಾಸದನು ತಾನು ಚುನಾಯಿಸಲ್ಪಟ್ಟ ನಂತರ ಅಥವಾ ನೇಮಿಸಲ್ಪಟ್ಟ ನಂತರ ೮ ನೇ ಕಲಮಿನಲ್ಲಿ ಹೇಳಿದ ಯಾವುದೇ ಅಪಾತ್ರತೆಗೆ ಒಳಪಟ್ಟಿರುತ್ತಾನೆಂದು, ತೃಪ್ತಿಯಾದರೆ, ಅವನು ಪ್ರಸಂಗಾನುಸಾರ ಇಂಥ ಸಭಾಸದನ ನೇಮಣೂಕು ಅಕ್ರಮವಿರುವದೆಂದು ಅಥವಾ ಇಂಥ ಸಭಾಸದನು ಸದರೀ ಪಂಚಾಯತದ ಸಭಾಸದನೆಂದು ಮಾಲಕಿ ಕೆಲಸಮಾಡತಕ್ಕದಲ್ಲ ವೆಂದು ಜಾಹೀರ ಮಾಡತಕ್ಕದ್ದು. ಇಂಥ ಜಾಹೀರನಾಮೆಯು ಕೊನೆಯ ದಾಗುವದು.

## ೧೦. ಚುನಾವಣೆಯು ಅಕ್ರಮವಾದರೆ ಹೊಸ ಚುನಾವಣೆ ಮಾಡೋಣ.

ಕಲೆಕ್ಟರನು ಯಾವನೇ ಸಭಾಸದನ ಚುನಾವಣೆಯು ಅಥವಾ ನೇಮಣೂಕು ಅಕ್ರಮವಿರುವದೆಂದು ಅಥವಾ ಯಾವನೇ ಸಭಾಸದನು ಪ್ರಸಂಗಾನುಸಾರ ೯ ನೇ ಇಲ್ಲವೆ ೯ಅ ಕಲಮಿನನ್ವಯ ಯಾವದೊಂದು ಪಂಚಾಯತದ ಸಭಾಸದನಾಗಿ ಇರಲಾರನೆಂದು ಜಾಹೀರ ಮಾಡಿದರೆ, ಹೀಗೆ ಬರಿದಾದ

ಸ್ಥಳವಬಗ್ಗೆ ಈ ಕಾನೂನಿನ ರಾವುಗಳ ಪ್ರಕಾರ ಹೊಸ ಚುನಾವಣೆ ಅಥವಾ ನೇಮಣೂಕಿಯನ್ನು ಮಾಡಬೇಕು.

## ೧೧. ಚುನಾಯಿಸಲ್ಪಟ್ಟ ಸಭಾಸದರ ಅಧಿಕಾರಾವಧಿ.

(೧) ಪಂಚಾಯತದ ಸಭಾಸದರು ಈ ಕಾನೂನಿನಲ್ಲಿ ಇತರ ರೀತಿಯಿಂದ ರಾಯಿಸಿಪ್ಪನ್ನು ಹೊರ್ತುಪಡಿಸಿ ಮೂರು ವರ್ಷಗಳ ಅವಧಿಯುವರೆಗೆ ಅಧಿಕಾರವವದಲ್ಲಿರುವರು.

(೨) ಕಲೆಕ್ಟರನು ಲೇಖಿ ಆಜ್ಞೆಯನ್ನು ಕೊಟ್ಟು ಅದರಲ್ಲಿ ಬರೆದ ಕಾರಣಗಳಿಗಾಗಿ ಸದರೀ ಅವಧಿಯನ್ನು ಒಟ್ಟು ೫ ವರ್ಷಕ್ಕಿಂತ ಹೆಚ್ಚಿಲ್ಲದ ಅವಧಿಯವರೆಗೆ ಬೆಳಿಸಬಹುದು. ಇಂಥ ಯಾವುದೇ ಆಜ್ಞೆಯು ಕಲೆಕ್ಟರನು ಒಪ್ಪಬಹುದಾದ ರೀತಿಯಲ್ಲಿ ಪ್ರಸಿದ್ಧಿಸಲ್ಪಡಬೇಕು.

## ೧೨. ಅಧಿಕಾರಾವಧಿಯ ಪ್ರಾರಂಭ.

(೧) ಸಾಮಾನ್ಯ ಚುನಾವಣೆಯಲ್ಲಿ ಚುನಾಯಿಸಲ್ಪಟ್ಟ ಅಥವಾ ೬ ನೇ ಕಲಮಿನ ೩ ನೇ ಉಪಕಲಮಿನನ್ವಯ ನೇಮಿಸಲ್ಪಟ್ಟ ಸಭಾಸದರ ಅಧಿಕಾರಾವಧಿಯು ಪಂಚಾಯತದ ಮೊದಲನೇ ಸಭೆಯು ನೇರುವ ತಾರೀಖಿನಿಂದ ಪ್ರಾರಂಭವಾಗುತ್ತದೆಂದು ತಿಳಿಯಬೇಕು. ಚುನಾಯಿಸಲ್ಪಟ್ಟ ಸಭಾಸದರ ಹೆಸರುಗಳು ೬ ನೇ ಕಲಮಿನನ್ವಯ ಪ್ರಸಿದ್ಧಿಸಲ್ಪಟ್ಟ ತಾರೀಖಿನಿಂದ ನಾಲ್ಕುವಾರ ಗಳೊಳಗಾಗಿರುವ, ಜಿಲ್ಹಾ ಲೋಕಲ್‌ಬೋರ್ಡಿನ ಅಧ್ಯಕ್ಷನಿಂದ ಗೊತ್ತುಪಡಿಸಿದ ದಿವಸ ಪಂಚಾಯತದ ಮೊದಲನೇ ಸಭೆಯು ಕೂಡಬೇಕು. ನಿರ್ದಿಷ್ಟಮಾಡಿದ ಅವಧಿಯೊಳಗೆ ಬೋರ್ಡಿನ ಅಧ್ಯಕ್ಷನು ಇಂಥ ತಾರೀಖನ್ನು ಗೊತ್ತುಮಾಡಲಿಕ್ಕೆ ತಪ್ಪಿದರೆ, ಕಲೆಕ್ಟರನು ಇಂಥ ತಾರೀಖನ್ನು ಗೊತ್ತುಮಾಡಬೇಕು.

(೨) ಹೊರಗೆ ಹೋಗುವ (ನಿವೃತ್ತರಾಗುವ) ಸಭಾಸದರ ಅಧಿಕಾರಾವಧಿಯು ಇಂಥ ಸಭೆಯ ಹಿಂದಿನ ದಿನದವರೆಗೆ ಇರುತ್ತದೆಂದೂ ಮತ್ತು ಆ ದಿನದಿಂದ ಮುಗಿಯುತ್ತದೆಂದೂ ತಿಳಿಯಬೇಕು.

**೧೩. ಸಭಾಸದರ ರಾಜೀನಾಮೆ.**

ಯಾವನೇ ಸಭಾಸದನು ತಾನು ರಾಜೀನಾಮೆ ಕೊಡುವನೆಂಬ ಬಗ್ಗೆ ಸರಪಂಚನಿಗೆ ಲೇಖಿ ನೋಟೀಸು ಕೊಟ್ಟು ತನ್ನ ಅಧಿಕಾರ ಸ್ಥಾನಕ್ಕೆ ರಾಜೀನಾಮೆ ಕೊಡಬಹುದು, ಮತ್ತು ಸದರೀ ರಾಜೀನಾಮೆಯು ಅದು ಸರಪಂಚನಿಗೆ ಮುಟ್ಟಿದ ತಾರೀಖಿನಿಂದ ಅಮಲಿನಲ್ಲಿ ಬರುವದು.

**೧೪. ಸರಪಂಚ ಮತ್ತು ಉಪಸರಪಂಚನ ಚುನಾವಣೆ.**

ಪ್ರತಿಯೊಂದು ಪಂಚಾಯತಕ್ಕೆ ಒಬ್ಬ ಸರಪಂಚನು ಅಧ್ಯಕ್ಷನಾಗಿರಬೇಕು ಮತ್ತು ಸಭಾಸದರು ಅವನನ್ನು ತಮ್ಮೊಳಗಿಂದ ಚುನಾಯಿಸಬೇಕು. ಇದಲ್ಲದೆ ಪಂಚಾಯತವು ತನ್ನ ಸಭಾಸದರೊಳಗಿಂದ ಒಬ್ಬನನ್ನು ಉಪಸರಪಂಚನನ್ನಾಗಿ ಚುನಾಯಿಸಬೇಕು.

**೧೫. ಸರಪಂಚನ ಮತ್ತು ಉಪಸರಪಂಚನ ಅಧಿಕಾರಾವಧಿ.**

ಈ ಕಾನೂನಿನಲ್ಲಿ ಇತರ ರೀತಿಯಿಂದ ಠರಾಯಿಸಿದ್ದನ್ನು ಹೊರ್ತುಪಡಿಸಿ ಸರಪಂಚನು ಅಥವಾ ಉಪಸರಪಂಚನು ಪಂಚಾಯತದ ಅಧಿಕಾರಾವಧಿಯ ವರೆಗೆ ಅಧಿಕಾರಸ್ಥಾನದಲ್ಲಿರಬೇಕು.

**೧೬. ಹೊಸ ಸರಪಂಚನು ಚುನಾಯಿಸಲ್ಪಡುವವರೆಗೆ ಇದ್ದ ಸರಪಂಚನು ಚಾಲೂ ಕೆಲಸಗಳನ್ನು ಮಾಡುವದು.**

ಸರಪಂಚನು ತನ್ನ ಅಧಿಕಾರಾವಧಿಯು ಮುಗಿದ ಬಳಿಕ ಹೊಸ ಸರಪಂಚನು ಚುನಾಯಿಸಲ್ಪಡುವವರೆಗೆ ಮತ್ತು ಅವನು ಅಧಿಕಾರವನ್ನು ಸ್ವೀಕರಿಸುವವರೆಗೆ, ತನ್ನ ಅಧಿಕಾರದ ಚಾಲೂ ಕೆಲಸಗಳನ್ನು ಮಾಡುತ್ತಿರಬೇಕು.

**೧೭. ಪಂಚಾಯತವು ಸ್ಥಾಪಿಸಲ್ಪಟ್ಟನಂತರ ಸರಪಂಚನ ಚುನಾವಣೆ ಇತ್ಯಾದಿ.**

(೧) ಈ ಕಾನೂನಿನನ್ವಯ ಪಂಚಾಯತವು ಮೊದಲಿನಸಾರೆ ಸ್ಥಾಪಿಸಲ್ಪಟ್ಟಮೇಲೆ ಅಥವಾ ಅದು ೧೦೨ ನೇ ಅಥವಾ ೧೦೩ ನೇ ಕಲಮಿನನ್ವಯ ಪುನಃ ರಚಿಸಲ್ಪಟ್ಟಮೇಲೆ ಅಥವಾ ಸ್ಥಾಪಿಸಲ್ಪಟ್ಟಮೇಲೆ, ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು ೧೨ ನೇ ಕಲಮಿನ ೧ ನೇ ಉಪಕಲಮಿ

ನನ್ವಯ ಠರಾಯಿಸಲ್ಪಟ್ಟ ತಾರೀಖಿನ ದಿವಸ ಒಂದು ಸಭೆಯನ್ನು ಕರೆಯ ಬೇಕು. ಮತ್ತು ಅವನು ಆ ಸಭೆಯ ಅಧ್ಯಕ್ಷ ನಾಗಬೇಕು. ಇಲ್ಲವೆ ಪಂಚಾಯತದ ಸಭಾಸದನಲ್ಲದ ಒಬ್ಬನನ್ನು ಸದರೀ ಸಭೆಯ ಅಧ್ಯಕ್ಷನನ್ನಾಗಿ ನೇಮಿಸಬೇಕು. ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು ಅಥವಾ ಅವನಿಂದ ನೇಮಿಸಲ್ಪಟ್ಟವನು ಇಂಥ ಸಭೆಯ ಅಧ್ಯಕ್ಷನಾಗಬೇಕು; ಆದರೆ ಅವನಿಗೆ ಮತ ಕೊಡುವ ಅಧಿಕಾರವಿಲ್ಲ. ಆಮೇಲೆ ಸಭೆಯು ಸರಪಂಚ ನನ್ನು ಆರಿಸುವ ಕೆಲಸವನ್ನು ಕೈಕೊಳ್ಳಬೇಕು. ಮತಗಳು ಸಮಾನವಾದರೆ, ಸರಪಂಚನ ಚುನಾವಣೆಯ ಪರಿಣಾಮವು, ಸದರೀ ಸಭೆಯ ಅಧ್ಯಕ್ಷನು ನಿರ್ಣಯಿಸಬಹುದಾದ ರೀತಿಯಲ್ಲಿ ಅವನಿಂದ ಚೀಟಿ ಹಾಕಲ್ಪಟ್ಟು ನಿರ್ಣಯಿ ಸಲ್ಪಡಬೇಕು.

(೨) ಪಂಚಾಯತದ ಅವಧಿಯು ಮುಗಿದಬಳಿಕ ಸರಪಂಚನು ೧೨ ನೇ ಕಲಮಿನ ೧ ನೇ ಉಪಕಲಮಿನನ್ವಯ ಠರಾಯಿಸಲ್ಪಟ್ಟ ತಾರೀಖಿನ ದಿವಸ ಹೊಸ ಸರಪಂಚನ ಚುನಾವಣೆಯ ಸಲುವಾಗಿ ಪಂಚಾಯತ ಸಭೆ ಕರೆಯಬೇಕು. ಮತ್ತು ತಾನು ಆ ಸಭೆಯ ಅಧ್ಯಕ್ಷನಾಗಬೇಕು. ಆದರೆ ಅವನು ಆ ಕಾಲದಲ್ಲಿ ಸದರೀ ಪಂಚಾಯತದ ಸಭಾಸದನಿದ್ದರೆ ಸಭಾಸದ ನಿರದಿದ್ದರೆ ಆ ಸಭೆಯಲ್ಲಿ ಮತ ಕೊಡಬಾರದು. ಮತಗಳು ಸಮಾನವಾದಾಗ ಚುನಾವಣೆಯ ಪರಿಣಾಮವು ಅಧ್ಯಕ್ಷಸ್ಥಾನದಲ್ಲಿರುವ ಸರಪಂಚನು ನಿರ್ಣಯಿಸಬಹುದಾದ ರೀತಿಯಲ್ಲಿ ಅವನಿಂದ ಚೀಟಿ ಹಾಕಲ್ಪಟ್ಟು ನಿರ್ಣಯಿ ಸಲ್ಪಡಬೇಕು.

ಆದರೆ ತಿಳಿಯಪಡಿಸುವದೇನಂದರೆ, ನಿವೃತ್ತನಾಗುವ ಸರಪಂಚನು ೧೨ ನೇ ಕಲಮಿನ ೧ ನೇ ಉಪಕಲಮಿನನ್ವಯ ಠರಾಯಿಸಲ್ಪಟ್ಟ ತಾರೀಖಿನ ದಿವಸ ಸರಪಂಚನ ಚುನಾವಣೆಗಾಗಿ ಯಾವುದೇ ಸಭೆಯನ್ನು ಕರೆದಿರದಿದ್ದರೆ ಅಥವಾ ಈ ಉದ್ದೇಶದ ಸಲುವಾಗಿ ಮೇಲೆ ಹೇಳಿದ ತಾರೀಖಿನ ದಿವಸ ಅವನಿಂದ ಕರೆಯಲ್ಪಟ್ಟ ಸಭೆಗೆ ಅವನು ಹಾಜರಾಗಿರದಿದ್ದರೆ, ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು ೧ನೇ ಉಪಕಲಮಿನಲ್ಲಿ ಹೇಳಿದ ರೀತಿಯಲ್ಲಿ ಪಂಚಾಯತದ ಸಭೆಯನ್ನು ಕರೆಯಲುಪಕ್ರಮಿಸಬೇಕು. ಮತ್ತು ಆ ಪ್ರಕಾರ ಹೊಸ ಸರಪಂಚನು ಚುನಾಯಿಸಲ್ಪಡಬೇಕು.

೧೨ ನೇ ಕಲಮಿನ ೧ ನೇ ಉಪಕಲಮಿನನ್ವಯ ಠರಾಯಿಸಲ್ಪಟ್ಟ ತಾರೀಖಿನಿಂದ ೧೫ ದಿವಸಗಳ ಅವಧಿಯೊಳಗೆ ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು ಇಂಥ ಸಭೆಯನ್ನು ಕರೆಯಲು ತಪ್ಪಿದರೆ, ಕಲೆಕ್ಟರನು ತಾನೇ ಸ್ವತಃ ಇಂಥ ಸಭೆಯನ್ನು ಕರೆಯಬೇಕು. ಪ್ರಸಂಗಾನುಸಾರ, ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು ಅಥವಾ ಕಲೆಕ್ಟರನು ಸಭಾಸದರಪೈಕಿ ಯಾವನೊಬ್ಬನನ್ನು ಹೀಗೆ ಕರೆಯಲ್ಪಟ್ಟ ಸಭೆಯ ಅಧ್ಯಕ್ಷನೆಂದು ನೇಮಿಸ ಬೇಕು. ಹೀಗೆ ನೇಮಿಸಲ್ಪಟ್ಟ ಮನುಷ್ಯನು ಸಭೆಯ ಅಧ್ಯಕ್ಷನಾಗಲು ತಪ್ಪಿದರೆ ಹಾಜರಿದ್ದ ಸಭಾಸದರು ತಮ್ಮ ಪೈಕಿ ಒಬ್ಬನನ್ನು ಅಧ್ಯಕ್ಷನೆಂದು ಚುನಾಯಿಸಬೇಕು.

(೩) ಉಪಕಲಮು ೧ ಅಥವಾ ೨ ರನ್ವಯ ಆದ ಸರಪಂಚನ ಚುನಾವಣೆಯ ಕ್ರಮಬದ್ಧತೆಯಬಗ್ಗೆ ತಂಟೆ ಉತ್ಪನ್ನವಾದರೆ ಆ ತಂಟೆಯನ್ನು ನಿರ್ಣಯಿಸುವದಕ್ಕಾಗಿ ಕಲೆಕ್ಟರನ ಕಡೆಗೆ ಕಳಿಸಬೇಕು. ಕಲೆಕ್ಟರನ ನಿರ್ಣಯವು ಕೊನೆಯದಾಗುವದು. ಇಂಥ ನಿರ್ಣಯದ ಸಂಬಂಧ ಯಾವುದೇ ಕೋರ್ಟಿನಲ್ಲಿ ಯಾವುದೇ ದಾವೆ ಅಥವಾ ವಿಚಾರಣೆ ನಡೆಯಲಾರದು.

**೧೮. ಸರಪಂಚನು ಅಥವಾ ಉಪಸರಪಂಚನು ರಾಜೀನಾಮೆ ಕೊಡುವದು.**

ಉಪಸರಪಂಚನು ಸರಪಂಚನಿಗೆ ಲೇಖಿ ನೋಟೀಸುಕೊಟ್ಟು ತನ್ನ ಅಧಿಕಾರ ಸ್ಥಾನಕ್ಕೆ ರಾಜೀನಾಮೆ ಕೊಡಬಹುದು.

ಸರಪಂಚನು ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನಿಗೆ ಲೇಖಿ ನೋಟೀಸು ಕೊಟ್ಟು ತನ್ನ ಅಧಿಕಾರ ಸ್ಥಾನಕ್ಕೆ ರಾಜೀನಾಮೆ ಕೊಡಬಹುದು.

ಇಂಥ ರಾಜೀನಾಮೆಗಳು ಅವು ಸ್ವೀಕರಿಸಲ್ಪಟ್ಟ ತಾರೀಖಿನಿಂದ ಜಾರಿಯಲ್ಲಿ ಬರುವವು.

**೧೯. ಪಂಚಾಯತವು ಸೇರುವ ವೇಳೆ, ಸ್ಥಾನ ಮತ್ತು ಸಭೆಯಲ್ಲಿ ಕಾರ್ಯಕಲಾಪಗಳನ್ನು ನಡೆಸುವ ರೀತಿ.**

ಪಂಚಾಯತವು ನೇರುವ ವೇಳೆ, ಸ್ಥಳ ಮತ್ತು ಅದರ ಸಭೆಯಲ್ಲಿ ಕಾರ್ಯಕಲಾಪಗಳನ್ನು ನಡಿಸುವ ರೀತಿಯು ಉಪನಿಯಮಗಳನ್ವಯ ಇರಬೇಕು

**೨೦. ಪಂಚಾಯತದ ಅಮಲ ಬಜಾವಣಿಯ ಅಧಿಕಾರ.**

ಈ ಕಾನೂನಿನ ಠರಾವುಗಳನ್ನು ಮತ್ತು ಪಂಚಾಯತವು ಪಾಸು ಮಾಡಿದ ಠರಾವುಗಳನ್ನು ಜಾರಿಯಲ್ಲಿ ತರುವ ಉದ್ದೇಶಕ್ಕಾಗಿ ಅಮಲಬಜಾವಣಿ ಅಧಿಕಾರವು ಸರಪಂಚನಿಗಿರುತ್ತದೆ. ಮತ್ತು ಅವನು ಈ ಕಾನೂನಿನಿಂದ ಅಥವಾ ಅದರ ಮೂಲಕ ಪಂಚಾಯತದಮೇಲೆ ಹೊರಿಸಲ್ಪಟ್ಟ ಕರ್ತವ್ಯ ಗಳನ್ನು ಯೋಗ್ಯವಾಗಿ ನೆರವೇರಿಸಲು ಪ್ರತ್ಯಕ್ಷವಾಗಿ ಹೊಣೆಗಾರನಿರುವನು, ಸರಪಂಚನು ಇಲ್ಲದಿದ್ದರೆ ಸರಪಂಚನ ಅಧಿಕಾರ ಮತ್ತು ಕರ್ತವ್ಯಗಳು ಉಪನಿಯಮಗಳಿಂದ ಇತರ ರೀತಿಯಲ್ಲಿ ಠರಾಯಿಸಿದ್ದನ್ನು ಹೊರ್ತುಪಡಿಸಿ ಉಪಸರಪಂಚನಿಂದ ನಡಿಸಲ್ಪಡಬೇಕು ಮತ್ತು ನೆರವೇರಿಸಲ್ಪಡಬೇಕು.

**೨೧. ಅಧಿಕಾರಪದದಿಂದ ತಳ್ಳುವದು.**

ಜಿಲ್ಹಾ ಲೋಕಲ್ ಬೋರ್ಡು ಪಂಚಾಯತಕ್ಕೆ ಯೋಗ್ಯ ನೋಟೀಸು ಕೊಟ್ಟು ಮತ್ತು ತನಗೆ ಯೋಗ್ಯ ಕಂಡ ವಿಚಾರಣೆಯನ್ನು ಮಾಡಿ, ಯಾವನು ದುರ್ನಡತೆಯವನಿರುವನೋ ಅಥವಾ ತನ್ನ ಕರ್ತವ್ಯಗಳನ್ನು ಮಾಡುವದರಲ್ಲಿ ತಾತ್ಸಾರ ಅಥವಾ ಅಸಮರ್ಥತೆಯನ್ನು ತೋರಿಸುವನೋ ಅಥವಾ ತನ್ನ ಕರ್ತವ್ಯಗಳನ್ನು ಮಾಡುವದರಲ್ಲಿ ಒಂದೇಸವನೆ ತಾತ್ಸಾರಮಾಡುವನೋ ಅಂಥ ಯಾವನೇ ಸಭಾಸದನನ್ನು, ಸರಪಂಚನನ್ನು ಅಥವಾ ಉಪಸರಪಂಚ ನನ್ನು ಕಲೆಕ್ಟರನ ಮಂಜೂರಿಯನ್ನು ಮುಂಚಿತವಾಗಿ ಪಡೆದು ಅಧಿಕಾರಸ್ಥಾನ ದಿಂದ ತಳ್ಳಿಹಾಕಬಹುದು.

ಈ ಪ್ರಕಾರ ತಳ್ಳಿಹಾಕಲ್ಪಟ್ಟ ಸರಪಂಚನನ್ನು ಅಥವಾ ಉಪಸರಪಂಚ ನನ್ನು ಲೋಕಲ್ ಬೋರ್ಡಿನ ಇಚ್ಛೆಯ ಮೇರೆಗೆ ಮತ್ತು ಅಂಥ ಮಂಜೂರಿ ಗೊಳಪಟ್ಟು ಸದರೀ ಪಂಚಾಯತದಿಂದ ಸಹ ತೆಗೆದುಹಾಕಬಹುದು.

**೨೨. ಗೈರಹಾಜರಿಯ ರಜೆ.**

(೧) ಪಂಚಾಯತದ ಯಾವ ಸಭಾಸದನು ತನ್ನ ಅಧಿಕಾರಾವಧಿ ಯಲ್ಲಿ,

ಅ] ಗ್ರಾಮದಿಂದ ೬ ತಿಂಗಳಿಗಿಂತ ಹೆಚ್ಚಲ್ಲದ ಅವಧಿಯವರೆಗೆ ಗೈರ ಹಾಜರಾಗಿರಲಿಕ್ಕೆಅವನಿಗೆ ಪಂಚಾಯತದಿಂದ ರಜೆಯು ಕೊಡಲ್ಪಡದಹೊರ್ತು

ನಾಲ್ಕಕ್ಕಿಂತ ಹೆಚ್ಚು ತಿಂಗಳಗಳವರೆಗೆ ಒಂದೇ ಸವನೆ ಗೈರಹಾಜರಾಗಿ ಉಳಿಯುವನೋ, ಅಥವಾ

ಬ] ಸದರೀ ಪಂಚಾಯತದ ಅಪ್ಪಣೆ ಇಲ್ಲದೆ ಪಂಚಾಯತದ ಸಭೆಗಳಿಗೆ ಸತತ ೬ ತಿಂಗಳವರೆಗೆ ಹಾಜರಾಗುವದಿಲ್ಲವೋ, ಅವನುಸಭಾಸದನಾಗಿ ಉಳಿಯಲಾರನು ಮತ್ತು ಅವನ ಸ್ಥಳವು ಬರಿ (ಖಾಲಿ) ದಾಗುವದು.

(೨) ಈ ಕಲಮಿನನ್ವಯ ಯಾವುದೊಂದು ಸ್ಥಳವು ಬರಿದಾಗಿರುವದೋಅಥವಾ ಇಲ್ಲವೋ ಎಂಬ ವಿಷಯದ ಯಾವುದೇ ವಿವಾದವು ಕಲೆಕ್ಟರನ ನಿರ್ಣಯದಬಗ್ಗೆ ಅವನ ಕಡೆಗೆ ಕಳಿಸಲ್ಪಡಬೇಕು, ಮತ್ತು ಅವನ ನಿರ್ಣಯವು ಕೊನೆಯದಾಗುವದು.

**೨೩. ಬರಿದಾದ ಜಾಗೆಗಳನ್ನು ತುಂಬುವದು.**

(೧) ಸರಪಂಚನ ಅಥವಾ ಉಪಸರಪಂಚನ ಅಥವಾ ಯಾವನೊಬ್ಬ ಸಭಾಸದನ ಅಂಗಹೀನತ್ವ, ಮರಣ, ರಾಜೀನಾಮೆ, ಅಪಾತ್ರತೆ, ಅಪ್ಪಣೆ ಇಲ್ಲದೆ ಗೈರಹಾಜರ ಇರೋಣ ಅಥವಾ ತಳ್ಳಿಹಾಕಲ್ಪಡೋಣ ಇವುಗಳ ಮೂಲಕ ಬರಿದಾದ ಯಾವ ಜಾಗೆಯ ಸಂಬಂಧದಲ್ಲಿ, ಕಲೆಕ್ಟರನಿಗೆ ಠರಾಯಿಸಿದ ರೀತಿಯಲ್ಲಿ ನೋಟೀಸು ಕೊಡಲ್ಪಟ್ಟಿರುವದೋ ಅಂಥ ಯಾವುದೇ ಜಾಗೆಯನ್ನು ಸರಪಂಚನ, ಉಪಸರಪಂಚನ ಅಥವಾ ಸಭಾಸದನ ಚುನಾವಣೆಯಿಂದ ತುಂಬಬೇಕು. ಮತ್ತು ಅವನು ಯಾವ ಸರಪಂಚನ, ಉಪಸರಪಂಚನ ಅಥವಾ ಸಭಾಸದನ ಸ್ಥಳದಲ್ಲಿ ಚುನಾಯಿಸಲ್ಪಟ್ಟಿರುವನೋ ಅಂಥ ಸರಪಂಚನು, ಉಪಸರಪಂಚನು ಅಥವಾ ಸಭಾಸದನು ಸದರೀ ಜಾಗೆಯು ಬರಿದಾಗಿರದಿದ್ದರೆ, ಅಧಿಕಾರ ಧಾರಣ ಮಾಡಬಹುದಾಗಿದ್ದ ಅವಧಿಯವರೆಗೆ ಮಾತ್ರ ಅಧಿಕಾರ ಧಾರಣ ಮಾಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಜಾಗೆಯು ಬರಿದಾದ ಬಗ್ಗೆ ಕಲೆಕ್ಟರನಿಗೆ ನೋಟೀಸುಕೊಟ್ಟ ತಾರೀಖಿನಿಂದ ೪ ವಾರಗಳೊಳಗಾಗಿ ಈ ಪ್ರಕಾರ ಯಾವನೇ ಸಭಾಸದನ ಆಯ್ಕೆ ಆಗದಿದ್ದರೆ, ಜಿಲ್ಹಾ ಲೋಕಲ್ ಬೋರ್ಡಿನ ಸ್ಥಾಯಿಸಮಿತಿಯು ಮುಂದಿನ ೮ ವಾರಗಳಲ್ಲಿ ಚುನಾಯಿಸಲ್ಪಡಲಿಕ್ಕೆ ಪಾತ್ರನಾದ ಒಬ್ಬನನ್ನು ನೇಮಿಸಬೇಕು. ನಿರ್ದಿಷ್ಟಪಡಿಸಿದ ಅವಧಿ

ಯಲ್ಲಿ ಜಿಲ್ಲಾ ಲೋಕಲ್ ಬೋರ್ಡಿನ ಸ್ಥಾಯಿಸಮಿತಿಯು ಇಂಥ ನೇಮಣೂಕಿಯನ್ನು ಮಾಡಲು ತಪ್ಪಿದರೆ ಕಲೆಕ್ಟರನು ಇಂಥ ನೇಮಣೂಕಿಯನ್ನು ಮಾಡಬೇಕು. ಮತ್ತು ಹೀಗೆ ನೇಮಣೂಕ ಆದ ಮನುಷ್ಯನು ಈ ಉಪಕಲಮಿನನ್ವಯ ಯೋಗ್ಯ ರೀತಿಯಲ್ಲಿ ಚುನಾಯಿಸಲ್ಪಟ್ಟಿರುವನೆಂದು ತಿಳಿಯಬೇಕು

ಆದರೆ ಮತ್ತೆ ಗೊತ್ತುಪಡಿಸುವದೇನಂದರೆ, ೬ ನೇ ಕಲಮಿನಲ್ಲಿ ಏನೇ ಹೇಳಲ್ಪಟ್ಟಿದ್ದರೂ, ಚುನಾಯಿಸಲ್ಪಟ್ಟ ಸಭಾಸದನ ಜಾಗೆಯು ಬರಿದಾದರೆ ಮತ್ತು ಈ ಸಂಗತಿಯು ೧೧ ನೇ ಕಲಮಿನನ್ವಯ ಯಾವ ತಾರೀಖಿಗೆ ಪಂಚಾಯತಿಯ ಸಭಾಸದರ ಅಧಿಕಾರಾವಧಿಯು ಮುಗಿಯುವದೋ ಆ ತಾರೀಖಿನ ಹಿಂದಿನ ೪ ತಿಂಗಳಲ್ಲಿ ಉದ್ಭವಿಸಿದರೆ ಅಂಥ ಬರಿದಾದ ಜಾಗೆಯು ತುಂಬಲ್ಪಡಬಾರದು.

(೨೪) ೧ ನೇ ಉಪಕಲಮಿನನ್ವಯ ಸರಪಂಚನ ಚುನಾವಣಿಯ ವಿಷಯದ ಸಭೆಯನ್ನು ಜಿಲ್ಲಾ ಲೋಕಲ್ ಬೋರ್ಡಿನ ಅಧ್ಯಕ್ಷನು ೧೭ ಕಲಮಿನ ೧ ನೇ ಉಪಕಲಮಿನನ್ವಯ ಕರೆಯಬೇಕು,

**೨೪. ಜಾಗೆಯು ಬರಿದಾದಕಾರಣಕ್ಕಾಗಿ ಪಂಚಾಯತದ ಕೆಲಸಕ್ಕೆ ಬಾಧೆ ತಟ್ಟದು.**

ಪಂಚಾಯತದ ಯಾವುದೇ ಜಾಗೆಯು ತೆರವುಬಿದ್ದ ಕಾಲದಲ್ಲಿ, ಆ ಜಾಗೆಯು ತೆರವಾಗಿರುವದಿಲ್ಲವೆಂದು ತಿಳಿದು ಸಭಾಸದರು ಕೆಲಸ ಮಾಡಬೇಕು.

**೨೫. ಈ ಕಾನೂನಿನ್ವಯ ಪಂಚಾಯತಗಳು ಸ್ಥಾಪಿಸಲ್ಪಡುವವರೆಗೆ ತಾತ್ಪೂರ್ತಿಕ ವ್ಯವಸ್ಥೆ.**

ಈ ಕಾನೂನಿನಲ್ಲಿ ಏನೇ ಹೇಳಲ್ಪಟ್ಟಿದ್ದರೂ, ಈ ಕಾನೂನಿನ್ವಯ ಸ್ಥಾಪಿಸಲ್ಪಟ್ಟವುಗಳೆಂಬದು ತಿಳಿಯಲ್ಪಡುವ, ೧೯೨೦ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತಗಳ ಕಾನೂನಿನ್ವಯ ಸ್ಥಾಪಿಸಲ್ಪಟ್ಟ ಪಂಚಾಯತಗಳು, ಗ್ರಾಮ ಫಂಡಿನ ಆಡಳಿತೆಯನ್ನು ಈ ಕಾನೂನಿನ ಠರಾವುಗಳನ್ವಯ ಪ್ರಾಂತಿಕ ಸರಕಾರದವರು ಸರಕಾರಿ ಗ್ಯಾಝೇಟಿನಲ್ಲಿ ಜಾಹೀರ ನಾಮೆಯನ್ನು ಕೊಟ್ಟು ಠರಾಯಿಸಬಹುದಾದ ತಾರೀಖಿನ ವರೆಗೆ, ಸಾಧ್ಯವಿರುವ ಮಟ್ಟಿಗೆ ನಡೆಸಬೇಕು.

## ಭಾಗ ೩.

## ಆಡಳಿತೆಯ ಸಂಬಂಧದ ಅಧಿಕಾರಿಗಳು ಮತ್ತು ಕರ್ತವ್ಯಗಳು.

**೨೬. ಪಂಚಾಯತಗಳ ಅಡಳಿತೆ ನಡೆಸುವ ಅಧಿಕಾರ ಮತ್ತು ಕರ್ತವ್ಯಗಳು.**

(೧) ಜಿಲ್ಲಾ ಲೋಕಲ್ ಬೋರ್ಡಿನ ಸಾಮಾನ್ಯ ನಿಯಂತ್ರಣಕ್ಕೊಳಪಟ್ಟು ತನ್ನಲ್ಲಿದ್ದ ಗ್ರಾಮುದ ಫಂಡಿಗೆ ಸರಿಹೋಗುವಂತೆ ಈ ಕೆಳಗಿನ ವಿಷಯಗಳ ಸಂಬಂಧ ಗ್ರಾಮದಲ್ಲಿ ಯೋಗ್ಯ ವ್ಯವಸ್ಥೆ ಮಾಡುವದು ಪಂಚಾಯತದ ಕರ್ತವ್ಯವಾಗಿದೆ.

ಅಂದರೆ—

ಅ] ಮನೆಯ ಉಪಯೋಗದಬಗ್ಗೆ ನೀರಿನ ಪೂರೈಕೆ.

ಬ] ಸಾರ್ವಜನಿಕ ಮಾರ್ಗ, ಕಾಲುವೆ, ಒಡ್ಡು, ಕೆರೆ ಮತ್ತು ಭಾವಿ (ನೀರಾವರಿಗಾಗಿ ಉಪಯೋಗಿಸಲ್ಪಡುವ ಕೆರೆ ಮತ್ತು ಭಾವಿಗಳನ್ನು ಹೊರ್ತುಪಡಿಸಿ) ಮತ್ತು ಇತರ ಸಾರ್ವಜನಿಕ ಸ್ಥಳಗಳನ್ನು ಅಥವಾ ಕಾಮಗಾರಿಗಳನ್ನು ಸ್ವಚ್ಛಮಾಡುವದು.

(ಅ ಬ) ಸಾರ್ವಜನಿಕ ಬೀದಿಗಳಲ್ಲಿ ಅಥವಾ ಖಾಸಗಿ ಒಡೆತನವಿಲ್ಲದ ಮತ್ತು ಸಾರ್ವಜನಿಕ ಉಪಯೋಗಕ್ಕೆ ಮುಕ್ತವಿನ್ನ ಜಾಗೆಗಳಲ್ಲಿಯ ಆತಂಕಗಳನ್ನು ಮತ್ತು ಮುಂಚಾಚಲ್ಪಟ್ಟ ಭಾಗಗಳನ್ನು ತೆಗೆದು ಹಾಕುವದು. ಇಂಥ ಜಾಗೆಗಳು ಪಂಚಾಯತಿಯ ಸ್ವಾಧೀನದಲ್ಲಿರಲಿ ಅಥವಾ ಸರಕಾರೀಯ ವಿರಲಿ.

ಕ] ಸಾರ್ವಜನಿಕ ಮಾರ್ಗ, ಕಾಲುವೆ, ಒಡ್ಡು ಮತ್ತು ಸೇತುವೆಗಳನ್ನು ಕಟ್ಟುವದು, ಒಳ್ಳೇ ಸ್ಥಿತಿಯಲ್ಲಿಡುವದು ಮತ್ತು ದುರಸ್ತಿಮಾಡುವದು.

ಆದರೆ ಗೊತ್ತುಪಡಿಸುವದೇನಂದರೆ, ಸದರೀ ಮಾರ್ಗ, ಕಾಲುವೆ, ಒಡ್ಡು ಮತ್ತು ಸೇತುವೆಗಳು ಬೇರೆ ಯಾವುದೇ ಸಾರ್ವಜನಿಕ ಅಧಿಕಾರಿಯ ಅಧೀನದಲ್ಲಿದ್ದರೆ, ಇಂಥ ಕೆಲಸಗಳು ಇಂಥ ಅಧಿಕಾರಿಯ ಸಮ್ಮತಿಯಿಲ್ಲದೆ ಕೈಕೊಳ್ಳಲ್ಪಡಬಾರದು.

ಡ] ಆರೋಗ್ಯ ರಕ್ಷಣೆ, ಕಸಮುಂತಾದ್ದನ್ನು ತೆಗೆಯುವದು ಮತ್ತು ಪೀಡನೆಗಳಾಗದಂತೆ ಮಾಡುವದು ಮತ್ತು ಅವುಗಳನ್ನು ಕಡಿಮೆ ಮಾಡುವದು.

ಈ] ಸಾರ್ವಜನಿಕ ಆರೋಗ್ಯವನ್ನು ಕಾಪಾಡುವದು ಮತ್ತು ಅದರಲ್ಲಿ ಸುಧಾರಣೆ ಮಾಡುವುದು.

ಫ] ಸಾರ್ವಜನಿಕ ಕಟ್ಟಡಗಳನ್ನೂ ಹುಲ್ಲುಗಾವಲುಗಳನ್ನೂ [೧೯೨೭ ನೇ ಇಸ್ವಿಯ ಭಾರತ ಅರಣ್ಯ ಕಾನೂನಿನ ೨೮ ನೇ ಕಲಮಿನನ್ವಯ ಕೊಡಲ್ಪಟ್ಟ ಭೂಮಿಗಳನ್ನು ಕೂಡಿಕೊಂಡು] ಅಡವಿಯ ಭೂಮಿಗಳನ್ನೂ [ಕೇವಲ ನೀರಾವರಿಯ ಕೆಲಸಕ್ಕೆ ಉಪಯೋಗಿಸಲ್ಪಡುವ ಕೆರೆ ಮತ್ತು ಭಾವಿಗಳನ್ನೂ ಹೊರ್ತುಪಡಿಸಿ] ಪಂಚಾಯತದ ಒಡೆತನದಲ್ಲಿರುವ ಅಥವಾ ಅದರ ನಿಯಂತ್ರಣದಲ್ಲಿರುವ ಕೆರೆಗಳನ್ನೂ ಭಾವಿಗಳನ್ನೂ ಒಳ್ಳೇ ಸ್ಥಿತಿಯಲ್ಲಿಡುವುದು ಮತ್ತು ಅವುಗಳ ಉಪಯೋಗದ ವ್ಯವಸ್ಥೆ ಮಾಡುವದು.

ಗ] ಗ್ರಾಮದಲ್ಲಿ ದೀಪ ಹಚ್ಚುವುದು.

ಹ] ಜಾತ್ರೆಗಳ, ಪೇಟೆಗಳ, ಕಟುಕರ ಮನೆಗಳ [ವಧಾಲಯ] ಮತ್ತು ಬಂಡಿ ನಿಲ್ದಾಣಗಳ ನಿಯಂತ್ರಣ.

ಇ] ಹೆಣಸುಡುವ ಮತ್ತು ಹುಗಿಯುವ ಸ್ಥಳಗಳ ವ್ಯವಸ್ಥೆ ಮಾಡುವದು, ಅವುಗಳನ್ನು ಸುಸ್ಥಿತಿಯಲ್ಲಿಡುವುದು ಮತ್ತು ಅವುಗಳಬಗ್ಗೆ ನಿಯಮಗಳನ್ನು ಮಾಡುವುದು.

(೨) ಜಿಲ್ಹಾ ಲೋಕಲ್ ಬೋರ್ಡಿನ ಪೂರ್ವ ಮಂಜೂರಿಯಿಂದ ೧ ನೇ ಉಪಕಲಮಿನಲ್ಲಿ ನಿರ್ದಿಷ್ಟಮಾಡಿದ ಯಾವುದೇ ಕೆಲಸವನ್ನು ಗ್ರಾಮದ ಹೊರಗೆ ಮಾಡುವದಕ್ಕೆ ವ್ಯವಸ್ಥೆಮಾಡಲು ಗ್ರಾಮ ಪಂಚಾಯತಿಗೆ ಅಧಿಕಾರವಿದೆ.

**(೨೬ ಅ) ಪಂಚಾಯತವು ತನಗೆ ಯೋಗ್ಯ ಕಂಡದ್ದನ್ನು ಮಾಡುವ ಅಧಿಕಾರ ಮತ್ತು ಕರ್ತವ್ಯಗಳು.**

(೧) ಗ್ರಾಮ ಪಂಚಾಯತಿಯಲ್ಲಿದ್ದ ಗ್ರಾಮ ಫಂಡಿನಿಂದ ಮಾಡಬಹುದಾದಷ್ಟನ್ನು ಮತ್ತು ಜಿಲ್ಹಾ ಲೋಕಲ್ ಬೋರ್ಡಿನ ಸಾಮಾನ್ಯ ನಿಯಂತ್ರಣಕ್ಕೊಳಪಟ್ಟು, ಈ ಕೆಳಗಿನ ವಿಷಯಗಳ ಸಂಬಂಧದಲ್ಲಿ ಯೋಗ್ಯಕಂಡ ವ್ಯವಸ್ಥೆಯನ್ನು ಮಾಡಲು ಪಂಚಾಯತಿಗೆ ಅಧಿಕಾರವಿದೆ.

ಅ] ಪೈರಿನ ಸಂಬಂಧ ಪ್ರಯೋಗ ಮಾಡುವುದು.

ಬ] ಕಟುಕರ [ವಧಾಲಯ] ಮನೆಗಳನ್ನು ಕಟ್ಟುವದು ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡುವದು.

ಕ] ನಿರಾಶ್ರಿತರಿಗೆ ಮತ್ತು ರೋಗಿಗಳಿಗೆ ಪರಿಹಾರ ಕೊಡುವದು.

ಡ] ಒಕ್ಕಲತನದ ಸುಧಾರಣೆ.

ಈ] ಸರಕಾರಿ ಪದ್ಧತಿಯಿಂದ ಭೂ–ಸಾಗುವಳಿ.

ಫ] ದನಗಳ ಮತ್ತು ಅವುಗಳ ಪಾಲನೆಯಲ್ಲಿ ಸುಧಾರಣೆ ಮತ್ತು ಅವುಗಳ ಸರ್ವ ಸಾಮಾನ್ಯ ಜೋಪಾನ.

ಗ] ಧಾನ್ಯ ಸಂಗ್ರಾಲಯಗಳನ್ನು ಸ್ಥಾಪಿಸುವದು.

ಹ] ಗ್ರಾಮ ಪುಸ್ತಕಾಲಯ ಮತ್ತು ವಾಚನಾಲಯಗಳನ್ನು ಸ್ಥಾಪಿಸುವದು.

ಇ] ಬೀದಿಗುಂಟ, ಪೇಟೆಯ ಸ್ಥಳಗಳಲ್ಲಿ ಮತ್ತು ಸಾರ್ವಜನಿಕ ಇತರ ಸ್ಥಳಗಳಲ್ಲಿ ಗಿಡಗಳನ್ನು ಹಚ್ಚುವದು ಮತ್ತು ಅವುಗಳನ್ನು ಪೋಷಿಸುವದು ಮತ್ತು ಕಾಪಾಡುವದು.

ಜ] ಗ್ರಾಮದಲ್ಲಿ ಮಕ್ಕಳಿಗಾಗಿ ಕ್ರೀಡಾಂಗಣ ಮತ್ತು ಸಾರ್ವಜನಿಕ ಉದ್ಯಾನಗಳನ್ನು ನಿರ್ಮಿಸುವದು ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡುವದು.

ಕೆ] ಗ್ರಾಮೋದ್ಯೋಗಗಳನ್ನು ಪ್ರಾರಂಭಿಸುವದು, ಅವುಗಳನ್ನು ಸುಧಾರಿಸುವದು ಮತ್ತು ಅವುಗಳಿಗೆ ಉತ್ತೇಜನ ಕೊಡುವದು.

ಲ] ಅನಾಥ ಮತ್ತು ಬೇವಾರಸಿ ನಾಯಿಗಳನ್ನು ನಾಶಮಾಡುವದು.

ಮ] ಧರ್ಮಶಾಲೆಗಳನ್ನು ಕಟ್ಟುವದು ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡುವದು.

ನ] ಬೇರೆ ಯಾವದೇ ಅಧಿಕಾರಿಯ ಮೇಲ್ವಿಚಾರಣೆಗೆ ಒಳಪಡದಂಥ ಘಾಟಗಳ ವ್ಯವಸ್ಥೆ ಮಾಡುವದು ಮತ್ತು ಅವುಗಳ ಮೇಲೆ ನಿಯಂತ್ರಣ ವಿಡುವದು.

ಓ] ಯಾವುದೇ ನೈಸರ್ಗಿಕ ವಿಪತ್ತು ಬಂದಾಗ್ಗೆ ಗ್ರಾಮವಾಸಿಗಳಿಗೆ ನೆರವು ನೀಡುವದು.

ಪ] ಬೇವಾರಸಿ ಹೆಣಗಳ, ಸತ್ತ ದನಗಳ ಮತ್ತು ಬೇವಾರಸಿ ದನಗಳ ಸಂಬಂಧ ವ್ಯವಸ್ಥೆ ಮಾಡುವದು.

ಕ್ಯು] ಸಾರ್ವಜನಿಕ ಪಾಯಖಾನೆಗಳನ್ನು ಕಟ್ಟುವದು ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡುವದು.

ರ] ಪೇಟೆಗಳನ್ನು ಸ್ಥಾಪಿಸುವದು ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡುವದು.

ಸ] ಗ್ರಾಮ ಮತ್ತು ಅದರಲ್ಲಿಯ ಪೀಕುಗಳ ರಕ್ಷಣೆ ಮಾಡುವದು. ಆದರೆ ಗೊತ್ತುಪಡಿಸುವದೇನಂದರೆ, ಸ ಕಲಮಿನನ್ವಯ ರಕ್ಷಣೆಯ ವೆಚ್ಚಕ್ಕಾಗಿ ಪಂಚಾಯತವು ಕರಹೇರಿ, ಅದನ್ನು ಗೊತ್ತುಪಡಿಸಿದ ರೀತಿಯಲ್ಲಿ ವಸೂಲ ಮಾಡಬೇಕು.

ತ] ಗ್ರಾಮ ಸ್ವಚ್ಛಮಾಡುವ ಶಾಖೆಯ ಜನರಿಗೆ ಮನೆಗಳನ್ನು ಕಟ್ಟಿಸುವದು ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡುವದು.

(೨) ಗ್ರಾಮದ ನಿವಾಸಿಗಳ ಆರೋಗ್ಯ, ಸುರಕ್ಷಿತತೆ, ಶಿಕ್ಷಣ, ಸುಖ, ಅನುಕೂಲತೆ ಅಥವಾ ಸಾಮಾಜಿಕ ಅಥವಾ ಆರ್ಥಿಕ ಕಲ್ಯಾಣವನ್ನು ಹೆಚ್ಚಿಸಬಹುದಾದ ಇತರ ಯಾವುದೇ ಕೆಲಸವನ್ನು ಅಥವಾ ಯೋಜನೆಯನ್ನು ಗ್ರಾಮದಲ್ಲಿ ಕೈಕೊಳ್ಳುವ ಬಗ್ಗೆ ಸಹ ಪಂಚಾಯತವು ವ್ಯವಸ್ಥೆ ಮಾಡಬಹುದು.

(೩) ಪಂಚಾಯತವು ತನ್ನ ಸಭೆಯಲ್ಲಿ ಸ್ವೀಕರಿಸಿದ ಮತ್ತು ಅದರ ಒಟ್ಟು ಸಭಾಸದರ ಪೈಕಿ ⅔ ಸಭಾಸದರ ಬೆಂಬಲ ಪಡೆದ ಗೊತ್ತುವಳಿಯಿಂದ ಗ್ರಾಮದಲ್ಲಿ ಯಾವುದೇ ಸಾರ್ವಜನಿಕ ಸತ್ಕಾರ, ಸಮಾರಂಭ, ಮನರಂಜನೆ ಅಥವಾ ಪ್ರದರ್ಶನದ ಸಲುವಾಗಿ ವ್ಯವಸ್ಥೆ ಮಾಡಬಹುದು.

ಆದರೆ ಗೊತ್ತುಪಡಿಸುವದೇನಂದರೆ ಪಂಚಾಯತವು ಕಲೆಕ್ಟರನ ಪೂರ್ವ ಸಮ್ಮತಿಯಿಲ್ಲದೆ ಇಂಥ ಯಾವುದೇ ಸಾರ್ವಜನಿಕ ಸತ್ಕಾರ, ಸಮಾರಂಭ, ಮನರಂಜನೆ ಅಥವಾ ಪ್ರದರ್ಶನದಸಲುವಾಗಿ ೨೫ ರೂಪಾಯಿಗಿಂತ ಹೆಚ್ಚಿನ ಹಣವನ್ನು ಖರ್ಚು ಮಾಡಬಾರದು.

**೨೭. ಸಂಸ್ಥೆಗಳ ವ್ಯವಸ್ಥೆಯನ್ನು ಮತ್ತು ಇತರ ಕೆಲಸಗಳ ನೆರವೇರಿಸುವಿಕೆಯನ್ನು ವರ್ಗಾಯಿಸುವಬಗ್ಗೆ ಜಿಲ್ಹಾ ಲೋಕಲ್ ಬೋರ್ಡಿಗೆ ಇದ್ದ ಅಧಿಕಾರಗಳು.**

ಜಿಲ್ಹಾ ಲೋಕಲ್ ಬೋರ್ಡು, ಯಾವುದೇ ಕಾಲದಲ್ಲಿ, ಪಂಚಾಯತದ ಅನುಮತಿಯಿಂದ ಯಾವುದೇ ಸಂಸ್ಥೆಯ ವ್ಯವಸ್ಥೆಯನ್ನು ಅಥವಾ ೨೬ ನೇ ಕಲಮಿನಲ್ಲಿ ನಮೂದಾಗದ ಸ್ವಾಧೀನಕ್ಕೆ ಕೊಡಬಹುದು. ಆಮೇಲೆ ಇಂಥ ಪಂಚಾಯತವು ಇಂಥ ಸಂಸ್ಥೆಯ ವ್ಯವಸ್ಥೆ ಮಾಡಲುಪಕ್ರಮಿಸುವದು ಅಥವಾ ಇಂಥ ಕೆಲಸವನ್ನು ನೆರವೇರಿಸಲುಪಕ್ರಮಿಸುವದು ಕ್ರಮಬದ್ಧವಾಗುವದು.

ಆದರೆ ಗೊತ್ತುಪಡಿಸುವದೇನಂದರೆ, ಇಂಥ ಪ್ರತಿಯೊಂದು ವಿಷಯದಲ್ಲಿ ಇಂಥ ವ್ಯವಸ್ಥೆಗೆ ಅಥವಾ ಕೆಲಸವನ್ನು ನೆರವೇರಿಸುವದಕ್ಕೆ ಅವಶ್ಯವಿರುವ ಫಂಡುಗಳು ಜಿಲ್ಹಾ ಲೋಕಲ್ ಬೋರ್ಡಿನಿಂದ ಪಂಚಾಯತದ ಕಡೆಗೆ ಒಪ್ಪಿಸಲ್ಪಡಬೇಕು.

**೨೮. ಇತರ ಕರ್ತವ್ಯಗಳು.**

(೧) ಪಂಚಾಯತವು:—

(1) ೧೯೨೩ ನೇ ಇಸ್ವಿಯ ಮುಂಬಯಿ ಪ್ರಾಥಮಿಕ ಶಿಕ್ಷಣ ಕಾನೂನಿನನ್ವಯ ಸ್ಥಾನಿಕ ಅಧಿಕಾರಿಯಿಂದ ಮಾಡಲ್ಪಟ್ಟ ನಿಯಮಗಳಿಗೊಳಪಟ್ಟು

ಗ್ರಾಮದ ಶಾಲೆಯ ಮೇಲ್ವಿಚಾರಣೆ ಮಾಡಬೇಕು. ಮತ್ತು ಅದನ್ನು ಒಳ್ಳೇ ಸ್ಥಿತಿಯಲ್ಲಿಡುವಬಗ್ಗೆ ಮತ್ತು ನಡಿಸುವಬಗ್ಗೆ ಅವಶ್ಯವಿದ್ದ ದುರಸ್ತಿಗಳನ್ನು ಮಾಡಬೇಕು.

(2) ಈ ಬಗ್ಗೆ ಜಿಲ್ಹಾ ಲೋಕಲ್ ಬೋರ್ಡಿನಿಂದ ಮಾಡಲ್ಪಡಬಹುದಾದ ಉಪನಿಯಮಗಳಿಗೊಳಪಟ್ಟು—

ಅ] ಲೋಕಲ್ ಬೋರ್ಡು ಗ್ರಾಮದಲ್ಲಿ ಕೆಲಸಕ್ಕೆ ಹಚ್ಚಿದ ಕೂಲಿಕಾರರ ಮೇಲ್ವಿಚಾರಣೆ ಮಾಡಬೇಕು.

ಬ] ಧರ್ಮಶಾಲೆಗಳ ದುರಸ್ತಿಯ ಮೇಲ್ವಿಚಾರಣೆ ಮಾಡಬೇಕು.

ಕ] ಕೊಂಡವಾಡೆ [ದನಗಳ ದೊಡ್ಡಿ] ಗಳ ವ್ಯವಸ್ಥೆ ನೋಡಬೇಕು ಮತ್ತು ಅವುಗಳನ್ನು ನಡಿಸಿಕೊಂಡು ಹೋಗಬೇಕು; ಮತ್ತು

ಡ] ಜಿಲ್ಹಾ ಲೋಕಲ್ ಬೋರ್ಡಿನಿಂದ ತನಗೆ ಒಪ್ಪಿಸಲ್ಪಟ್ಟ ಕೆಲಸಗಳನ್ನು ಮಾಡಬೇಕು; ಮತ್ತು

(3) ಪ್ರಾಂತಿಕ ಸರಕಾರದವರು, ಸರಕಾರಿ ಗ್ಯಾಝೇಟಿನಲ್ಲಿ ಪ್ರಕಟನೆ ಕೊಟ್ಟು, ತನಗೆ ನೇಮಿಸಿಕೊಡಬಹುದಾದ, ಕಾಲುವೆಯ ನೀರನ್ನು ಹಂಚಿಕೊಡುವ ಕೆಲಸವನ್ನು ಒಳಗೊಂಡು, ಆಡಳಿತೆಯ ಸಂಬಂಧದ ಇತರ ಕೆಲಸಗಳನ್ನು, ಪ್ರಾಂತಿಕ ಸರಕಾರದವರು ಹಾಕಬಹುದಾದ ಕರಾರುಗಳಿಗೆ ಒಳಪಟ್ಟು ಮತ್ತು ಸಂಬಂಧಪಟ್ಟ ಪಂಚಾಯತದ ಅನುಮತಿಯಿಂದ, ಜಿಲ್ಹಾ ಲೋಕಲ್ ಬೋರ್ಡಿನ ಸಲಹೆಕೇಳಿ, ನೆರವೇರಿಸಬೇಕು.

(೨) ಸ್ಥಾನಿಕ ಅಧಿಕಾರ ಸಂಸ್ಥೆಯು ಮಾಡತಕ್ಕ ನಿಯಮಗಳು ಈ ಕಾನೂನು ಪಾಸಾದ ಆರುತಿಂಗಳೊಳಗಾಗಿ ಮಾಡಲ್ಪಡಬೇಕು. ಇಂಥ ನಿಯಮಗಳು ಈ ಅವಧಿಯಲ್ಲಿ ಮಾಡಲ್ಪಡದಿದ್ದರೆ, ಪ್ರಾಂತಿಕ ಸರಕಾರದವರು ಆಬಗ್ಗೆ ನಿಯಮಗಳನ್ನು ಮಾಡಬಹುದು.

(೩) ಪ್ರಸಂಗಾನುಸಾರ, ಸ್ಥಾನಿಕ ಅಧಿಕಾರ ಸಂಸ್ಥೆಯು ಅಥವಾ ಸ್ಕೂಲಬೋರ್ಡು ಸಾಕಷ್ಟು ಹಣವನ್ನು ಪಂಚಾಯತದ ಸ್ವಾಧೀನಕ್ಕೆ ಕೊಟ್ಟ ಹೊರ್ತು ೧ ನೇ ಉಪಕಲಮಿನ ೧ ನೇ ರಕಮಿನನ್ವಯ ಗ್ರಾಮದ ಶಾಲೆಯ

ದುರಸ್ತಿಯನ್ನು ಮಾಡಲಿಕ್ಕೆ ಅಥವಾ ಜಿಲ್ಹಾ ಲೋಕಲ್ ಬೋರ್ಡು ಸಾಕಷ್ಟು ಹಣವನ್ನು ಪಂಚಾಯತದ ಸ್ವಾಧೀನಕ್ಕೆ ಕೊಟ್ಟಹೊರ್ತು ೧ ನೇ ಉಪಕಲಮಿನ ೨ ನೇ ರಕಮಿನಲ್ಲಿ ನಿರ್ದಿಷ್ಟಮಾಡಿದ ಕರ್ತವ್ಯಗಳನ್ನು ಮಾಡಲು ಪಂಚಾಯತವು ಬದ್ಧವಾಗಲಾರದು.

**೨೮ ಅ. ಎರಡು ಅಥವಾ ಅಧಿಕ ಸ್ಥಾನಿಕ ಸಂಸ್ಥೆಗಳಿಂದ ರಚಿತವಾದ ಸಂಯುಕ್ತ ಸಮಿತಿಗಳು.**

(೧) ಪಂಚಾಯತಿಯು ಕಾಲಕಾಲಕ್ಕೆ ಎರಡನೇ ಯಾವುದೇ ಪಂಚಾಯತಿ ಅಥವಾ ಯಾವುದೇ ನಗರಸಭೆ, ಜಿಲ್ಹಾ ಲೋಕಲ್ ಬೋರ್ಡು, ಕ್ಯಾಂಟೋನಮೆಂಟ ಅಥಾರಿಟಿ ಅಥವಾ ಪ್ರಸಿದ್ಧಮಾಡಲ್ಪಟ್ಟ ಪ್ರದೇಶದ ಬಗ್ಗೆ ನೇಮಿಸಲ್ಪಟ್ಟ ಸಮಿತಿ ಅಥವಾ ಇಂಥ ಒಂದಕ್ಕಿಂತ ಅಧಿಕ ಪಂಚಾಯತಿ ನಗರಸಭೆ, ಜಿಲ್ಹಾ ಲೋಕಲ್ ಬೋರ್ಡು, ಕ್ಯಾಂಟೋನಮೆಂಟ ಅಥಾರಿಟಿಗಳ ಅಥವಾ ಸಮಿತಿಗಳ ಸಂಗಡ ಈ ಕೆಳಗಿನ ವಿಷಯಗಳಲ್ಲಿ ಅಂದರೆ—

ಅ] ಯಾವ ಉದ್ದೇಶದಲ್ಲಿ ಸಂಯುಕ್ತ ಹಿತಸಂಬಂಧವಿರುವದೋ ಅಂಥ ಉದ್ದೇಶಕ್ಕಾಗಿ ತಮ್ಮ ತಮ್ಮ ವ್ಯಕ್ತಿವಿಷಯಕ ಸಮಿತಿಗಳಿಂದ ಒಂದು ಸಂಯುಕ್ತ ಸಮಿತಿಯನ್ನು ನೇಮಿಸುವ ಮತ್ತು ಇಂಥ ಸಮಿತಿಯ ಅಧ್ಯಕ್ಷನನ್ನು ನೇಮಿಸುವ ವಿಷಯದಲ್ಲಿ,

ಬ] ಯಾವುದೇ ಒಂದು ಸಂಯುಕ್ತ ಕಾರ್ಯವನ್ನು ರಚಿಸುವ ಮತ್ತು ಅದರ ಮುಂದಿನ ಸಂರಕ್ಷಣೆ ಮಾಡುವಬಗ್ಗೆ ಇಂಥ ಪ್ರತ್ಯೇಕ ಸಮಿತಿಗೆ ಬಂಧನಕಾರಕ ವಾಗುವ ಶರ್ತುಗಳನ್ನು ತಯಾರಿಸುವ ಅಧಿಕಾರ ಮತ್ತು ಇಂಥ ಸಮಿತಿಗಳಲ್ಲಿ ಯಾವುದೇ ಸಮಿತಿಯು ಆ ಅಧಿಕಾರವನ್ನು ನಡಿಸುವ ಹಕ್ಕನ್ನು ಕೊಡುವ ವಿಷಯದಲ್ಲಿ,

ಕ] ಇಂಥ ಯಾವುದೇ ಸಮಿತಿಯ ಕೆಲಸದ, ಮತ್ತು ಯಾವ ಉದ್ದೇಶದ ಸಲುವಾಗಿ ಇಂಥ ಸಮಿತಿಯು ನೇಮಿಸಲ್ಪಟ್ಟಿದೆಯೋ ಆ ಉದ್ದೇಶದ ಸಂಬಂಧ ನಡೆಯುವ ಪತ್ರವ್ಯವಹಾರದ ವ್ಯವಸ್ಥೆ ಮಾಡುವದಕ್ಕಾಗಿ ನಿಯಮಗಳನ್ನು ಮಾಡುವ ಮತ್ತು ಅವುಗಳನ್ನು ಬದಲಿಸುವ ವಿಷಯದಲ್ಲಿ,

(೨) ಪ್ರಾಂತಿಕ ಸರಕಾರದ ಮಂಜೂರಿಗೊಳಪಟ್ಟು, ಪಂಚಾಯತಿಯು, ಕಾಲಕಾಲಕ್ಕೆ ಯಾವುದೇ ಪಂಚಾಯತ ಇಲ್ಲವೆ ನಗರಸಭೆ, ಲೋಕಲ್ ಬೋರ್ಡು, ಕ್ಯಾಂಟೋನಮೆಂಟ ಅಥಾರಿಟಿ ಅಥವಾ ಜಾಹೀರ ಮಾಡಿದ ಪ್ರದೇಶದಬಗ್ಗೆ ನೇಮಿಸಲ್ಪಟ್ಟ ಸಮಿತಿಯ ಸಂಗಡ ಅಥವಾ ಇಂಥ ಸಂಸ್ಥೆಗಳ ಗುಂಪಿನ ಸಂಗಡ "ಅಕ್ಟ್ರಾಯ" ಕರ ಕೂಡ್ರಿಸುವ ವಿಷಯದಲ್ಲಿ ಕರಾರು ಮಾಡಿಕೊಳ್ಳಬಹುದು. ಹೀಗೆ ಕರಾರು ಮಾಡಿಕೊಳ್ಳುವ ಸಂಸ್ಥೆಗಳಿಂದ ಆ ಪ್ರದೇಶದ ಹದ್ದಿಯಲ್ಲಿ ಪ್ರತ್ಯೇಕವಾಗಿ "ಅಕ್ಟ್ರಾಯ" ಕರವು ಹೇರಲ್ಪಡದೆ, ಅದು ಹೀಗೆ ಕರಾರು ಮಾಡಿಕೊಳ್ಳುವ ಸಂಸ್ಥೆಗಳ ನಿಯಂತ್ರಣಕ್ಕೊಳಪಟ್ಟು, ಅವುಗಳಿಂದ ಒಟ್ಟಾಗಿಯೇ ಹೇರಲ್ಪಡಬಹುದು.

(೩) ಪಂಚಾಯತಿಯು ಯಾವುದೇ ವಿಷಯದ ಸಂಬಂಧ ೧ ನೇ ಅಥವಾ ೨ ನೇ ಉಪಕಲಮಿನನ್ವಯ ಯಾವುದೇ ಎರಡನೇ ಸ್ಥಾನಿಕ ಅಧಿಕಾರ ಸಂಸ್ಥೆಯ ಸಮ್ಮತಿಯನ್ನು ಕೇಳಿದಾಗ್ಗೆ, ಆ ಸ್ಥಾನಿಕ ಅಧಿಕಾರ ಸಂಸ್ಥೆಯು ಸಮ್ಮತಿಸದಿದ್ದರೆ, ಕ್ಯಾಂಟೋನಮೆಂಟ ಅಥಾರಿಟಿಯನ್ನು ಬಿಟ್ಟು ಎರಡನೇ ಯಾವುದೇ ಸ್ಥಾನಿಕ ಅಧಿಕಾರ ಸಂಸ್ಥೆಯು ಆ ವಿಷಯಕ್ಕೆ ಸಮ್ಮತಿಯನ್ನು ಕೊಡುವಂತೆ, ಕಮೀಶನರು ತನಗೆ ಯೋಗ್ಯಕಂಡ ಆಜ್ಞೆಯನ್ನು ವಿಧಿಸಬಹುದು; ಮತ್ತು ಇಂಥ ಎರಡನೇ ಸ್ಥಾನಿಕ ಅಧಿಕಾರ ಸಂಸ್ಥೆಯು ಆ ಆಜ್ಞೆಯನ್ನು ಪಾಲಿಸಬೇಕು.

(೪) ಈ ಕಲಮಿನನ್ವಯ ನಡೆದು ಕೊಳ್ಳುವಾಗ್ಗೆ ಸ್ಥಾನಿಕ ಸಂಸ್ಥೆಗಳಲ್ಲಿ ಭಿನ್ನಾಭಿಪ್ರಾಯವಾದರೆ, ಪ್ರಾಂತಿಕ ಸರಕಾರದ ಇಲ್ಲವೆ ಪ್ರಾಂತಿಕ ಸರಕಾರವು ಈ ಸಂಬಂಧದಲ್ಲಿ ನೇಮಿಸುವ ಅಧಿಕಾರಿಯ ನಿರ್ಣಯವು ಕೊನೆಯದಾಗುವದು.

ಆದರೆ ಗೊತ್ತುಪಡಿಸುವದೇನಂದರೆ, ಸ್ಥಾನಿಕ ಸಂಸ್ಥೆಗಳಲ್ಲಿ ಒಂದು ಕ್ಯಾಂಟೋನಮೆಂಟ ಅಥಾರಿಟಿ ಇದ್ದರೆ, ಪ್ರಾಂತಿಕ ಸರಕಾರದ ಅಥವಾ ಅದರ ಅಧಿಕಾರಿಯ ನಿರ್ಣಯವು ಕೇಂದ್ರ ಸರಕಾರದ ಸಮ್ಮತಿಗೆ ಒಳಪಟ್ಟಿರಬೇಕು.

**೨೮ ಬ. ಸರಕಾರವು ಕೆಲವು ಭೂಮಿಗಳನ್ನು ಪಂಚಾಯತದ ಸ್ವಾಧೀನಮಾಡಬಹುದು.**

ಈ ವಿಭಾಗದ ಉದ್ದೇಶಗಳ ಸಲುವಾಗಿ, ಬೈಲು ಜಾಗೆಗಳು, ಪಡ ಭೂಮಿಗಳು, ಬರಿದಾದ ಭೂಮಿಗಳು ಅಥವಾ ಹುಲ್ಲುಗಾವಲುಗಳು, ಸಾರ್ವಜನಿಕ ಬೀದಿಗಳು ಮತ್ತು ಮಾರ್ಗಗಳು, ಭಾವಿಗಳು, ನದಿಯ ಓಡಲುಗಳು, ಕೆರೆಗಳು ಗಿಡಗಳು ಅಥವಾ ಗ್ರಾಮದಲ್ಲಿದ್ದ ಸರಕಾರದ ಯಾವುದೇ ಆಸ್ತಿ ಇವುಗಳನ್ನು ಸರಕಾರವು ತನಗೆ ಯೋಗ್ಯಕಂಡ ಕರಾರುಗಳನ್ನು ಮತ್ತು ನಿರ್ಬಂಧಗಳನ್ನು ಹೇರಿ ಪಂಚಾಯತಿಯ ಸ್ವಾಧೀನಕ್ಕೆ ಕೊಡಬಹುದು.

**೨೮ ಕ. ಸಾರ್ವಜನಿಕ ಮಾರ್ಗ ಮತ್ತು ಬೈಲು ಜಾಗೆಗಳ ಮೇಲೆ ಅತಂಕ ಮತ್ತು ಅತಿಕ್ರಮಣ.**

(೧) ಯಾವನೊಬ್ಬನು ಗ್ರಾಮದ ಹದ್ದಿಯಲ್ಲಿ ಯಾವುದೇ ಸಾರ್ವಜನಿಕ ಮಾರ್ಗದಲ್ಲಿ ಅಥವಾ ಸ್ಥಳದಲ್ಲಿ ಅಥವಾ ಇಂಥ ಮಾರ್ಗದಲ್ಲಿಯ ಅಥವಾ ಸ್ಥಳದಲ್ಲಿಯ ಅನಾಚ್ಛಾದಿತ ಹರಿ [ಮೋರಿ] ಅಥವಾ ಗಟಾರ ಇಲ್ಲವೆ ಬಚ್ಚಲ ಹರಿಯಲ್ಲಿ ಅಥವಾ ಅದರಮೇಲೆ,

ಅ] ಯಾವುದೇ ಗೋಡೆ ಅಥವಾ ಬೇಲಿ, ರೇಲ,ಕಂಬ, ಅಂಗಡಿ, ವರ್ಣಾಂಡಾ, ಕಟ್ಟೆ, ತಳಹದಿ, ಪಾವಟಿಗೆ ಅಥವಾ ಯಾವುದೇ ಮುಂದೆ ಹಾಯಿದ ಕಟ್ಟಡ ಅಥವಾ ವಸ್ತು ಅಥವಾ ಇತರ ಅತಿಕ್ರಮಣ ಅಥವಾ ಆತಂಕವನ್ನು ಮಾಡಿದ್ದರೆ, ಇಲ್ಲವೆ ನಿಲ್ಲಿಸಿದ್ದರೆ ಅಥವಾ ಮಾಡಿದರೆ ಇಲ್ಲವೆ ನಿಲ್ಲಿಸಿದರೆ, ಅಥವಾ

ಬ] ಯಾವನೊಬ್ಬನು, ಪೆಟ್ಟಿಗೆ, ಅಂಡಿಕೆ [ಮೂಟೆ], ಗಂಟು ಅಥವಾ ವ್ಯಾಪಾರದ ಸರಕು ಅಥವಾ ಯಾವುದೇ ಇತರ ವಸ್ತುಗಳನ್ನು ಇಟ್ಟಿದ್ದರೆ, ಇಲ್ಲವೆ ಇಡುತ್ತಿದ್ದರೆ,

ಅವನಿಗೆ, ಅವನ ಮೇಲಿನ ಆರೋಪವು ಸಿದ್ಧವಾದರೆ ಅತಿ ಹೆಚ್ಚೆಂದರೆ ೨೦ ರೂಪಾಯಿ ವರೆಗೆ ದಂಡ ವಿಧಿಸಲ್ಪಡುವವು. ಮತ್ತು ಇಂಥ ಆರೋಪವು ಮೊದಲನೇಸಲ ಸಿದ್ಧವಾದ ತಾರೀಖಿನ ನಂತರ ಇಂಥ ಮುಂದೆ ಹಾಯಿದ ಕಟ್ಟಡ, ಅತಿಕ್ರಮಣ, ಆತಂಕ ಅಥವಾ ಇಡುವಿಕೆ ಮುಂದುವರಿದ ಪ್ರತಿ ದಿವಸಕ್ಕೆ ಅತಿಹೆಚ್ಚೆಂದರೆ ೧ ರೂಪಾಯಿ ವರೆಗೆ ದಂಡವಿಧಿಸಲ್ಪಡುವದು.

(೨) ಇಂಥ ಯಾವುದೇ ಆತಂಕ ಇಲ್ಲವೆ ಅತಿಕ್ರಮಣವನ್ನು ದೂರು ಮಾಡುವ ಅಧಿಕಾರ ಪಂಚಾಯತಿಗೆ ಅದೆ. ಮತ್ತು ಖಾಸಗಿ ಒಡೆತನದಲ್ಲಿರದ ಬೈಲು ಸ್ಥಳದಲ್ಲಿ, ಇಂಥ ಸ್ಥಳವು ಪಂಚಾಯತಿಯ ಸ್ವಾಧೀನದಲ್ಲಿರಲಿ ಅಥವಾ ಇರದಿರಲಿ, ತತ್ಸಮ ಸ್ವರೂಪದ ಯಾವುದೇ ಅನಧಿಕೃತ ಆತಂಕ ಅಥವಾ ಅತಿಕ್ರಮಣವನ್ನು ತೆಗೆದು ಹಾಕುವ ಅಧಿಕಾರ ಅದಕ್ಕಿದೆ. ಆದರೆ ಸದರ ಸ್ಥಳವು ಸರಕಾರದ ಒಡೆತನಕ್ಕೆ ಸೇರಿದ್ದಾದರೆ, ಕಲೆಕ್ಟರನ ಅಥವಾ ಅವನಿಂದ ಈ ಸಂಬಂಧದಲ್ಲಿ ಅಧಿಕಾರ ಪಡೆದ ಯಾವನೇ ಅಧಿಕಾರಿಯ ಅಪ್ಪಣೆಯನ್ನು ಮೊದಲು ಪಡಕೊಳ್ಳಬೇಕು. ಇಂಥ ಆತಂಕ ಅಥವಾ ಅತಿಕ್ರಮಣವನ್ನು ದೂರುಮಾಡುವ ವೆಚ್ಚವನ್ನು ಇಂಥ ಆತಂಕ ಅಥವಾ ಅತಿಕ್ರಮಣವನ್ನು ಯಾವನು ಮಾಡಿರುವನೋ ಅವನು ಕೊಡಬೇಕು. ಮತ್ತು ಆ ವೆಚ್ಚವನ್ನು ೯ ನೇ ವಿಭಾಗದನ್ವಯ ಯಾವುದೇ ಕರದ ಸಲುವಾಗಿ ಹಣವನ್ನು ವಸೂಲ ಮಾಡುವ ರೀತಿಯಲ್ಲಿ ವಸೂಲ ಮಾಡಬೇಕು.

(೩) ಆ ಸಂಬಂಧದಲ್ಲಿ ಯೋಗ್ಯ ಅಧಿಕಾರ ಪಡೆಯದ ಯಾವನೊಬ್ಬನು ಖಾಸಗಿ ಒಡೆತನಕ್ಕೆ ಸೇರದ ಯಾವುದೇ ಬೈಲು ಜಾಗೆಯಿಂದ ಮಣ್ಣು, ಉಸುಕು ಇಲ್ಲವೆ ಇತರ ವಸ್ತುವನ್ನು ತೆಗೆದೊಯ್ದರೆ ಅಥವಾ ಯಾವುದೇ ಬೈಲು ಜಾಗೆಯಲ್ಲಿ ಅಥವಾ ಅದರ ಮೇಲೆ ಯಾವುದೇ ಅತಿಕ್ರಮಣಮಾಡಿದರೆ, ಅವನಿಗೆ ಅವನ ಅಪರಾಧವು ಸಿದ್ಧವಾದನಂತರ ಅತಿ ಹೆಚ್ಚೆಂದರೆ ೪೦ ರೂಪಾಯಿಗಳ ವರೆಗೆ ದಂಡ ವಿಧಿಸಲ್ಪಡುವದು. ಮತ್ತು ಅತಿಕ್ರಮಣದ ವಿಷಯದಲ್ಲಿ ಅಪರಾಧವು ಮೊದಲನೇಸಲ ಸಿದ್ಧವಾದ ತಾರೀಖಿನ ನಂತರ, ಆ ಅಪರಾಧವು ಮುಂದುವರಿದ ಪ್ರತಿದಿವಸ ಮತ್ತೆ ಹೆಚ್ಚೆಂದರೆ ೨ ರೂಪಾಯಿಗಳವರೆಗೆ ದಂಡ ವಿಧಿಸಲ್ಪಡುವದು.

(೪) ಈ ಕಲಮಿನನ್ವಯ ಯಾವುದೇ ವಿಷಯದಿಂದ, ನಾಲ್ಕು ದಿವಸಗಳಿಗಿಂತ ಅಧಿಕವಲ್ಲದ ದಿವಸಗಳ ವರೆಗೆ ಮತ್ತು ಜನರಿಗೆ ಅಥವಾ ಯಾವುದೇ ವ್ಯಕ್ತಿಗೆ ಅನಾನುಕೂಲವಾಗದಂತೆ ಉತ್ಸವದ ಇಲ್ಲವೆ ಸಮಾರಂಭದ ಪ್ರಸಂಗದಲ್ಲಿ ಯಾವುದೇ ಸಾರ್ವಜನಿಕ ಬೀದಿಯನ್ನು ಉಪಯೋಗಿಸಲು ಇಲ್ಲವೆ ಅದರಲ್ಲಿ ತಾತ್ಪೂರ್ತಿಕ ಕಟ್ಟಡ ರಚಿಸಲು ಅಥವಾ ಯಾವುದೇ ಉಪಬೀದಿಗಳಲ್ಲಿ ಅಥವಾ ಸ್ಥಳಗಳಲ್ಲಿ ಉರುವಲವನ್ನು ಕೂಡಿಹಾಕಲು ಅಪ್ಪಣೆ ಕೊಡುವದಕ್ಕೆ ಪಂಚಾಯತಿಗೆ ಪ್ರತಿಬಂಧವಾಗಲಾರದು.



## ವಿಭಾಗ ೪.

# ಗ್ರಾಮಪಂಚಾಯತಿಯ ಸಂಸ್ಥಾಪನೆ, ಅದರ ಆಸ್ತಿ ಮತ್ತು ಫಂಡು.

**೨೯. ಗ್ರಾಮಪಂಚಾಯತಿಯ ಸಂಸ್ಥಾಪನೆ.**

ಪ್ರತಿಯೊಂದು ಪಂಚಾಯತವು "......ಗ್ರಾಮದ ಪಂಚಾಯತವು" ಎಂಬ ಹೆಸರಿನಿಂದ ಸಂಸ್ಥಾಪಿತವಾಗುವದು, ಮತ್ತು ಅದಕ್ಕೆ ನಿರಂತರವಾದ ಪರಂಪರೆಯೂ ಸಾಮಾನ್ಯ ಮುದ್ರೆ [ಮೋಹರು]ಯೂ ಇರುವವು, ಮತ್ತು ಅದು ತನ್ನ ಸಂಸ್ಥಾಪಿತ ಹೆಸರಿನಲ್ಲಿ ದಾವೆ ಮಾಡಬಹುದು ಮತ್ತು ತನ್ನ ಅಧಿಕಾರವುಳ್ಳ ಗ್ರಾಮದ ಹದ್ದುಗಳಲ್ಲಿ ಅಥವಾ ಹದ್ದುಗಳ ಹೊರಗೆ ಚರಾಚರ ಆಸ್ತಿಯನ್ನು ಸಂಪಾದಿಸಲಿಕ್ಕೆ ಮತ್ತು ಧಾರಣಮಾಡಲಿಕ್ಕೆ ಮತ್ತು ತನ್ನ ಸ್ವಾಧೀನದಲ್ಲಿ ಬರಬಹುದಾದ ಅಥವಾ ತಾನು ಸಂಪಾದಿಸಬಹುದಾದ ಜಂಗಮ ಅಥವಾ ಸ್ಥಾವರ ಆಸ್ತಿಯನ್ನು ಭಾಡಿಗೆ [ಲಾವಣಿ] ಕೊಡಲಿಕ್ಕೆ, ಮಾರಲಿಕ್ಕೆ ಅಥವಾ ಇತರ ರೀತಿಯಿಂದ ಪರಾಧೀನ ಮಾಡಲಿಕ್ಕೆ ಮತ್ತು ಕರಾರು ಮಾಡಿಕೊಳ್ಳಲಿಕ್ಕೆ ಮತ್ತು ಈ ಕಾನೂನಿನ ಉದ್ದೇಶಗಳಬಗ್ಗೆ ಅವಶ್ಯವಿರುವ ಇತರ ಯಾವತ್ತೂ ಸಂಗತಿಗಳನ್ನು ಮಾಡಲಿಕ್ಕೆ ಅಧಿಕಾರವಿದೆ.

ಆದರೆ ಗೊತ್ತುಪಡಿಸುವದೇನಂದರೆ, [೩೦ ನೇ ಕಲಮಿನ ೧ ನೇ ಉಪ ಕಲಮಿನಲ್ಲಿ ಉಲ್ಲೇಖಮಾಡಿದ ಆಸ್ತಿಗಳನ್ನು ಬಿಟ್ಟು] ೩ ವರ್ಷಗಳಿಗಿಂತ ಹೆಚ್ಚಿನ ಅವಧಿಯ ಸ್ಥಾವರಾಸ್ತಿಯ ಯಾವುದೇ ಲಾವಣಿ [ಭಾಡಿಗೆ] ಮತ್ತು ಇಂಥ ಯಾವುದೇ ಆಸ್ತಿಯ ಮಾರಾಟ ಅಥವಾ ಪರಾಧೀನ ಮಾಡುವಿಕೆಯು ಕಲೆಕ್ಟರನ ಪೂರ್ವ ಮಂಜೂರಿಯಿಲ್ಲದೆ ಮಾಡಲ್ಪಟ್ಟರೆ, ಅದು ಕ್ರಮಬದ್ಧ ವಾಗಲಾರದು.

**೩೦. ಪಂಚಾಯತಿಯ ಆಸ್ತಿ.**

(೧) ಲೋಕಲ್ ಬೋರ್ಡಿನ ವಶದಲ್ಲಿದ್ದ ಯಾವುದಾದರೂ ಆಸ್ತಿಯು ಪಂಚಾಯತಿಯ ವಶಕ್ಕೆ ಹೋಗಬೇಕೆಂದು ಆಗಾಗ್ಗೆ ಆಜ್ಞೆ ಹೊರಡಿಸಲು ಅಂಥ ಲೋಕಲ್ ಬೋರ್ಡಿಗೆ ಅಧಿಕಾರವಿದೆ. [ಹೀಗೆ ಆಜ್ಞೆ ಹೊರಟ ಮೇಲೆ, ಆ ಆಸ್ತಿಯು ೧೮೮೨ ನೇ ಇಸ್ವಿಯ ಟ್ರಾನ್ಸಫರ ಆಫ್ ಪ್ರಾಪರ್ಟಿ ಆಕ್ಟ (ಆಸ್ತಿಯನ್ನು ಪರಾಧೀನಮಾಡುವ ಕಾನೂನು) ಇದರಲ್ಲಿ ಅಥವಾ ೧೯೦೮ ನೇ ಇಸ್ವಿಯ ಇಂಡಿಯನ್ ರಜಿಸ್ಟ್ರೇಶನ್ ಆಕ್ಟ (ಭಾರತದ ನೊಂದಣಿ ಕಾನೂನು) ಇದರಲ್ಲಿ ಏನೇ ವಿಷಯ ಇದ್ದರೂ, ಪಂಚಾಯತಿಯ ವಶಕ್ಕೆ ಹೋಗುವದು].

ಆದರೆ ಗೊತ್ತುಪಡಿಸುವದೇನಂದರೆ, ಇಂಥ ಯಾವುದೇ ಆಸ್ತಿಯು ಯಾವುದೇ ಲಾವಣಿ [ಭಾಡಿಗೆ], ಮಾರಾಟ ಅಥವಾ ಇತರ ಪರಾಧೀನಮಾಡು ವಿಕೆಯು ಕಮೀಶನರರ ಮತ್ತು ಇಂಥ ಲೋಕಲ್ ಬೋರ್ಡಿನ ಮುಂಚಿತ ಮಂಜೂರಿಯಿಲ್ಲದಿದ್ದರೆ, ರದ್ದಾಗುವದು.

(೨) ಗ್ರಾಮದ ಫಂಡಿನ ಹಣದಿಂದ ಪಂಚಾಯತಿಯಿಂದ ರಚಿಸಲ್ಪಟ್ಟ ಪ್ರತಿಯೊಂದು ಕೆಲಸವು ಇಂಥ ಪಂಚಾಯತಿಯ ವಶಕ್ಕೆ ಹೋಗುವದು.

**೩೧. ಗ್ರಾಮದ ಫಂಡು.**

(೧) ಪ್ರತಿಯೊಂದು ಗ್ರಾಮದಲ್ಲಿ ಗ್ರಾಮದ ಫಂಡು ಎಂದು ಕರೆಯಲ್ಪಡುವ ಒಂದು ಫಂಡು [ನಿಧಿ] ಇರಬೇಕು.

(೨) ಈ ಕೆಳಗಿನವು ಗ್ರಾಮದ ಫಂಡಿನ ಭಾಗವಾಗಿರುವವು ಅಥವಾ ಗ್ರಾಮದ ಫಂಡಿಗೆ ಕೊಡಲ್ಪಡುವವು, ಅಂದರೆ—

ಅ] ೧೯೦೧ ನೇ ಇಸ್ವಿಯ ಮುಂಬಯಿ ಡಿಸ್ಟ್ರಿಕ್ಟ ಮುನಸಿಪಲ್ ಕಾನೂನಿನ ೧೯೧ ನೇ ಕಲಮಿನ ಠರಾವುಗಳನ್ವಯ ಪ್ರಾಂತಿಕ ಸರಕಾರದವರು ಗ್ರಾಮದ ಫಂಡಿಗೆ ನೇಮಿಸಿ ಕೊಡಬಹುದಾದ ಹಣ,

ಬ] ೮೯ ನೇ ಕಲಮಿನನ್ವಯ ಹೇರಲ್ಪಟ್ಟ ಯಾವುದೇ ಕರದ ಅಥವಾ ಫೀಯ ಉತ್ಪನ್ನ,

ಕ] ೪೫ ನೇ ಮತ್ತು ೪೬ ನೇ ಕಲಮುಗಳನ್ವಯ ವಸೂಲಮಾಡಿದ, ಪರಿಹಾರಧನವೆಂದು ಕೊಡಲು ಆಜ್ಞೆ ಮಾಡಲ್ಪಟ್ಟ ಎಲ್ಲ ರಕಮುಗಳು,

ಡ] ಗ್ರಾಮದ ಫಂಡಿಗೆ ಜಮಾ ಮಾಡಬೇಕೆಂದು ಕೋರ್ಟಿನಿಂದ ಅಜ್ಞೆಮಾಡಲ್ಪಟ್ಟ ಇತರ ಎಲ್ಲ ರಕಮುಗಳು,

ಈ] ಗ್ರಾಮದ ನೌಕರರು ಒಟ್ಟು ಗೂಡಿಸಿದ ಎಲ್ಲ ಧೂಳು, ಹೊಲಸು, ಶೆಗಣಿ ಅಥವಾ ಕಸಕಡ್ಡಿ [ವನ ಮುಂತಾದ ಪ್ರಾಣಿಗಳ ಪ್ರೇತ ಗಳನ್ನೊಳಗೊಂಡು] ಇವುಗಳ ಮಾರಾಟದಿಂದ ಬಂದ ಉತ್ಪನ್ನ, ಇಂಥ ಇಡೀ ಉತ್ಪನ್ನದಮೇಲೆ ಅಥವಾ ಅದರ ಭಾಗದ ಮೇಲೆ ಯಾವನೇ ಮನುಷ್ಯ ನಿಗೆ ಇರುವ ಹಕ್ಕನ್ನು ಹೊರ್ತುಪಡಿಸಿ;

ಫ] ಪ್ರಾಂತಿಕ ಸರಕಾರದವರು ಅಥವಾ ಜಿಲ್ಹಾ ಲೋಕಲ್ ಬೋರ್ಡು ಗ್ರಾಮದ ಫಂಡಿಗೆ ಕೊಟ್ಟ ರಕಮುಗಳು,

ಗ] ಪ್ರಾಂತಿಕ ಸರಕಾರದವರಿಂದ ಅಥವಾ ಜಿಲ್ಹಾ ಲೋಕಲ್ ಬೋರ್ಡಿನಿಂದ ಸಾಲ ಅಥವಾ ದೇಣಿಗೆಯೆಂದು ಪಡೆದ ಎಲ್ಲ ರಕಮು.

ಹ] [ಬಿಟ್ಟು ಬಿಡಲಾಗಿದೆ].

ಇ] ಪಂಚಾಯತಿಯ ವಶದಲ್ಲಿದ್ದ ಯಾವುದೇ ಆಸ್ತಿಯ ಉತ್ಪನ್ನ ಅಥವಾ ಅದರ ಮಾರಾಟದಿಂದ ಬಂದ ಹಣ, ಮತ್ತು

ಜ] ೫೯ ನೇ ಕಲಮಿನನ್ವಯ ದಾವೆ ಮತ್ತು ಖಟ್ಲೆಗಳನ್ನು ದಾಖಲ ಮಾಡುವಬಗ್ಗೆ ಹಾಕಿದ ಫೀಗಳು.

**೩೨. ಗ್ರಾಮದ ಫಂಡಿನ ವಿನಿಯೋಗ.**

ಈ ಕಾನೂನಿನ್ವಯ ಪಂಚಾಯತದ ವಶದಲ್ಲಿದ್ದ ಯಾವತ್ತೂ ಆಸ್ತಿಯು, ಮತ್ತು ಈ ಕಾನೂನಿನ ಠರಾವುಗಳ ಮೇರೆಗೆ ಅದು ಪಡೆದ ಯಾವತ್ತೂ ಫಂಡುಗಳು, ಮತ್ತು ಆಯಾ ಕಾಲದಲ್ಲಿ ಅಮಲಿನಲ್ಲಿರುವ ಯಾವುದೇ ಕಾನೂ ನಿನ ಠರಾವುಗಳನ್ವಯ ಅದಕ್ಕೆ ದೊರೆಯುವ ಎಲ್ಲ ಹಣಗಳು, ಈ ಕಾನೂನಿನ ಠರಾವುಗಳಿಗೊಳಪಟ್ಟು ಮತ್ತು ಈ ಕಾನೂನಿನ ಉದ್ದೇಶಗಳಿಗಾಗಿ ವಿನಿಯೋಗಿ ಸಲ್ಪಡಬೇಕು. ಮತ್ತು ಇಂಥ ಎಲ್ಲ ಫಂಡುಗಳು ಮತ್ತು ಹಣಗಳು ಠರಾಯಿಸಲ್ಪಡಬಹುದಾದ ರಕ್ಷಣೆ [ತಾಬಾ] ಯಲ್ಲಿ ಇಡಲ್ಪಡಬೇಕು.

# ವಿಭಾಗ ೫.

## ನೌಕರವರ್ಗ ಮತ್ತು ಲೆಖ್ಖಗಳು.

**೩೩. ಪಂಚಾಯತದ ಸೆಕ್ರೆಟರಿ.**

(೧) ಪ್ರತಿಯೊಂದು ಪಂಚಾಯತವು ಒಬ್ಬ ಸೆಕ್ರೆಟರಿಯನ್ನು ನೇಮಿಸಬೇಕು. ಮತ್ತು ಅವನು ಪಂಚಾಯತದ ನೌಕರನಾಗುವನು. ಆದರೆ, ಒಂದಕ್ಕೊಂದು ೩ ಮೈಲುಗಳ ಅಂತರದೊಳಗಿದ್ದ ಗ್ರಾಮಗಳಿಗಾಗಿ ಸ್ಥಾಪಿಸಲ್ಪಟ್ಟ ಬೇಕಾದ ಎರಡು ಅಥವಾ ಅಧಿಕ ಪಂಚಾಯತಗಳು, ಮತ್ತು ಇಂಥ ಪ್ರತಿಯೊಂದು ಪಂಚಾಯತದ ವಾರ್ಷಿಕ ಆದಾಯ ೧೫೦೦ ರೂಪಾಯಿಗಿಂತ ಅಧಿಕವಿರದಿದ್ದರೆ ಆ ಎಲ್ಲ ಪಂಚಾಯತಗಳಿಗೆಲ್ಲ, ಸೆಕ್ರೆಟರಿಯೆಂದು ಒಬ್ಬನನ್ನೇ ನೇಮಿಸಬಹುದು. ಇಂಥ ಪಂಚಾಯತಗಳು, ರಾಜ್ಯದ ಸರಕಾರವು ಕಾಲಕಾಲಕ್ಕೆ ಗೊತ್ತುಪಡಿಸುವ ಪ್ರಮಾಣದಲ್ಲಿ ಸೆಕ್ರೆಟರಿಯ ಪಗಾರ ಮತ್ತು ಭತ್ತೆಯನ್ನು ಕೊಡಬೇಕು.

ಅಲ್ಲದೆ ಒಂದಕ್ಕೊಂದು ೩ ಮೈಲುಗಳ ಅಂತರ ದೊಳಗಿದ್ದ ಗ್ರಾಮಗಳಿಗಾಗಿ ಒಂದಕ್ಕಿಂತ ಅಧಿಕ ಪಂಚಾಯತಗಳು ಸ್ಥಾಪಿತವಾಗಿದ್ದ ಪಕ್ಷದಲ್ಲಿ, ಮೂರಕ್ಕಿಂತ ಅಧಿಕವಲ್ಲದ ಇಂಥ ಪಂಚಾಯತಗಳು, ಅವುಗಳಲ್ಲಿ ಯಾವುದೊಂದು ಪಂಚಾಯತದ ವಾರ್ಷಿಕ ಆದಾಯ ೧೫೦೦ ರೂಪಾಯಿಗಿಂತ ಅಧಿಕವಿದ್ದ ಸಂಗತಿಯನ್ನು ಗಮನಿಸದೆ, ರಾಜ್ಯ ಸರಕಾರದ ಪೂರ್ವ ಸಮ್ಮತಿ ಪಡೆದು ಎಲ್ಲ ಪಂಚಾಯತಗಳಿಗೆ ಕೂಡಿಯೇ ಒಬ್ಬನನ್ನೇ ಸೆಕ್ರೆಟರಿಯೆಂದು ನೇಮಿಸಬಹುದು.

೧ ಅ] ಅವನ ಅರ್ಹತೆ, ಅಧಿಕಾರಗಳು, ಕರ್ತವ್ಯಗಳು ಸಂಬಳ ಮತ್ತು ನೌಕರಿಯ ಕರಾರುಗಳು [ಶಿಸ್ತಿನ ಸಂಬಂಧದ ವಿಷಯಗಳನ್ನು ಕೂಡಿಕೊಂಡು] ಠರಾಯಿಸಲ್ಪಡಬಹುದಾದಂತೆ ಇರಬೇಕು.

(೨) ಪ್ರಾಂತಿಕ ಸರಕಾರದವರು ಇಂಥ ಸೆಕ್ರೆಟರಿಯ ಸಂಬಳದ ಮತ್ತು ಭತ್ತೆಯ ೩/೪ ಭಾಗವನ್ನು ಕೊಡಬೇಕು.

(೩) ೧೯೪೭ ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತ ಕಾನೂನು [ತಿದ್ದುಪಡೆಯಾದದ್ದು] ಅಮಲಿನಲ್ಲಿ ಬಂದ ದಿನ ಅಧಿಕಾರ ಪದ ದಲ್ಲಿದ್ದ, ಪಂಚಾಯತಿಯ ಪ್ರತಿಯೊಬ್ಬ ಸೆಕ್ರೆಟರಿಯು ೧ ನೇ ಉಪಕಲಮಿ ನನ್ವಯ ನೇಮಿಸಲ್ಪಟ್ಟಿರುವನೆಂದು ತಿಳಿಯಬೇಕು.

## ೩೪. ನೌಕರರ ಯಾದಿ.

೯೮ ನೇ ಕಲಮಿನ ಠರಾವುಗಳಿಗೊಳಪಟ್ಟು ಈ ಕಾನೂನಿನ ಮೇಲಿಂದ ಅಥವಾ ಈ ಕಾನೂನಿನನ್ವಯ ಪಂಚಾಯತಕ್ಕೆ ಒಪ್ಪಿಸಲ್ಪಟ್ಟ ಕೆಲಸಗಳನ್ನು ಕೊನೆಗಾಣಿಸುವಬಗ್ಗೆ ಅವಶ್ಯವಿದ್ದ ತನ್ನ ನೌಕರರ ಸಂಖ್ಯೆಯನ್ನು, ಅವರ ಸಂಬಳಗಳನ್ನೂ ಠರಾಯಿಸಿ, ಅವುಗಳ ಯಾದಿಯೊಂದನ್ನು ಪಂಚಾಯತವು ಜಿಲ್ಲಾ ಲೋಕಲ್ ಬೋರ್ಡಿಗೆ ಅದರ ಮಾಹಿತಿಗೋಸ್ಕರ ಕಳುಹಿಸಬೇಕು.

## ೩೫. ನೌಕರರ ನೇಮಣೂಕ.

(೧) ಸರಪಂಚನು ಪಂಚಾಯತದ ನೌಕರರನ್ನು ನೇಮಿಸಬೇಕು ಮತ್ತು ತನ್ನ ಕಡೆಗೆ ಇದ್ದ ಗ್ರಾಮ ಫಂಡಿನೊಳಗಿಂದ ಅವರ ಸಂಬಳವನ್ನು ಕೊಡಬೇಕು. ಇದಲ್ಲದೆ ಅವಸರದ ಪ್ರಸಂಗಗಳಲ್ಲಿ ಅವನು ತನಗೆ ಸರಿ ದೋರಿದಂತೆ ಹಂಗಾಮಿ ನೌಕರರನ್ನು ನೇಮಿಸಬಹುದು. ಸರಪಂಚನು ಆಗಾಗ್ಗೆ ತಾನು ನೇಮಿಸಿದ ಯಾವನೇ ನೌಕರನಿಗೆ ಲೇಖಿ ಆಜ್ಞೆಯಿಂದ ದಂಡ ಮಾಡಬಹುದು ಸಸ್ಪೆಂಡ ಮಾಡಬಹುದು ಅಥವಾ ಅವನನ್ನು ಕೆಲಸದಿಂದ ತೆಗೆದು ಹಾಕಬಹುದು.

(೨) ೧ ನೇ ಕಲಮಿನನ್ವಯ ಮಾಡಲ್ಪಟ್ಟ ಯಾವುದೇ ಆಜ್ಞೆಯ ವಿರುದ್ಧ ಪಂಚಾಯತಿಗೆ ಅಪೀಲು ಮಾಡಿಕೊಳ್ಳಲು ಬರುವದು.

**೩೬. ಮುಂಗಡಪತ್ರ ಮತ್ತು ಲೆಖ್ಖಗಳು ಪಂಚಾಯತವು ಗ್ರಾಮದ ರಹವಾಸಿಗಳ ಸಭೆ ಕರೆಯುವಿಕೆ.**

(೧) ಪಂಚಾಯತವು ಪ್ರಾಂತಿಕ ಸರಕಾರದವರು ಠರಾಯಿಸ ಬಹು ದ ತಾರೀಖಿಗೆ ಅಥವಾ ತಾರೀಖಿನಮೊದಲು ಮತ್ತು ಅಂಥ ನಮೂನೆಯ ಪ್ರಕಾರ—

ಅ] ಮುಂದಿನ ವರ್ಷದಬಗ್ಗೆ ಪಂಚಾಯತದ ಪ್ರಾರಂಭಿಕ ಶಿಲ್ಕು ಮತ್ತು ಅಂದಾಜುಮಾಡಿದ ಉತ್ಪನ್ನ;

ಬ] ನೌಕರ ವರ್ಗದ ಸಲುವಾಗಿ ಮತ್ತು ೨೬ ನೇ ಕಲಮಿನ ೧ ನೇ ಉಪಕಲಮಿನಲ್ಲಿ ನಿರ್ದಿಷ್ಟಮಾಡಿದ ಕೆಲಸಗಳನ್ನು ನೆರವೇರಿಸುವದಕ್ಕಾಗಿ ಯೋಚಿಸಿದವೆಚ್ಚ,

ಕ] ೨೬ ನೇ ಕಲಮಿನ ೨ ನೇ ಉಪಕಲಮಿನನ್ವಯ ಮತ್ತು ೨೮ ನೇ ಕಲಮಿನ ೧ ನೇ ಉಪಕಲಮಿನನ್ವಯ ಯೋಚಿಸಿದ ವೆಚ್ಚ.

ಇವುಗಳ ಒಂದು ಪತ್ರಕ (Statement) ವನ್ನು ಪ್ರತಿವರ್ಷ ತಯಾರಿಸಬೇಕು ಮತ್ತು ಅದನ್ನು ಜಿಲ್ಹಾ ಲೋಕಲ್ ಬೋರ್ಡಿಗೆ ಸಾದರ ಪಡಿಸಬೇಕು.

(೨) ಇಂಥ ಪತ್ರಕವು ಮುಟ್ಟಿದ ತಾರೀಖಿನಿಂದ ೩ ತಿಂಗಳೊಳಗಾಗಿ ಜಿಲ್ಹಾ ಲೋಕಲ್ ಬೋರ್ಡು ಅದನ್ನು ಮಂಜೂರ ಮಾಡಬೇಕು, ಅಥವಾ ೨೬ ನೇ ಮತ್ತು ೨೮ ನೇ ಕಲಮುಗಳಲ್ಲಿ ನಿರ್ದಿಷ್ಟಮಾಡಿದ ಕೆಲಸಗಳ ಪೈಕಿ ಯಾವುದಾದರೊಂದು ಕೆಲಸದ ಯೋಚಿಸಿದ ವೆಚ್ಚವನ್ನು ಹೆಚ್ಚು ಅಥವಾ ಕಡಿಮೆ ಮಾಡಬೇಕೆಂದು ತಿಳಿಸಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಮುಂದಿನ ವರ್ಷದಬಗ್ಗೆ ಅಂದಾಜು ಮಾಡಿದ ಗ್ರಾಮದ ಫಂಡಿನ ಉತ್ಪನ್ನಕ್ಕಿಂತ ಮತ್ತು ಪ್ರಾರಂಭಿಕ ಶಿಲ್ಕಿಗಿಂತ ಯೋಚಿಸಿದ ಒಟ್ಟು ವೆಚ್ಚವು ಹೆಚ್ಚಾಗಬೇಕೆಂದು ಆದೇಶಕೊಡುವ ಅಧಿಕಾರ ಜಿಲ್ಹಾ ಲೋಕಲ್ ಬೋರ್ಡಿಗೆ ಇಲ್ಲ.

(೩) ೩೩ ನೇ ಕಲಮಿನನ್ವಯ ಸೆಕ್ರೆಟರಿಯು ಪಂಚಾಯತದ ಲೆಖ್ಖಪತ್ರಗಳನ್ನು ಠರಾಯಿಸಲ್ಪಡಬಹುದಾದ ನಮೂನೆಯಲ್ಲಿ ಇಡಬೇಕು. ಅವನು ಪಂಚಾಯತದ ವಾರ್ಷಿಕ ವರದಿಯನ್ನು ತಯಾರಿಸಬೇಕು ಮತ್ತು ಲೆಖ್ಖಗಳನ್ನೂ ಹಾಗೂ ವರದಿಯನ್ನು ಪಂಚಾಯತದ ಮುಂದೆ ಮಂಜೂರಿಗಾಗಿ ಇಡಬೇಕು. ಮಂಜೂರಾದ ವಾರ್ಷಿಕ ವರದಿ ಸಹಿತವಾಗಿ ಇಂಥ ಲೆಖ್ಖಗಳ ವಾರ್ಷಿಕ ಪತ್ರಿಕೆಗಳು ಠರಾಯಿಸಲ್ಪಡಬಹುದಾದ ತಾರೀಖಿನ ದಿವಸ ಅಥವಾ ಅದಕ್ಕಿಂತ ಮೊದಲು ಮತ್ತು ಠರಾಯಿಸಲ್ಪಡಬಹುದಾದ ನಮೂನೆಯಲ್ಲಿ ತಯಾರಿಸಲ್ಪಟ್ಟು, ಜಿಲ್ಹಾ ಲೋಕಲ್ ಬೋರ್ಡಿಗೆ ಕಳಿಸಲ್ಪಡಬೇಕು.

(೪) ಪಂಚಾಯತವು ಠರಾಯಿಸಿದ ರೀತಿಯಲ್ಲಿ ಮತ್ತು ವೇಳೆಗೆ ಗ್ರಾಮದ ಯಾವತ್ತೂ ಪ್ರೌಢ ರಹವಾಸಿಗಳ ಸಭೆಯನ್ನು ಕರಿಯಬೇಕು. ಮತ್ತು ಹಿಂದಿನ ವರ್ಷದ ಲೆಖ್ಖದ ಪತ್ರಿಕೆಗಳನ್ನು, ಹಿಂದಿನ ವರ್ಷದ ಆಡಳಿತೆಯ ವರದಿಯನ್ನು ಮತ್ತು ಮುಂದಿನ ವರ್ಷದಬಗ್ಗೆ ಯೋಚಿಸಿದ ಕಾರ್ಯಕ್ರಮವನ್ನು ಇಂಥ ಸಭೆಯಲ್ಲಿ ಓದಿ ಹೇಳಬೇಕು.



# ವಿಭಾಗ ೬.

## ನ್ಯಾಯಪಂಚಾಯತಿಗಳ ರಚನೆ, ಮತ್ತು ಅಧಿಕಾರಗಳು.

**೩೬. ನ್ಯಾಯ ಪಂಚಾಯತಗಳ ಚುನಾವಣಿ.**

(೧) ಪ್ರತಿಯೊಂದು ಪಂಚಾಯತವು ತನ್ನ ಮೊದಲನೇ ಸಭೆಯಲ್ಲಿ, ಠರಾಯಿಸಲ್ಪಟ್ಟ ರೀತಿಯಲ್ಲಿ ತನ್ನ ಸಭಾಸದರಲ್ಲಿ ಐವರನ್ನು ನ್ಯಾಯ ಪಂಚಾಯತದ ರಚನೆಗಾಗಿ ಚುನಾಯಿಸಬೇಕು.

(೧ ಅ) ೧ ನೇ ಉಪಕಲಮಿನನ್ವಯ ನ್ಯಾಯ ಪಂಚಾಯತದ ಸಭಾಸದನ ಚುನಾವಣಿಯ ಸಂಬಂಧ ಯಾವುದೇ ಪ್ರಶ್ನೆ, ಸಂದೇಹ ಅಥವಾ ತಂಟೆ ಉತ್ಪನ್ನವಾದರೆ ಅದನ್ನು ಕಲೆಕ್ಟರನ ಕಡೆಗೆ ನಿರ್ಣಯಕ್ಕಾಗಿ ಕಳಿಸಬೇಕು. ಕಲೆಕ್ಟರನ ನಿರ್ಣಯವು ಕೊನೆಯದಾಗುವದು; ಮತ್ತು ಇಂಥ ಪ್ರಶ್ನೆ, ಸಂದೇಹ ಅಥವಾ ತಂಟೆಯ ಸಂಬಂಧ ಯಾವುದೇ ಕೋರ್ಟಿನಲ್ಲಿ ದಾವೆ ಅಥವಾ ಇತರ ಕಾಯಿದೆಯ ಕೆಲಸ ನಡೆಯಲಾರದು.

(೨) ಈ ರೀತಿಯಿಂದ ಚುನಾಯಿಸಲ್ಪಟ್ಟ ೫ ಜನ ಸಭಾಸದರಿಂದಲೇ ನ್ಯಾಯ ಪಂಚಾಯತವು ರಚಿತವಾಗುವದು; ಮತ್ತು ಪ್ರಾಂತಿಕ ಸರಕಾರದವರು ಇಂಥ ನ್ಯಾಯ ಪಂಚಾಯತಿಗೆ ಈ ಕಾನೂನಿನನ್ವಯ ಒಪ್ಪಿಸಲ್ಪಡಬಹುದಾದ ಎಲ್ಲ ಅಥವಾ ಅವುಗಳಲ್ಲಿ ಯಾವವೇ ನ್ಯಾಯದಾನದ ಅಧಿಕಾರಗಳನ್ನು ಚಲಾಯಿಸಬಹುದೆಂದು ಆದೇಶ ಮಾಡುವದು. ಆದರೆ ನ್ಯಾಯ ಪಂಚಾಯತವು ನ್ಯಾಯದಾನದ ಅಧಿಕಾರ ಚಲಾಯಿಸುವದರಲ್ಲಿ ಅಸಮರ್ಥವಿದೆಯೆಂದು ಅಥವಾ ಸದರ ಅಧಿಕಾರಗಳನ್ನು ದುರುಪಯೋಗ ಮಾಡಿಕೊಂಡ ಅಪರಾಧಕ್ಕೆ ಪಾತ್ರವಾಗಿದೆಯೆಂದು ಪ್ರಾಂತಿಕ ಸರಕಾರದ ಅಭಿಪ್ರಾಯ

ವಾದರೆ, ಅದು ಸದರ ನ್ಯಾಯ ಪಂಚಾಯತಿಗೆ ಕೊಟ್ಟ ಎಲ್ಲ ಅಥವಾ ಅವುಗಳಲ್ಲಿ ಯಾವದೇ ನ್ಯಾಯ ದಾನದ ಅಧಿಕಾರಗಳನ್ನು ಸರಕಾರಿ ಗ್ಯಾಝಿಟಿನಲ್ಲಿ ಜಾಹೀರ ಪ್ರಕಟನೆಕೊಟ್ಟು, ಬೇಕಾದ ಕಾಲಕ್ಕೆ ತಿರುಗಿ ತಕ್ಕೊಳ್ಳಬಹುದು.

(೩) ಇಲ್ಲಿ ಗೊತ್ತುಮಾಡಲ್ಪಟ್ಟದ್ದನ್ನು ಬಿಟ್ಟು, ಇಂಥ ನ್ಯಾಯ ಪಂಚಾಯತಿಯ ಸಭಾಸದರ ಅಧಿಕಾರಾವಧಿಯು ಪಂಚಾಯತಿಯ ಸಭಾಸದರ ಅಧಿಕಾರಾವಧಿಯಷ್ಟೇ ಇರುವದು.

(೪) ಇಂಥ ನ್ಯಾಯ ಪಂಚಾಯತಿಯ ಯಾವನೇ ಸಭಾಸದನ ಸ್ಥಳವು ಬರಿದಾದರೆ, ಆ ಸ್ಥಳವನ್ನು ಠರಾಯಿಸಲ್ಪಟ್ಟ ರೀತಿಯಲ್ಲಿ ಚುನಾವಣಿಯಿಂದ ತುಂಬಬೇಕು. ಈ ರೀತಿ ಚುನಾಯಿಸಲ್ಪಟ್ಟ ಸಭಾಸದನು, ಯಾವ ಸಭಾಸದನ ಸ್ಥಳದಲ್ಲಿ ತಾನು ಚುನಾಯಿಸಲ್ಪಟ್ಟಿರುವನೋ ಆ ಸಭಾಸದನು ಆ ಸ್ಥಳವು ಬರಿದಾಗದಿದ್ದರೆ ಎಲ್ಲಿಯವರೆಗೆ ಅಧಿಕಾರ ಪದದಲ್ಲಿರುತ್ತಿದ್ದನೋ ಅಲ್ಲಿಯ ವರೆಗೆ ಅಧಿಕಾರಪದದಲ್ಲಿರುವನು.

(೫) ಈ ರೀತಿಯಿಂದ ಚುನಾಯಿಸಲ್ಪಟ್ಟ ಸಭಾಸದರಲ್ಲಿ ಮೂವರಿಂದ "ಕೋರಂ" ಆಗುವದು.

**ಟಿಪ್ಪಣಿ:—** "ಕೋರಂ" ಅಂದರೆ ಸಭೆಯ ಕೆಲಸಸಾಗಿಸಲು ಇರಲೇಬೇಕಾದ ಸಭಾಸದರ ಕನಿಷ್ಠ ಸಂಖ್ಯೆ.

(೬) ಈ ಕಾನೂನಿನಲ್ಲಿ ಠರಾಯಿಸಿದ್ದನ್ನು ಬಿಟ್ಟು, ಪ್ರಾಂತಿಕ ಸರಕಾರವು.

ಅ] ನ್ಯಾಯ ಪಂಚಾಯತಿಯ ಎದುರಿಗೆ ಬರುವ ಕೆಲಸದ ವ್ಯವಸ್ಥೆ, ಮತ್ತು ಹಂಚುವಿಕೆ ಮತ್ತು [ವಕೀಲಿಯ] ಕೆಲಸ ಮಾಡುವಿಕೆ,

ಬ] ನ್ಯಾಯ ಪಂಚಾಯತವು ಸೇರುವ ವೇಳೆಗಳು ಮತ್ತು ಸ್ಥಳಗಳು,

ಕ] ಪ್ರಾಂತಿಕ ಸರಕಾರದ ಅಭಿಪ್ರಾಯದಲ್ಲಿ, ನ್ಯಾಯ ಪಂಚಾಯತಿಯ ಮುಂದೆ ನಡಿಯುವ ಕೆಲಸದ ವಿಷಯವಾಗಿ ಅವಶ್ಯವಿರುವ ಇತರ ಯಾವುದೇ ಸಂಗತಿಯಬಗ್ಗೆ,

ಸಿದ ಎಲ್ಲ ಅಥವಾ ಅವುಗಳಲ್ಲಿ ಯಾವವಾದರೂ ದಾವೆಗಳನ್ನು ವಿಚಾರಣೆ ಮಾಡುವ ಅಧಿಕಾರವನ್ನು ೩೭ ನೇ ಕಲಮಿನನ್ವಯ ನ್ಯಾಯ ಪಂಚಾಯತಿಗೆ ಕೊಡಬಹುದು. ಆ ದಾವೆಗಳು ಯಾವವೆಂದರೆ:—

ಅ] ಸ್ಥಾವರ ಆಸ್ತಿಯಲ್ಲಿಯ ಯಾವುದೇ ಬಗೆಯ ಹಿತಸಂಬಂಧಕ್ಕೆ ಸಂಬಂಧಿಸದ, ಕರಾರುಗಳ ಮೇಲಿಂದ ಬರತಕ್ಕ ಹಣದಬಗ್ಗೆ ದಾವೆಗಳು.

ಬ] ಜಂಗಮ ಆಸ್ತಿಯನ್ನು ವಸೂಲಮಾಡುವಬಗ್ಗೆ ಅಥವಾ ಅಂಥ ಆಸ್ತಿಯ ಬೆಲೆಯಬಗ್ಗೆ [ಮಾಡಿದ] ದಾವೆಗಳು.

ಕ] ಜಂಗಮ ಆಸ್ತಿಯನ್ನು ಅನ್ಯಾಯವಾಗಿ ತೆಗೆದುಕೊಂಡ ಮತ್ತು ಅದಕ್ಕೆ ಹಾನಿ ಮಾಡಿದ ಬಗ್ಗೆ ಪರಿಹಾರಧನ ಪಡೆಯಲಿಕ್ಕೆ ಮಾಡಿದ ದಾವೆಗಳು.

(೨) ನ್ಯಾಯ ಪಂಚಾಯತಿಯ ಮುಂದೆ ನಮೂದಿಸಲ್ಪಟ್ಟ ಉಭಯ ಪಕ್ಷಗಾರರ ಲೇಖಿ ಸಮ್ಮತಿಯಿಂದ ೧ ನೇ ಉಪಕಲಮಿನಲ್ಲಿ ವಿವರಿಸಲ್ಪಟ್ಟ ಸ್ವರೂಪದ ಯಾವ ದಾವೆಗಳ ಕಿಮ್ಮತ್ತು ೧೦೦ ರೂಪಾಯಿಗಳಿಗೆ ಮೀರುವ ದಿಲ್ಲವೋ ಅಂಥ ದಾವೆಗಳು ಇಂಥ ನ್ಯಾಯ ಪಂಚಾಯತದಿಂದ ವಿಚಾರಿಸಲ್ಪಡಬೇಕು.

(೩) ಪ್ರಾಂತಿಕ ಸರಕಾರದವರು, ಸರಕಾರಿ ಗ್ಯಾಝೆಟಿನಲ್ಲಿ ಜಾಹೀರ ಪ್ರಕಟನೆ ಕೊಟ್ಟು ೧ ನೇ ಉಪಕಲಮಿನಲ್ಲಿ ವಿವರಿಸಿದ ಸ್ವರೂಪದ ಯಾವುದೇ ದಾವೆಯ ವಿಚಾರಣೆಯನ್ನು, ನೂರು ರೂಪಾಯಿಗಳಿಗೆ ಮೀರದ ಸದರೀ ಪ್ರಕಟನೆಯಲ್ಲಿ ನಿರ್ದಿಷ್ಟ ಪಡಿಸಬಹುದಾದ ಕಿಮ್ಮತ್ತಿನವರೆಗೆ, ಯಾವುದೇ ನ್ಯಾಯ ಪಂಚಾಯತವು ಮಾಡಬಹುದೆಂದು ಆದೇಶ ಕೊಡಬಹುದು.

**೪೦. ನ್ಯಾಯ ಪಂಚಾಯತವು, ವಿಚಾರಣೆಮಾಡಲಿಕ್ಕೆ ಬಾರದ ದಾವೆಗಳು.**

(೧) ಪಾಲುಗಾರಿಕೆಯ ಲೆಕ್ಕದ ಶಿಲುಕಿನ ವಿಷಯದಲ್ಲಿ,

(೨) ಮೃತ್ಯುಪತ್ರಮಾಡದೆ ಉಂಟಾದ ಮರಣವನ್ವಯ, ಹಿಸೆಯ ಅಥವಾ ಹಿಸೆಯ ಭಾಗದ ವಿಷಯದಲ್ಲಿ ಅಥವಾ ಯಾವುದೊಂದು ಮೃತ್ಯುಪತ್ರದ ಮೇಲಿಂದ ಬರುವ ಆಸ್ತಿಯ ಅಥವಾ ಭಾಗದ ವಿಷಯದಲ್ಲಿ,

(೩) ಸರಕಾರ, ಯಾವುದೇ ಸ್ಥಾನಿಕ ಅಧಿಕಾರ ಸಂಸ್ಥೆ, ಸರಕಾರದ ಯಾವನೇ ಅಧಿಕಾರಿ ಅಥವಾ ನೌಕರ ಅಥವಾ ತನ್ನ ಅಧಿಕಾರಪದದಿಂದ ಕೆಲಸಮಾಡುತ್ತಿರುವ ಸ್ಥಾನಿಕ ಅಧಿಕಾರ ಸಂಸ್ಥೆಯ ಯಾವನೊಬ್ಬ ಸಭಾಸದ, ಅಧಿಕಾರಿ ಅಥವಾ ನೌಕರ, ಇವರಿಂದ ಅಥವಾ ಇವರ ವಿರುದ್ಧ,

(೪) ಯಾವನೊಬ್ಬ ಅಲ್ಪವಯಸ್ಕ ಅಥವಾ ಭ್ರಮಿಷ್ಟಮನುಷ್ಯ, ಇವನಿಂದ ಅಥವಾ ಇವನ ವಿರುದ್ಧ, ಮತ್ತು

(೫) ಮುಲ್ಕಿ ಕೋರ್ಟಿನಿಂದ ಹಿಡಿಯಲ್ಪಡಬಹುದಾದ ಯಾವುದೇ ದಾವೆಯ ಅಥವಾ ಅರ್ಜಿಯ ಸಂಬಂಧದ ಯಾವುದೇ ವಿವಾದದ ಅಥವಾ ಸಂಗತಿಯ ವಿಷಯದಲ್ಲಿ, ಯಾವುದೇ ದಾವೆಯು ಯಾವುದೇ ನ್ಯಾಯ ಪಂಚಾಯತಿಯ ಮುಂದೆ ತರಲ್ಪಡಬಾರದು.

**೪೧. ನ್ಯಾಯ ಪಂಚಾಯತವು ಹಿಡಿಯಬಹುದಾದ ಅಪರಾಧಗಳು.**

ಈ ಕೆಳಗಿನ ಯಾವತ್ತೂ ಅಥವಾ ಯಾವವಾದರೂ ಅಪರಾಧಗಳನ್ನು ಹಿಡಿಯುವ ಮತ್ತು ವಿಚಾರಣೆಮಾಡುವ ಅಧಿಕಾರವನ್ನು, ೩೭ ನೇ ಕಲಮಿನನ್ವಯ ನ್ಯಾಯ ಪಂಚಾಯತಿಗೆ ಕೊಡಬಹುದು.

ಅವು ಯಾವವೆಂದರೆ:—

ಅ] ಭಾರತದ ಅಪರಾಧಿಗಳಿಗೆ ಶಿಕ್ಷೆ ವಿಧಿಸುವ **(ಇಂಡಿಯನ್ ಪೀನಲ್ ಕೋಡ)** ಕಾನೂನಿನನ್ವಯ— ಜೀವಕ್ಕೆ ಅಪಾಯವನ್ನುಂಟು ಮಾಡುವ ಯಾವುದಾದರೂ ರೋಗದ ಸುಂಕವನ್ನು ಹಬ್ಬಿಸುವ ಸಂಭವವಿದ್ದಂಥ ಯಾವುದಾದರೂ ಕೃತಿಯನ್ನು ತಾತ್ಸಾರದಿಂದ ಮಾಡುವದು. ಕಲಮು ೨೬೯

ಸಾರ್ವಜನಿಕರು ಉಪಯೋಗಿಸುವ ಶಲೆ ಅಥವಾ ಜಲಾಶಯದನೀರನ್ನು ಕೆಡಿಸುವದು ಕ....೨೭೭

ಯಾವುದೇ ಸಾರ್ವಜನಿಕ ಮಾರ್ಗಕ್ಕೆ ಅಪಾಯ, ಆತಂಕ ಅಥವಾ ಹಾನಿಯನ್ನು ಮಾಡುವದು ಕ....೨೮೩

ಮನೋಃಪೂರ್ವಕದಿಂದ ಗಾಯವನ್ನುಂಟು ಮಾಡುವದು ಕ....೩೨೩

ಶೀಘ್ರವಾಗಿ ಗಂಭೀರವಾದ ರೋಷವು ಬರುವಂತೆ ಕೆಣಕಲ್ಪಡದೆ ಹಲ್ಲೆ ಅಥವಾ ಅನ್ಯಾಯದ ಬಲಾತ್ಕಾರ ಮಾಡೋಣ ಕ....೩೫೨

ಶೀಘ್ರವಾಗಿ ಗಂಭೀರವಾದ ರೋಷವು ಬರುವಂತೆ ಕೆಣಕಲ್ಪಟ್ಟದ್ದರಿಂದ ಹಲ್ಲೆ ಅಥವಾ ಅನ್ಯಾಯದ ಬಲಾತ್ಕಾರ ಮಾಡೋಣ ಕ....೩೫೮

ಕಳವು, ಕಳವುಮಾಡಿದ ವಸ್ತುವಿನ ಬೆಲೆಯು ೨೦ ರೂಪಾಯಿಗಳಿಗಿಂತ ಅಧಿಕ ವಿರದಿದ್ದಲ್ಲಿ ಕ....೩೭೯

ನಷ್ಟ [ಅಪಾಯ] ಮಾಡೋಣ, ಮಾಡಲ್ಪಟ್ಟ ನಷ್ಟ ಅಥವಾ ಹಾನಿಯ ಬೆಲೆಯು ೨೦ ರೂಪಾಯಿಗಳಿಗಿಂತ ಅಧಿಕ ವಿರದಿದ್ದಲ್ಲಿ ಕ....೪೨೬

ಅಕ್ರಮ ಪ್ರವೇಶ [ದಂಡನೀಯ ಅತಿಕ್ರಮಣ] ಕ....೪೪೭

ಮನೆ ಅತಿಕ್ರಮಣ ಕ....೪೪೮

ವಸ್ತು ಇದ್ದಂಥ ಅಥವಾ ವಸ್ತು ಇದೆಯೆಂದು ತಿಳಿದಂಥ ಯಾವುದೇ ಮುಚ್ಚಲ್ಪಟ್ಟ ಪಾತ್ರೆಯನ್ನು ಅಪ್ರಮಾಣಿಕತನದಿಂದ ಒಡೆಯುವದು ಅಥವಾ ತೆರೆಯುವದು ಕ ...೪೬೧

ಕೆಣಕಿ ಶಾಂತತೆಗೆ ಭಂಗತರುವ ಉದ್ದೇಶದಿಂದ ಬುದ್ಧಿಪೂರ್ವಕ ಅವಮಾನ ಮಾಡುವದು ಕ....೫೦೪

ಬ] ೧೮೭೧ ನೇ ಇಸ್ವಿಯ ದನಗಳ ಅತಿಕ್ರಮಣದ ವಿಷಯದ ಕಾನೂನಿನನ್ವಯ— ದನಗಳನ್ನು ಹಿಡಿಯುವ ಕೆಲಸಕ್ಕೆ ಬಲಾತ್ಕಾರದಿಂದ ಆತಂಕವನ್ನುಂಟುಮಾಡುವದು ಅಥವಾ ಅವುಗಳ ಬಿಡುಗಡೆ ಮಾಡುವದು ಕ....೨೪

ಕ] ೧೮೯೦ ನೇ ಇಸ್ವಿಯ ಪಶುಗಳಿಗೆ ಕ್ರೂರ ಕೃತ್ಯಮಾಡುವದನ್ನು ಪ್ರತಿಬಂಧಿಸುವ ವಿಷಯದ ಕಾನೂನಿನನ್ವಯ—

* "ಫೂಕಾ" ಆಚರಿಸುವದು ಕ... ೪

ಅನವಶ್ಯಕ ಕ್ರೂರತನದಿಂದ ಪಶುಗಳನ್ನು ಕೊಲ್ಲುವದು ಕ....೫

---

* ಫೂಕಾ ಅಂದರೆ ಹೆಚ್ಚುಹಾಲು ಬರುವದರ ಸಲುವಾಗಿ, ಹಿಂಡುವ ದನಗಳ ಜನನೇಂದ್ರಿಯದಲ್ಲಿ ಹವೆ ಅಥವಾ ಯಾವುದೇ ಪದಾರ್ಥವು ಸೇರುವಂತೆ ಮಾಡುವುದು

ಅನವಶ್ಯಕ ಕ್ರೂರತನದಿಂದ ಕೊಲ್ಲಲ್ಪಟ್ಟ ಆಡಿನ ಚರ್ಮವನ್ನು [ಸ್ವಾಧೀನದಲ್ಲಿ] ಇಟ್ಟು ಕೊಳ್ಳುವದು ಕ...೫ ಅ.

ಕೆಲಸಕ್ಕೆ ಅಯೋಗ್ಯವಿದ್ದ ಪಶುಗಳನ್ನು ಕೆಲಸದಲ್ಲಿ ತೊಡಗಿಸುವದು ಕ....೬

ಕಾದಾಡಲು ಪಶುಗಳನ್ನು ಪೀಡಿಸುವದು ಅಥವಾ ಪ್ರೇರೇಪಿಸುವದು ಕ....೬ ಕ.

ರೋಗವುಳ್ಳ ಪಶುಗಳನ್ನು ಹೊರಗೆ ಬಿಟ್ಟುಬಿಡುವದು ಅಥವಾ ಸಾರ್ವಜನಿಕ ಸ್ಥಳಗಳಲ್ಲಿ ಅವುಗಳನ್ನು ಸಾಯಲು ಬಿಡುವದು ಕ....೭

ಡ] ೧೮೯೦ ನೇ ಇಸ್ವಿಯ ಮುಂಬಯಿ ಜಿಲ್ಲಾ ಪೋಲಿಸ ಕಾನೂನಿನ್ವಯ—

ಮದ್ಯವನ್ನು ಕುಡಿದು, ರಸ್ತೆಯಲ್ಲಿ ಅಥವಾ ಸಾರ್ವಜನಿಕ ಸ್ಥಳದಲ್ಲಿ ಅಥವಾ ಸಾರ್ವಜನಿಕರು ಸೇರುವ ಸ್ಥಳದಲ್ಲಿ ತನ್ನ ಯೋಗಕ್ಷೇಮವನ್ನು ನೋಡಿಕೊಳ್ಳದಂಥ, ಪರಿಸ್ಥಿತಿಯಲ್ಲಿದ್ದರೆ ಕ....೬೧ (೧) [ಪ]

ಈ] ೧೮೯೨ ನೇ ಇಸ್ವಿಯ ಮುಂಬಯಿ ಜಿಲ್ಲಾ ವ್ಯಾಕ್ಸಿನೇಶನ (ಮೈಲಿತೆಗೆಯುವ) ಕಾನೂನಿನ್ವಯ—

ಮೈಲಿ ತೆಗೆಯುವದು, ಮೈಲಿ ತೆಗೆದನಂತರ ವ್ಯಾಕ್ಸಿನೇಶನ ಪ್ರದೇಶವನ್ನು ಪ್ರವೇಶ ಮಾಡುವದು ಮತ್ತು ಆ ಪ್ರದೇಶದಲ್ಲಿ ಮೈಲಿ ತೆಗೆಸಿಕೊಂಡ ಮನುಷ್ಯನನ್ನು ತರುವದು ಕ....೨೨

೧೪ ವರ್ಷವಳಗಿನ ಯಾವುದೇ ರಕ್ಷಣೆ ಇಲ್ಲದ ಮಗುವಿಗೆ ಮೈಲಿ ತೆಗೆಯುವದರಬಗ್ಗೆ ಮಾಡಿದ ಮ್ಯಾಜಿಸ್ಟ್ರೇಟನ ಆಜ್ಞೆಯನ್ನು ಉಲ್ಲಂಘಿಸುವದು ಕ....೨೩

ಮಗುವನ್ನು ಹಾಜರ ಪಡಿಸದಿರುವದು ಕ....೨೪

ಮೈಲಿ ತೆಗೆಯುವದಕ್ಕಾಗಿ ಮಗುವನ್ನು ಒಯ್ಯುವದರಲ್ಲಿ ಅಲಕ್ಷ್ಯ ಮಾಡುವದು ಕ....೨೫

ಫ] ೧೯೩೩ ನೇ ಇಸ್ವಿಯ ಮುಂಬಯಿ ಪ್ರಾಥಮಿಕ ಶಿಕ್ಷಣ ಕಾನೂನಿನನ್ವಯ—

ಒತ್ತಾಯದ ಶಿಕ್ಷಣಕ್ಕೆ ಒಳಪಟ್ಟ ಮಗುವನ್ನು ಕೆಲಸದಲ್ಲಿ ತೊಡಗಿಸುವದು ಕ....೨೨

ಗ] ೧೯೨೫ ನೇ ಇಸ್ವಿಯ ಮುಂಬಯಿ ಆಹಾರ ಕಲಬೆರಕೆಯನ್ನು ಪ್ರತಿಬಂಧಿಸುವ ಕಾನೂನಿನನ್ವಯ—

ಯೋಗ್ಯ ಸ್ವರೂಪ, ಸತ್ವ ಅಥವಾ ಗುಣಧರ್ಮವಿಲ್ಲದ ಆಹಾರವನ್ನು ಮಾರುವದು ಅಥವಾ ತಯಾರಿಸುವದು. ಕ....೪

ಹ] ಈ ಕಾನೂನಿನ್ವಯ—

(೧) ಸಾರ್ವಜನಿಕ ಬೀದಿ ಮತ್ತು ಬೈಲು ಜಾಗೆಗಳಮೇಲೆ ಆತಂಕ ಮತ್ತು ಅತಿಕ್ರಮಣ ಕ....೨೮ ಕ (೧) ಮತ್ತು (೩)

(೨) ಉಪನಿಯಗಳ ಉಲ್ಲಂಘನೆ ಕ....೧೦೯

ಆದರೆ ಆರೋಪಿತ ಮನುಷ್ಯನನ್ನು ಬಂಧಿಸದಿದ್ದರೆ ಅಥವಾ ಅವನನ್ನು ಗುರುತಿಸಿ ಅವನ ಹೆಸರನ್ನು ಹೇಳದಿದ್ದರೆ, ಕಳ್ಳತನದ ಯಾವುದೇ ಅಪರಾಧವನ್ನು ನ್ಯಾಯ ಪಂಚಾಯತವು [ವಿಚಾರಣೆಗಾಗಿ] ಹಿಡಿಯ ಬಾರದು.

**೪೨. ಕಳವಿನ ಆರೋಪವಿರುವ ಕೆಲವು ಮನುಷ್ಯರ ವಿಚಾರಣೆಯನ್ನು ನ್ಯಾಯ ಪಂಚಾಯತವು ಮಾಡಬಾರದು.**

ಯಾವುದರಲ್ಲಿ ಆರೋಪಿಯು—

ಅ] ಭಾರತದ ಅಪರಾಧಿಗಳಿಗೆ ಶಿಕ್ಷೆಮಾಡುವ ಕಾನೂನ ೧೨ ನೇ ಅಥವಾ ೧೭ ನೇ ವಿಭಾಗದನ್ವಯ ೩ ವರ್ಷ ಅವಧಿಯ ಅಥವಾ ಅದಕ್ಕಿಂತ ಹೆಚ್ಚಿನ ಅವಧಿಯ ಎರಡರಲ್ಲಿ ಯಾವುದಾದರೊಂದು ವಿಧದ ಶಿಕ್ಷೆಗೆ ಗುರಿಯಾಗುವ ಅಪರಾಧಕ್ಕಾಗಿ ಈ ಮೊದಲು ದೋಷಿಯೆಂದು ನಿರ್ಣಯಿಸಲ್ಪಟ್ಟವನಿರುವನು,

ಬ] ಕಳವಿನಬಗ್ಗೆ ಯಾವುದೇ ನ್ಯಾಯ-ಪಂಚಾಯತದಿಂದ ಈ ಮೊದಲು ದಂಡ ಮಾಡಲ್ಪಟ್ಟವನಿರುವನು,

ಕ] ೧೯೨೪ ನೇ ಇಸ್ವಿಯ "ಕ್ರಿಮಿನಲ್ ಟ್ರಾಯಿಬ್ಸ" (ಅಪರಾಧ ಮಾಡುವ ಜಾತಿಗಳ) ವಿಷಯದ ಕಾನೂನಿನ ೪ ನೇ ಕಲಮಿನನ್ವಯ ಅಪರಾಧ ಮಾಡುವ ಜಾತಿಯ ನೊಂದಾಯಿಸಲ್ಪಟ್ಟ ಮನುಷ್ಯನಿದ್ದರೆ, ಅಥವಾ

ಡ] ೧೮೯೮ ನೇ ಇಸ್ವಿಯ ಕ್ರಿಮಿನಲ್ ಪ್ರೊಸಿಜರ ಕೋಡಿನ (ಫೌಜದಾರೀ ಕೆಲಸ ನಡಿಸುವ ರೀತಿಯ ವಿಷಯದ ಕಾನೂನು) ೧೦೯ ನೇ ಅಥವಾ ೧೧೦ ನೇ ಕಲಮಿನನ್ವಯ ನಡಿಸಲ್ಪಟ್ಟ ವಿಚಾರಣೆಯಲ್ಲಿ ಒಳ್ಳೇ ನಡತೆಯಿಂದಿರುವಬಗ್ಗೆ ಜಾಮೀನು ತೆಗೆದುಕೊಳ್ಳಲ್ಪಟ್ಟವನಿರುವನು,

ಅಂಥ ಭಾರತದ ಅಪರಾಧಿಗಳಿಗೆ ಶಿಕ್ಷೆಮಾಡುವ ಕಾನೂನಿನ ೩೭೯ ನೇ ಕಲಮಿನನ್ವಯ ಶಿಕ್ಷೆಗೆ ಪಾತ್ರವಾದ ಕಳವಿನ ಯಾವುದೇ ಅಪರಾಧವನ್ನು ಯಾವುದೇ ನ್ಯಾಯಪಂಚಾಯತವು (ವಿಚಾರಣೆಗೆ) ಹಿಡಿಯಬಾರದು.

**೪೩. ಸರಕಾರೀ ನೌಕರನಿಂದ ಅಥವಾ ಅವನ ವಿರುದ್ಧ ಮಾಡಲ್ಪಟ್ಟ ಅಪರಾಧಗಳನ್ನು ನ್ಯಾಯ ಪಂಚಾಯತವು ವಿಚಾರಿಸಬಾರದು.**

ಯಾವ ಗ್ರಾಮದಬಗ್ಗೆ ಪಂಚಾಯತವು ಸ್ಥಾಪಿಸಲ್ಪಟ್ಟಿರುವದೋ ಆ ಗ್ರಾಮವಿರುವ ಜಿಲ್ಹೆಯಲ್ಲಿ ನೌಕರೀ ಮಾಡುವ ಸರಕಾರೀ ನೌಕರನು ಯಾವುದರಲ್ಲಿ ಫಿರ್ಯಾದಿಯಾಗಲಿ ಅಥವಾ ಆರೋಪಿಯಾಗಲಿ ಆಗಿರುವನೋ ಅಂಥ ೪೧ ನೇ ಕಲಮಿನಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಅಪರಾಧವನ್ನು ಯಾವುದೇ ನ್ಯಾಯ ಪಂಚಾಯತವು ವಿಚಾರಣೆ ಮಾಡಲಾರದು.

ಆದರೆ ಗೊತ್ತುಪಡಿಸುವವೇನಂದರೆ, ೨೮ ಕ ಕಲಮಿನ ೧ ಅಥವಾ ೩ ನೇ ಉಪಕಲಮಿನನ್ವಯ ಶಿಕ್ಷಾರ್ಹವಾದ ಅಥವಾ ೧೦೯ ನೇ ಕಲಮಿನ ೩ ನೇ ಉಪಕಲಮಿನನ್ವಯ ಉಪನಿಯಮದ ಉಲ್ಲಂಘನೆ ಮಾಡಿದ ಅಪರಾಧವನ್ನು, ಸದರಿ ಖಟ್ಲೆಯಲ್ಲಿಯ ಫಿರ್ಯಾದಿಯು ಸರಕಾರಿ ನೌಕರನಿದ್ದಾಗ್ಯೂ ವಿಚಾರಣೆ ಮಾಡಲು ನ್ಯಾಯ ಪಂಚಾಯತಿಗೆ ಪ್ರತಿಬಂಧನವಿರಲಾರದು.

**೪೪. ನ್ಯಾಯ ಪಂಚಾಯತಿಯು ಮಾಡಿದ ಆಪಾದನೆಯು ಹಿಂದಿನ ಆಪಾದನೆಯಲ್ಲ.**

ಈ ಕಾನೂನಿನನ್ವಯ ನ್ಯಾಯ ಪಂಚಾಯತವು ಮಾಡಿದ ಆಪಾದನೆಯು ಭಾರತದ ಅಪರಾಧಿಗಳಿಗೆ ಶಿಕ್ಷೆಮಾಡುವ ಕಾನೂನಿನ ೭೫ ನೇ ಕಲಮಿನ ಉದ್ದೇಶಗಳಬಗ್ಗೆ ಹಿಂದಿನ ಆಪಾದನೆಯೆಂದು ತಿಳಿಯಲ್ಪಡತಕ್ಕದ್ದಲ್ಲ.

**೪೫. ಪರಾಕಾಷ್ಠ (ಅತಿಹೆಚ್ಚಿನ) ದಂಡಗಳು.**

(೧) ೪೧ ನೇ ಕಲಮಿನಲ್ಲಿ ಹೇಳಿದ ಅಪರಾಧಗಳಬಗ್ಗೆ ನ್ಯಾಯ ಪಂಚಾಯತವು ವಿಧಿಸಬಹುದಾದ ಪರಾಕಾಷ್ಠ ದಂಡಗಳು ಈ ಕೆಳಗಿನಂತಿವೆ:-

ಅ] ಭಾರತದ ಅಪರಾಧಿಗಳಿಗೆ ಶಿಕ್ಷೆಮಾಡುವ ಕಾನೂನಿನನ್ವಯ— ೨೦ ರೂಪಾಯಿಗಳಿಗೆ ಮೀರದ ಅಥವಾ ೪೦ ರೂಪಾಯಿಗಳ ಮಿತಿಯವರೆಗೆ, ಆದ ನಷ್ಟದ ಅಥವಾ ಹಾನಿಯ ಇಮ್ಮಡಿಯಷ್ಟು ರಕಮಿನದಂಡವು

ಬ] ೧೮೭೧ ನೇ ಇಸ್ವಿಯ ದನಗಳ ಅತಿಕ್ರಮಣದ ಕಾನೂನಿನ ೨೪ ನೇ ಕಲಮಿನನ್ವಯ— ೧೦ ರೂಪಾಯಿಗಳಿಗೆ ಮೀರದ ದಂಡವು

ಬ ಬ] ೧೯೪೭ ನೇ ಇಸ್ವಿಯ ಮುಂಬಯಿ ಪ್ರಾಥಮಿಕ ಶಿಕ್ಷಣ ಕಾನೂನಿನ ೨೨ ನೇ ಕಲಮಿನನ್ವಯ ಇಲ್ಲವೆ ೪೧ ನೇ ಕಲಮಿನಲ್ಲಿ ಹೇಳಿದ ಯಾವುದೇ ಕಾನೂನಿನ ಠರಾವುಗಳನ್ವಯ— ೨೦ ರೂಪಾಯಿಗಳಿಗೆ ಮೀರದ ದಂಡ;

ಕ] ಈ ಕಾನೂನಿನ ೨೮-ಕ ಕಲಮಿನ ೧ ನೇ ಉಪಕಲಮಿನನ್ವಯ- ೨೦ ರೂಪಾಯಿಗಳಿಗೆ ಮೀರದ ದಂಡ, ಅಥವಾ ಉಲ್ಲಂಘನೆಯು ಮುಂದು ವರಿದ ಪ್ರತಿದಿವಸಕ್ಕಾಗಿ, ಆ ಉಪಕಲಮಿನಲ್ಲಿ ವಿವರಿಸಿದಂತೆ, ೧ ರೂಪಾಯಿ ಮೀರದಷ್ಟು ದಂಡ,

ಡ] ಈ ಕಾನೂನಿನ ೨೮-ಕ ಕಲಮಿನ ೩ ನೇ ಉಪಕಲಮಿನನ್ವಯ- ೪೦ ರೂಪಾಯಿಗಳಿಗೆ ಮೀರದ ದಂಡ, ಅಥವಾ ಉಲ್ಲಂಘನೆಯು ಮುಂದು ವರಿದ ಪ್ರತಿದಿವಸಕ್ಕಾಗಿ, ಆ ಉಪಕಲಮಿನಲ್ಲಿ ವಿವರಿಸಿದಂತೆ ೨ ರೂಪಾಯಿ ಮೀರದಷ್ಟು ದಂಡ,

ಈ] ಈ ಕಾನೂನಿನ ೧೯೦ ನೇ ಕಲಮಿನ ೩ನೇ ಉಪಕಲಮಿನನ್ವಯ- ೨೦ ರೂಪಾಯಿಗಳಿಗೆ ಮೀರದ ದಂಡ, ಅಥವಾ ಉಲ್ಲಂಘನೆಯು ಮುಂದು ವರಿದ ಪ್ರತಿದಿವಸಕ್ಕಾಗಿ, ಆ ಉಪಕಲಮಿನಲ್ಲಿ ವಿವರಿಸಿದಂತೆ, ೧ ರೂಪಾಯಿ ಮೀರದಷ್ಟು ದಂಡ,

(೨) ಸೆರೆಮನೆವಾಸದ ಶಿಕ್ಷೆಯು— ಅದು ಪ್ರಾಮುಖ್ಯ [ಮೂಲ] ವಿರಲಿ ಅಥವಾ ದಂಡಕೊಡಲಿಕ್ಕೆ ತಪ್ಪಿದ ಬಗ್ಗೆ ಇರಲಿ— ಅಥವಾ ಛಟಕಿ ಹೊಡೆಯುವ ಶಿಕ್ಷೆಯು ನ್ಯಾಯ ಪಂಚಾಯತದಿಂದ ವಿಧಿಸಲ್ಪಡಬಾರದು.

**೪೬. ಹೆಚ್ಚಿನ ದಂಡಗಳನ್ನು ವಿಧಿಸುವಬಗ್ಗೆ ವಿಶಿಷ್ಟ ನ್ಯಾಯ ಪಂಚಾಯತಗಳಿಗೆ ಅಧಿಕಾರ ಕೊಡುವದಕ್ಕೆ ಪ್ರಾಂತಿಕ ಸರಕಾರಗಳ ಅಧಿಕಾರ.**

ಪ್ರಾಂತಿಕ ಸರಕಾರದವರು ಸರಕಾರಿ ಗ್ಯಾಝೀಟಿನಲ್ಲಿ ಜಾಹೀರ ಪ್ರಕಟನೆಯನ್ನು ಕೊಟ್ಟು ಈ ಕೆಳಗಿನ ಪರಾಕಾಷ್ಟ ದಂಡಗಳನ್ನು ವಿಧಿಸಲಿಕ್ಕೆ ನ್ಯಾಯ ಪಂಚಾಯತಿಗೆ ಅಧಿಕಾರ ಕೊಡಬಹುದು—

ಅ] ೪೧ ನೇ ಕಲಮಿನಲ್ಲಿ ಹೇಳಿದ ಭಾರತದ ಅಪರಾಧಿಗಳಿಗೆ ಶಿಕ್ಷೆ ಮಾಡುವ ಕಾನೂನಿನ ಕಲಮುಗಳನ್ವಯ—

೪೦ ರೂಪಾಯಿಗಳಿಗೆ ಮೀರದ ದಂಡ ಅಥವಾ ಉಂಟಾದ ನಷ್ಟದ ಅಥವಾ ಹಾನಿಯ ರಕಮಿನ ಇಮ್ಮಡಿಗೆ ಮೀರದ ದಂಡವು, ಇವುಗಳಲ್ಲಿ ಯಾವುದು ದೊಡ್ಡದೋ ಅದು.

ಬ] ೧೮೭೧ ನೇ ಇಸ್ವಿಯ ದನಗಳ ಅತಿಕ್ರಮಣ ವಿಷಯದ ಕಾನೂನಿನ ೨೪ ನೇ ಕಲಮಿನನ್ವಯ—

೨೦ ರೂಪಾಯಿಗಳಿಗೆ ಮೀರದ ದಂಡವು.

ಕ] ೧೯೨೩ ನೇ ಇಸ್ವಿಯ ಮುಂಬಯಿ ಪ್ರಾಥಮಿಕ ಶಿಕ್ಷಣ ಕಾನೂನನ್ನು ಹೊರ್ತುಪಡಿಸಿ ೪೧ ನೇ ಕಲಮಿನಲ್ಲಿ ವಿವರಿಸಿದ ಯಾವುದೇ ಇತರ ಕಾನೂನಿನ ಶರಾವುಗಳನ್ವಯ—

೫೦ ರೂಪಾಯಿಗಳಿಗೆ ಮೀರದ ದಂಡ.

**೪೭. ಫಿರ್ಯಾಧಿಗಳಿಗೆ ಪರಿಹಾರ ಧನ ಕೊಡುವದು.**

೪೫ ನೇ ಅಥವಾ ೪೬ ನೇ ಕಲಮಿನನ್ವಯ ಯಾವುದೇ ದಂಡವನ್ನು ವಿಧಿಸುವಾಗ್ಗೆ ವಸೂಲ ಮಾಡಲ್ಪಟ್ಟ ಇಡೀ ದಂಡವು ಅಥವಾ ಅದರ ಯಾವುದೇ ಭಾಗವು—

ಅ] ಸದರೀ ಖಟ್ಲೆಯಲ್ಲಿ ಫಿರ್ಯಾದಿಗೆ ಯೋಗ್ಯ ರೀತಿಯಿಂದ ಅವ ವೆಚ್ಚವನ್ನು ಕೊಡುವ ಬಗ್ಗೆ, ಅಥವಾ

ಬ] ಸದರಿ ಅಪರಾಧ ಮಾಡಲ್ಪಟ್ಟಿದ್ದರಿಂದ ಯಾವನೊಬ್ಬ ಮನುಷ್ಯ ನಿಗೆ ಉಂಟಾದ ಯಾವುದೇ ನಿಜವಾದ ನಷ್ಟ ಅಥವಾ ಹಾನಿಯ ಬಗ್ಗೆ ಅವನಿಗೆ ಪರಿಹಾರ ಕೊಡುವ ಬಗ್ಗೆ

ವಿನಿಯೋಗಿಸಲ್ಪಡಬೇಕೆಂದು, ನ್ಯಾಯ ಪಂಚಾಯತವು ಆಜ್ಞೆ ಮಾಡಬಹುದು.

**೪೮. ಸುಳ್ಳು ಅಥವಾ ಹುಡುಗಾಟಿಕೆಯ ಖಟ್ಲೆಯ ಬಗ್ಗೆ ಆರೋಪಿಗೆ ಪರಿಹಾರ ಕೊಡುವದು.**

ತನ್ನ ಮುಂದೆ ತರಲ್ಪಟ್ಟ ಖಟ್ಲೆಯು, ಸುಳ್ಳು ಹುಡುಗಾಟಿಕೆಯದು ಅಥವಾ ಉಪದ್ರವ ಕೊಡುವಂಥದು ಇರುತ್ತದೆಂದು ನ್ಯಾಯ ಪಂಚಾಯತಿಗೆ, ವಿಚಾರಣೆಯ ನಂತರ ಸಮಾಧಾನವಾದರೆ, ಅದು ತನಗೆ ಯೋಗ್ಯ ತೋರಿದಂತೆ ಸದರಿ ಆರೋಪಿಗೆ ೫ ರೂಪಾಯಿಗಳಿಗೆ ಮೀರದ ಪರಿಹಾರ ಧನವನ್ನು ಕೊಡ ಲಿಕ್ಕೆ ಫಿರ್ಯಾದಿಗೆ ಆಜ್ಞೆ ಮಾಡಬಹುದು.

**೪೯. ಚಿಕ್ಕವಯಸ್ಸಿನ ಅಪರಾಧಿಗಳು.**

ಯಾವ ಚಿಕ್ಕವಯಸ್ಸಿನ ಅಪರಾಧಿಯು, ಅಪರಾಧಕ್ಕಾಗಿ ಶಿಕ್ಷಿಸಲ್ಪಡುವ ಕಾಲಕ್ಕೆ ಹದಿನಾರು ವರ್ಷಕ್ಕಿಂತ ಕಡಿಮೆ ವಯಸ್ಸಿನವನಿರುತ್ತಾನೆಂದು ನ್ಯಾಯ ಪಂಚಾಯತವು ಅಭಿಪ್ರಾಯ ಪಡುವದೋ, ಅವನಿಗೆ ಯಾವುದೇ ಶಿಕ್ಷೆ ಯನ್ನು ವಿಧಿಸುವದರಬದಲಾಗಿ, ಅವನಿಗೆ ಯೋಗ್ಯ ಎಚ್ಚರಿಕೆ ಕೊಟ್ಟು, ಅವನನ್ನು ಬಿಟ್ಟು ಬಿಡಬಹುದು.

**೫೦. ಹಿತಸಂಬಂಧವಿರುವ ಸಭಾಸದರು ನ್ಯಾಯ ಪಂಚಾಯತಿಯ ಸಭಾಸದರಾಗಿ ಕೆಲಸ ಮಾಡಬಾರದು.**

ಯಾವುದೇ ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ ಪಕ್ಷಕಾರನಾಗಿರುವ ಅಥವಾ ಅದರಲ್ಲಿ ಯಾವುದೇ ಹಿತಸಂಬಂಧವಿರುವ ಯಾವನೊಬ್ಬ ನ್ಯಾಯ ಪಂಚಾಯತದ ಸಭಾಸದನು, ನ್ಯಾಯ ಪಂಚಾಯತವು ಸದರೀ ದಾವೆ

ಅಥವಾ ಖಟ್ಲೆಯನ್ನು ವಿಚಾರಣೆ ಮಾಡುವ ಕಾಲದಲ್ಲಿ ನ್ಯಾಯ ಪಂಚಾಯತದ ಸಭಾಸದನಾಗಿ ಕೆಲಸ ಮಾಡಬಾರದು.

ಯಾವನೊಬ್ಬ ನ್ಯಾಯ ಪಂಚಾಯತದ ಸಭಾಸದನು ಯಾವುದೊಂದು ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ ಪಕ್ಷಕಾರ ನಾಗಿರುವನೋ ಹೇಗೆ ಎಂಬ ವಿಷಯದ ಬಗ್ಗೆ ಇದ್ದ ವಿವಾದವು, ಇಂಥ ದಾವೆಯು ಅಥವಾ ಖಟ್ಲೆಯ ಒಬ್ಬ ಪಕ್ಷಗಾರನಿಂದ ಲೇಖಿ ಅರ್ಜಿ ಮಾಡಲ್ಪಡಲಾಗಿ, ಕಲೆಕ್ಟರನ ಕಡೆಗೆ ಅಥವಾ ಅವನು ಈ ಬಗ್ಗೆ ಅಧಿಕಾರ ಕೊಡಬಹುದಾದ ಇತರ ಅಧಿಕಾರಿಯ ಕಡೆಗೆ ನಿರ್ಣಯಕ್ಕಾಗಿ ಕಳಿಸಲ್ಪಡಬೇಕು. ಕಲೆಕ್ಟರನ ಅಥವಾ ಇಂಥ ಅಧಿಕಾರಿಯ ನಿರ್ಣಯವು ಕೊನೆಯದಾಗುವದು.

**೫೧. ನಿರ್ಣೀತ ವಿಷಯ್ಕ, ಮತ್ತು ಚಾಲೂ ಇದ್ದ ದಾವೆಗಳು ಮತ್ತು ಖಟ್ಲೆಗಳು.**

(೧) ಅದೇ ಪಕ್ಷಕಾರರೊಳಗೆ ಅಥವಾ ಅವರ ಮುಖಾಂತರ ಹಕ್ಕು ಪ್ರತಿವಾದಿಸುವವರೊಳಗೆ ಈ ಮುಂಚೆ ನಡೆದ ದಾವೆಯಲ್ಲಿ ಯೋಗ್ಯ ಅಧಿಕಾರ ವುಳ್ಳ ಕೋರ್ಟಿನಲ್ಲಿ ನಿರ್ಣಯಕ್ಕಾಗಿ ಚಾಲೂ ಇರುವ ಅಥವಾ ಅದರಿಂದ ವಿಚಾರಣೆಯಾಗಿ ನಿರ್ಣಯಿಸಲ್ಪಟ್ಟ ಯಾವುದೇ ವಿಷಯದ ಸಂಬಂಧದಲ್ಲಿ, ಯಾವುದೇ ದಾವೆಯ ಅಥವಾ ಮುದ್ದೆಯ ವಿಚಾರಣೆಯನ್ನು ಯಾವುದೇ ನ್ಯಾಯ ಪಂಚಾಯತವು ಮಾಡಬಾರದು.

(೨) ಯಾವುದೇ ಅಪರಾಧದ ಬಗ್ಗೆ ಆರೋಪಿತ ಮನುಷ್ಯನ ವಿಚಾರಣೆ ಮಾಡಲ್ಪಟ್ಟಾಗ್ಗೆ ಇಂಥ ಅಪರಾಧವನ್ನು ಅಥವಾ ಅವೇ ಸಂಗತಿಗಳ ಮೇಲೆ, ಆರೋಪಿತನಮೇಲೆ ಹೊರಿಸಲ್ಪಡಬಹುದಾದ ಅಥವಾ ಅಪರಾಧವು ಸಿದ್ಧಮಾಡಲ್ಪಡಬಹುದಾದ ಇತರ ಯಾವುದೇ ಅಪರಾಧವನ್ನು ನ್ಯಾಯ ಪಂಚಾಯತವು ವಿಚಾರಣೆಗಾಗಿ ಹಿಡಿಯಬಾರದು.

**೫೨. ದಾವೆಗಳಲ್ಲಿ ಇಡೀ ಹಕ್ಕಿನ ಸಮಾವೇಶವಾಗಬೇಕು.**

ನ್ಯಾಯ ಪಂಚಾಯತಿಯ ಮುಂದೆ ತರಲ್ಪಟ್ಟ ಪ್ರತಿಯೊಂದು ದಾವೆ ಯಲ್ಲಿ, ವಿವಾದದ ವಿಷಯದ ಸಂಬಂಧದಲ್ಲಿ ವಾದಿಗೆ ಎಷ್ಟು ಹಣವನ್ನು ಕೇಳಲು ಅಧಿಕಾರವಿದೆಯೋ ಅಷ್ಟೆಲ್ಲ ಹಣವನ್ನು ಸಮಾವೇಶ ಮಾಡಬೇಕು.

ಆವರೆ ಅವನು ಸದರೀ ದಾವೆಯನ್ನು ನ್ಯಾಯ ಪಂಚಾಯತಿಯ ಅಧಿಕಾರದ ಕಕ್ಷೆಯಲ್ಲಿ ತರುವಬಗ್ಗೆ ತನ್ನ ಹಕ್ಕಿನ [ಮಾಗಣಿಯ ಹಣದ] ಯಾವುದೇ ಭಾಗವನ್ನು ಬಿಟ್ಟು ಕೊಡಬಹುದು.

ವಾದಿಯು ತನ್ನ ಮಾಗಣಿಯ ಹಣದ ಯಾವುದೇ ಭಾಗದ ಸಂಬಂಧ ದಾವೆ ಮಾಡುವದನ್ನು ಬುದ್ಧಿಪೂರ್ವಕವಾಗಿ ಉಪೇಕ್ಷಿಸಿದರೆ ಅಥವಾ ಇಂಥ ಯಾವುದೇ ಭಾಗವನ್ನು ಬಿಟ್ಟುಕೊಟ್ಟರೆ ಹೀಗೆ ಉಪೇಕ್ಷಿಸಿದ ಅಥವಾ ಬಿಟ್ಟು ಕೊಟ್ಟ ಭಾಗದ ಸಲುವಾಗಿ ಆ ತರುವಾಯ ದಾವೆ ತರಬಾರದು.

**೫೩. ದಾವೆ ಮತ್ತು ಖಟ್ಲೆಗಳ ಕಾಲಮರ್ಯಾದೆ.**

(೧) ದಾವೆಮಾಡಲಿಕ್ಕೆ ಮೊದಲಿಗೆ ಹಕ್ಕು ಉಂಟಾದಂದಿನಿಂದ ೧ ವರ್ಷ ಕಳೆದ ತರುವಾಯ ನ್ಯಾಯ ಪಂಚಾಯತವು ಯಾವುದೇ ದಾವೆಯನ್ನು ಹಿಡಿಯಬಾರದು.

(೨) ಅಪರಾಧವು ಮಾಡಲ್ಪಟ್ಟ ತಾರೀಖಿನಿಂದ ಒಂದು ತಿಂಗಳು ಗತಿಸಿದ ಬಳಿಕ ನ್ಯಾಯ ಪಂಚಾಯತವು ಯಾವುದೇ ಖಟ್ಲೆಯ ವಿಚಾರಣೆಯನ್ನು ಮಾಡಬಾರದು.

**೫೪. ದಾವೆಗಳನ್ನು ಯಾವ ಗ್ರಾಮದ ನ್ಯಾಯ ಪಂಚಾಯತಿಯ ಮುಂದೆ ಮಾಡಬೇಕು.**

ಈ ಕಾನೂನಿನನ್ವಯದ ಪ್ರತಿಯೊಂದು ದಾವೆಯು, ಆ ದಾವೆಯನ್ನು ಮಾಡುವ ಕಾಲಕ್ಕೆ ಪ್ರತಿವಾದಿಯು, ಅಥವಾ ಒಬ್ಬನಿಗಿಂತ ಹೆಚ್ಚುಮಂದಿ ಪ್ರತಿವಾದಿಯರಿದ್ದರೆ, ಪ್ರತಿಯೊಬ್ಬ ಪ್ರತಿವಾದಿಯು ಯಾವ ಗ್ರಾಮದಲ್ಲಿ ವಾಸಿಸುತ್ತಿರುವನೋ, ಆ ಗ್ರಾಮದ ನ್ಯಾಯ ಪಂಚಾಯತಿಯ ಮುಂದೆ ಮಾಡಬೇಕು. ದಾವೆಯ ಕಾರಣವು ಯಾವ ಸ್ಥಳದಲ್ಲಿ ಉದ್ಭವಿಸಿತೆಂಬುದನ್ನು ವಿಚಾರ ಮಾಡಬಾರದು.

**೫೫. ಖಟ್ಲೆಗಳನ್ನು ಯಾವ ಗ್ರಾಮದ ನ್ಯಾಯ ಪಂಚಾಯತಿಯ ಎದುರು ತರಬೇಕು.**

ಈ ಕಾನೂನಿನನ್ವಯದ ಪ್ರತಿಯೊಂದು ಖಟ್ಲೆಯು, ಅಪರಾಧವು ಯಾವ ಗ್ರಾಮದಲ್ಲಿ ಮಾಡಲ್ಪಟ್ಟಿತೋ ಆ ಗ್ರಾಮದ ನ್ಯಾಯ ಪಂಚಾಯತಿಯ ಎದರು ತರಲ್ಪಡಬೇಕು.

**೫೬. ಫಿರ್ಯಾದಿಗಳನ್ನು ತಿರುಗಿ ಕೊಡುವದು.**

ಯಾವನೇ ಮ್ಯಾಜಿಸ್ಟ್ರೇಟನು, ನ್ಯಾಯಪಂಚಾಯತದಿಂದ ವಿಚಾರಿಸಲ್ಪಡ ಬಹುದಾದ ಅಪರಾಧವಾಗುವಂಥ ಸಂಗತಿಗಳ ವಿಷಯದ ಫಿರ್ಯಾದು ಮುಟ್ಟಿದಬಳಿಕ, ಸದರ ಫಿರ್ಯಾದನ್ನು ವಿಚಾರಿಸಲು ಅಧಿಕಾರವಿದ್ದ ನ್ಯಾಯ ಪಂಚಾಯತಿಯ ಮುಂದೆ ಹಾಜರ ಮಾಡಲು, ಆ ನ್ಯಾಯ ಪಂಚಾಯತಿಯ ಮುಂದೆ ಹಾಜರ ಮಾಡುವದರ ವಿರುದ್ಧ ಮ್ಯಾಜಿಸ್ಟ್ರೇಟನಿಗೆ ಸಮಾಧಾನ ವಾಗುವಂತೆ ಕಾರಣ ತೋರಿಸದಿದ್ದರೆ, ಅದನ್ನು ತಿರುಗಿ ಕೊಡಬೇಕು.

**೫೭. ದಾವೆ ಮತ್ತು ಖಟ್ಲೆಗಳ ಸಂಬಂಧ ಕೋರ್ಟುಗಳ ಅಧಿಕಾರ ಕ್ಷೇತ್ರದ ಪ್ರತಿಬಂಧ.**

ಆಯಾ ಕಾಲಕ್ಕೆ ಜಾರಿಯಲ್ಲಿದ್ದ ಯಾವುದೇ ಕಾನೂನಿನಲ್ಲಿ ಯಾವುದೇ ವಿಷಯವಿದ್ದರೂ, ಯಾವುದೇ ಕೋರ್ಟು ೫೬ ನೇ ಕಲಮಿನ ಠರಾವುಗಳಿಗೊಳ ಪಟ್ಟು, ಪ್ರಸಂಗಾನುಸಾರ ಜಿಲ್ಹಾ ಕೊರ್ಟು ಇಲ್ಲವೆ ಜಿಲ್ಹಾ ಮ್ಯಾಜಿಸ್ಟ್ರೇಟನು ೭೭ ನೇ ಅಥವಾ ೮೭ ನೇ ಕಲಮಿನನ್ವಯ ಲೇಖಿ ಆಜ್ಞೆ ಮಾಡದ ವಿನಃ ಮತ್ತು ಆಜ್ಞೆ ಮಾಡುವವರೆಗೆ, ೪೯ ನೇ ಕಲಮಿನಲ್ಲಿ ವಿವರಿಸಿದ ಯಾವುದೇ ದಾವೆಯನ್ನು ಹಿಡಿಯಬಾರದು ಅಥವಾ ೪೧ ನೇ ಕಲಮಿನಲ್ಲಿ ವಿವರಿಸಿದ ಯಾವುದೇ ಅಪರಾಧದ ವಿಚಾರಣೆಯನ್ನು ಮಾಡಬಾರದು.

**೫೮. ಯಾವ ಗ್ರಾಮದಲ್ಲಿ ನ್ಯಾಯ ಪಂಚಾಯತವು ಇದೆಯೋ ಆ ಗ್ರಾಮಕ್ಕೆ ೧೮೬೭ ನೇ ಇಸ್ವಿಯ ಮುಂಬಯಿ ಗ್ರಾಮ ಪೋಲಿಸ ಕಾನೂನಿನ ೧೪, ೧೫ ಮತ್ತು ೧೬ ನೇ ಕಲಮುಗಳು ಹತ್ತುವದಿಲ್ಲ.**

೧೮೬೭ ನೇ ಇಸ್ವಿಯ ಮುಂಬಯಿ ಗ್ರಾಮ ಪೋಲಿಸ ಕಾನೂನಿನಲ್ಲಿ ಏನೇ ವಿಷಯವಿದ್ದರೂ, ೩೭ ನೇ ಕಲಮಿನನ್ವಯ ಯಾವ ಗ್ರಾಮದಲ್ಲಿ

ನ್ಯಾಯ ಪಂಚಾಯತವು ರಚಿಸಲ್ಪಟ್ಟಿದೆಯೋ ಆ ಗ್ರಾಮಕ್ಕೆ ಸದರಿ ಕಾನೂನಿನ ೧೪, ೧೫ ಮತ್ತು ೧೬ ನೇ ಕಲಮುಗಳು ಹತ್ತುವದಿಲ್ಲ.

**೫೮ ಅ. ಅಧಿಕಾರಾವಧಿಯು ಮುಗಿದನಂತರ ನ್ಯಾಯ ಪಂಚಾಯತಿಯ ಮುಂದೆ ಚಾಲೂ ಇದ್ದ ಖಟ್ಲೆಗಳು.**

ಯಾವದೊಂದು ಎರಡನೇ ನ್ಯಾಯ ಪಂಚಾಯತದ ಸಭಾಸದರ ಅಧಿಕಾರಾವಧಿಯು ಮುಗಿದ ಬಳಿಕ ಹೊಸದಾಗಿ ರಚಿಸಲ್ಪಟ್ಟ ನ್ಯಾಯ ಪಂಚಾಯತವು, ಅಥವಾ ೧೦೬ ನೇ ಕಲಮಿನನ್ವಯ ಎರಡನೇ ಯಾವದೊಂದು ನ್ಯಾಯ ಪಂಚಾಯತವು ವಿಸರ್ಜಿಸಲ್ಪಟ್ಟ ಬಳಿಕ, ಹೊಸದಾಗಿ ರಚಿಸಲ್ಪಟ್ಟ ನ್ಯಾಯ ಪಂಚಾಯತವು, ಇಂಥ ಅವಧಿಯು ಮುಗಿದ ತಾರೀಖಿನ ದಿವಸ ಅಥವಾ ಹೀಗೆ ವಿಸರ್ಜಿಸಲ್ಪಟ್ಟ ತಾರೀಖಿನ ದಿವಸ ಅದರ ಮುಂದೆ ಚಾಲೂ ಇದ್ದ ಯಾವತ್ತೂ ದಾವೆಗಳ, ಖಟ್ಲೆಗಳ ಮತ್ತು ಪ್ರಕರ್ಣಗಳ ವಿಚಾರಣೆ ಮಾಡಿ ನಿರ್ಣಯಿಸಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಇಂಥ ದಾವೆಗಳ, ಖಟ್ಲೆಗಳ ಮತ್ತು ಪ್ರಕರ್ಣಗಳ ವಿಚಾರಣೆಯು, ಹೊಸದಾಗಿ ರಚಿಸಲ್ಪಟ್ಟ ನ್ಯಾಯ ಪಂಚಾಯತಿಯಮುಂದೆ ಹೊಸದಾಗಿ ದಾಖಲ ಮಾಡಲ್ಪಟ್ಟ ದಾವೆಗಳು, ಖಟ್ಲೆಗಳು ಮತ್ತು ಪ್ರಕರ್ಣಗಳು ಎಂದು ತಿಳಿದು, ಹೊಸದಾಗಿ ಪ್ರಾರಂಭಿಸಲ್ಪಡಬೇಕು.

# ವಿಭಾಗ ೭.

## ದಾವೆಗಳಲ್ಲಿ ಮತ್ತು ಖಟ್ಲೆಗಳಲ್ಲಿ ಪಂಚಾಯತಗಳು ಕೆಲಸ ನಡಿಸುವ ಕ್ರಮ (ರೀತಿ).

**೫೯. ದಾವೆಗಳನ್ನು ಮತ್ತು ಖಟ್ಲೆಗಳನ್ನು ಹೇಗೆ ಮಾಡಬೇಕು.**

ಈ ಕಾನೂನಿನನ್ವಯ ನ್ಯಾಯ ಪಂಚಾಯತಿಯ ಮುಂದೆ ದಾವೆ ಅಥವಾ ಖಟ್ಲೆಯನ್ನು ಮಾಡಲಿಚ್ಛಿಸುವ ಯಾವನೇ ಮನುಷ್ಯನು, ಚೇಅರಮನ್ನನ ಕಡೆಗೆ ಅಥವಾ ಅವನು ಗ್ರಾಮದಲ್ಲಿ ಇಲ್ಲದಿದ್ದಾಗೆ, ಆ ಚೇಅರಮನ್ನನು ಈ ಬಗ್ಗೆ ನೇಮಿಸಬಹುದಾದ ನ್ಯಾಯ ಪಂಚಾಯತಿಯ ಮತ್ತೊಬ್ಬ ಸಭಾಸದನ ಕಡೆಗೆ ಬಾಯಿಯಿಂದ ಅಥವಾ ಲೇಖಿಯಿಂದ ಅರ್ಜಿಮಾಡಬೇಕು. ಮತ್ತು ಆದೇ ಕಾಲಕ್ಕೆ ಗೊತ್ತುಪಡಿಸಿದ ಫೀಯನ್ನು ಕೊಡಬೇಕು.

**೬೦. ಅರ್ಜಿಯ ಸಾರಾಂಶವನ್ನು ಬರೆದಿಡಬೇಕು.**

ಅರ್ಜಿಯ ಸಾರಾಂಶವನ್ನು ಗೊತ್ತುಪಡಿಸಲ್ಪಟ್ಟ ರಜಿಸ್ಟರಿನಲ್ಲಿ ತಡ ಮಾಡದೆ ಬರೆದಿಡಬೇಕು, ಮತ್ತು ಆ ರಜಿಸ್ಟರಿನಮೇಲೆ ಅರ್ಜಿದಾರನ ಸಹಿಯನ್ನು ಅಥವಾ ಹೆಬ್ಬಟ್ಟಿನ ಮುದ್ರೆಯನ್ನು ತೆಗೆದುಕೊಳ್ಳಬೇಕು ಮತ್ತು ಚೇಅರಮನ್ನನು ಅಥವಾ ಅವನ ಗೈರಹಾಜರಿಯಲ್ಲಿ ೫೯ನೇ ಕಲಮಿನನ್ವಯ ಅಧಿಕಾರ ಪಡೆದ ಯಾವನೇ ಸಭಾಸದನು ಸದರ ರಜಿಸ್ಟರಿಗೆ ಸಹಿ ಮಾಡಬೇಕು.

**೬೧. ವಾದಿಯು ಅಥವಾ ಫಿರ್ಯಾದಿಯು ನ್ಯಾಯಪಂಚಾಯಿತಿಯ ಮುಂದಿನ ಸಭೆಯಲ್ಲಿ ಹಾಜರ ಇರಬೇಕು.**

೫೯ ನೇ ಕಲಮಿನ ಠರಾವುಗಳನ್ವಯ ಮಾಡಲ್ಪಟ್ಟ ಪ್ರತಿಯೊಂದು ದಾವೆಯನ್ನು ಅಥವಾ ಖಟ್ಲೆಯನ್ನು ನ್ಯಾಯ ಪಂಚಾಯತಿಯ ಮುಂದಿನ ಸಭೆಯಲ್ಲಿ ತರಬೇಕು. ಮತ್ತು ಪ್ರಸಂಗಾನುಸಾರ ವಾದಿಗೆ ಅಥವಾ

ಫಿರ್ಯಾದಿಗೆ, ಸದರಿ ಅರ್ಜಿಯು ಮಾಡಲ್ಪಟ್ಟ ಕಾಲದಲ್ಲಿ ಇಂಥ ಸಭೆಯ ಬಗ್ಗೆ ನೇಮಿಸಲ್ಪಟ್ಟ ವೇಳೆಯನ್ನು ಮತ್ತು ಸ್ಥಳವನ್ನು ತಿಳಿಸಬೇಕು, ಮತ್ತು ಆ ಕಾಲಕ್ಕೆ ಮತ್ತು ಆ ಸ್ಥಳದಲ್ಲಿ ಹಾಜರ ಆಗಲಿಕ್ಕೆ ಅವನಿಗೆ ಹೇಳಬೇಕು.

## ೬೨. ಪ್ರತಿವಾದಿಗೆ ಅಥವಾ ಆರೋಪಿಗೆ ಸಮನ್ಸ ತೆಗೆಯುವದು.

ನ್ಯಾಯ ಪಂಚಾಯತವು ಅರ್ಜಿಯನ್ನು ಕೇಳಿಕೊಂಡ ಬಳಿಕ, ಪ್ರಸಂಗಾನುಸಾರ ಪ್ರತಿವಾದಿಗೆ ಇಲ್ಲವೆ ಆರೋಪಿಗೆ ಗೊತ್ತುಪಡಿಸಲ್ಪಟ್ಟ ನಮೂನೆಯಲ್ಲಿ, ಒಂದು ಲೇಖಿ ಸಮನ್ಸನ್ನು ಜಾರಿ ಮಾಡಬೇಕು; ಮತ್ತು ಸಮನ್ಸಿನಲ್ಲಿ ಹೇಳಿದ ವೇಳೆಗೆ ಮತ್ತು ಸ್ಥಳದಲ್ಲಿ ಹಾಜರ ಆಗಿ ತನ್ನ ಪುರಾವೆಯನ್ನು ಹಾಜರ ಮಾಡಲು ಅವನಿಗೆ ಹೇಳಬೇಕು; ಮತ್ತು ಅದೇ ಕಾಲಕ್ಕೆ ವಾದಿಗೆ ಅಥವಾ ಫಿರ್ಯಾದಿಗೆ ಅಂಥ ವೇಳೆಗೆ ಮತ್ತು ಸ್ಥಳದಲ್ಲಿ ಹಾಜರಾಗಿ ತನ್ನ ಪುರಾವೆಯನ್ನು ಹಾಜರ ಮಾಡಲಿಕ್ಕೆ ಹೇಳಬೇಕು.

ಆದರೆ ಗೊತ್ತುಪಡಿಸುವದೇನಂದರೆ, ನ್ಯಾಯ ಪಂಚಾಯತವು ಅರ್ಜಿಯನ್ನು ಕೇಳಿಕೊಂಡು ವಾದಿಯನ್ನು ಅಥವಾ ಫಿರ್ಯಾದಿಯನ್ನು ಪರೀಕ್ಷಿಸಿದ ಬಳಿಕ, ತಾನು ಇದರ ಬಗ್ಗೆ ಬರೆದಿಡುವ ಕಾರಣಗಳಿಗಾಗಿ ಸಮನ್ಸನ್ನು ತೆಗೆಯಲು ನಿರಾಕರಿಸಬಹುದು ಮತ್ತು ದಾವೆಯನ್ನು ಅಥವಾ ಫಿರ್ಯಾದನ್ನು ತೆಗೆದು ಹಾಕಬಹುದು.

## ೬೩. ಸಮನ್ಸನ್ನು ಯಾರು ಜಾರಿ ಮಾಡಬೇಕು.

ಇಂಥ ಸಮನ್ಸನ್ನು ಸಾಮಾನ್ಯವಾಗಿ ಪಾಟೀಲನಿಂದ ಅಥವಾ ಗ್ರಾಮದ ಗೌಡನಿಂದ ಜಾರಿ ಮಾಡಿಸಬೇಕು. ಯಾವದೊಂದು ಗ್ರಾಮದಲ್ಲಿ ಒಬ್ಬ ಮುಲ್ಕಿ ಗೌಡನು ಮತ್ತು ಒಬ್ಬ ಪೋಲಿಸಗೌಡನು ಹೀಗೆ ಇಬ್ಬರು ಗೌಡರಿದ್ದರೆ, ಸಾಮಾನ್ಯವಾಗಿ ದಾವೆಯ ಸಂಬಂಧದ ಸಮನ್ಸನ್ನು ಮುಲ್ಕೀಗೌಡನ ಮುಖಾಂತರ ಮತ್ತು ಖಟ್ಲೆಯ ಸಂಬಂಧದ ಸಮನ್ಸನ್ನು ಪೋಲಿಸಗೌಡನ ಮುಖಾಂತರ ಜಾರಿ ಮಾಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ನ್ಯಾಯ ಪಂಚಾಯತವು ಆ ಸಮನ್ಸನ್ನು ಯಾವದೇ ಮನುಷ್ಯನ ಮುಖಾಂತರ ಜಾರಿ ಮಾಡಬಹುದು.

## ೬೪. ಸಮನ್ಸನ್ನು ಜಾರಿಮಾಡುವ ರೀತಿ.

ಸಮನ್ಸು ಎರಡು ಪ್ರತಿಯಲ್ಲಿದ್ದು ನ್ಯಾಯಪಂಚಾಯತಿಯ ಅಧ್ಯಕ್ಷನಾದ ಸಭಾಸದನಿಂದ ಸಹಿ ಮಾಡಲ್ಪಟ್ಟಿರಬೇಕು; ಮತ್ತು ಅದಷ್ಟು ಮಟ್ಟಿಗೆ ಪ್ರಸಂಗಾನುಸಾರ ಸ್ವತಃ ಪ್ರತಿವಾದಿಯ ಅಥವಾ ಆರೋಪಿಯ ಮೇಲೆ ಜಾರಿ ಮಾಡಬೇಕು. ಮತ್ತು ಜಾರಿ ಮಾಡಲ್ಪಟ್ಟ ಬಗ್ಗೆ ಅವನ ಸಹಿಯನ್ನು ಅಥವಾ ಹೆಬ್ಬಟ್ಟಿನ ಮುದ್ರೆಯನ್ನು ತಕೊಳ್ಳಬೇಕು. ಪ್ರತಿವಾದಿಯು ಅಥವಾ ಆರೋಪಿಯು ಸಿಗದಿದ್ದರೆ ಮತ್ತು ಅವನು ಸಮನ್ಸನ್ನು ಜಾರಿಮಾಡಿಕೊಳ್ಳಲು ತಪ್ಪಿಸುತ್ತಿದ್ದಾನೆಂದು ನ್ಯಾಯಪಂಚಾಯತಿಗೆ ತೃಪ್ತಿಯಾದರೆ ಅಥವಾ ಅವನು ಸಮನ್ಸನ್ನು ತಕ್ಕೊಳ್ಳಲು ನಿರಾಕರಿಸಿದರೆ. ಅವನ ಸಂಗಡ ವಾಸಿಸುತ್ತಿರುವ ಅವನ ಕುಟುಂಬದಲ್ಲಿಯ ಯಾವನೇ ಪ್ರೌಢ ಮನುಷ್ಯನ ಮೇಲೆ ಜಾರಿಮಾಡಲು ಅಥವಾ ಅವನು ಸಾಮಾನ್ಯವಾಗಿ ವಾಸಿಸುತ್ತಿರುವ ಮನೆಯ ಯಾವುದೇ ಪ್ರಮುಖ ಸ್ಥಳದಲ್ಲಿ ಅದರ ನಕಲನ್ನು ಹಚ್ಚಲಿಕ್ಕೆ ನ್ಯಾಯಪಂಚಾಯತವು ಆಜ್ಞೆ ಮಾಡಬಹುದು.

## ೬೫. ಗ್ರಾಮದ ಹೊರಗೆ ಸಮನ್ಸನ್ನು ಜಾರಿ ಮಾಡುವ ರೀತಿ.

ಸಮನ್ಸನ್ನು ತೆಗೆದಾಗ್ಗೆ ಯಾವನೇ ಪ್ರತಿವಾದಿಯು ಅಥವಾ ಆರೋಪಿಯು ಪಂಚಾಯತದ ಗ್ರಾಮದ ಹೊರಗೆ ಇದ್ದರೆ, ನ್ಯಾಯ ಪಂಚಾಯತವು ಆ ಸಮನ್ಸನ್ನು ಕಲೆಕ್ಟರನ ಕಡೆಗೆ ಅಥವಾ ಕಲೆಕ್ಟರನಿಂದ ಈ ಬಗ್ಗೆ ಅಧಿಕಾರ ಪಡೆದ ಮಾಮಲೇದಾರನಿಗಿಂತ ಕಡಿಮೆಯಲ್ಲದ ದರ್ಜೆಯ ಯಾವನೇ ಅಧಿಕಾರಿಯ ಕಡೆಗೆ ಕಳುಹಿಸಬಹುದು, ಮತ್ತು ಕಲೆಕ್ಟರನು ಅಥವಾ ಇಂಥ ಅಧಿಕಾರಿಯು ಆ ಸಮನ್ಸನ್ನು ತನ್ನ ಕೋರ್ಟಿನದೆಂದೇ ತಿಳಿದು ಜಾರಿ ಮಾಡಿಸಬೇಕು.

## ೬೬. ಕೆಲವು ಜನರಿಗೆ ದಾವೆಯಲ್ಲಿ ಹಾಜರಾಗುವದರಿಂದ ಮುಕ್ತತೆ.

(೧) ದೇಶದ ರೂಢಿಗಳ ಮತ್ತು ರೀತಿಗಳ ಪ್ರಕಾರ ಸಾರ್ವಜನಿಕ ಸ್ಥಳದಲ್ಲಿ ಹಾಜರಾಗಲಿಕ್ಕೆ ಒತ್ತಾಯಪಡಿಸಲ್ಪಡಬಾರದಂಥ ಸ್ತ್ರೀಯರಿಗೆ ಯಾವುದೇ ದಾವೆಯಲ್ಲಿ ನ್ಯಾಯಪಂಚಾಯತಿಯ ಎದುರು ಹಾಜರಾಗುವದರಿಂದ ಮುಕ್ತತೆ ಇರುವದು.

(೨) ೧೯೦೮ ನೇ ಇಸ್ವಿಯ ಸಿವ್ಹಿಲ್ ಪ್ರೊಸೀಜರ ಕೋಡಿನ (ದಿವಾಣಿ ಕೆಲಸವನ್ನು ನಡಿಸುವ ರೀತಿಯ ಕಾನೂನು) ೧೩೩ ನೇ ಕಲಮಿನನ್ವಯ ಯಾವುದೇ ಕೋರ್ಟಿನಲ್ಲಿ ಸ್ವತಃ ಹಾಜರಾಗುವವದರಿಂದ ಮುಕ್ತ ಮಾಡಲ್ಪಟ್ಟ ಮನುಷ್ಯರಿಗೆ ಯಾವುದೇ ದಾವೆಯಲ್ಲಿ ನ್ಯಾಯಪಂಚಾಯತಿಯ ಎದುರ ಸ್ವತಃ ಹಾಜರಾಗುವವದರಿಂದ ಸಹ ಮುಕ್ತತೆ ಇರುವದು.

**೬೭. ಸಾಕ್ಷಿದಾರರಿಗೆ ಸಮನ್ಸ್ ತೆಗೆಯುವದು.**

(೧) ಯಾವನೇ ಮನುಷ್ಯನ ಸಾಕ್ಷಿಯು ಅಥವಾ ಅವನು ಯಾವದೊಂದು ದಸ್ತೈವಜನ್ನು ಹಾಜರ ಮಾಡುವದು ಯಾವುದೇ ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ ಅವಶ್ಯವಿರುವದೆಂದು ನ್ಯಾಯ ಪಂಚಾಯತಿಗೆ ತೋರಿದಾಗ್ಗೆ, ಅದು, ಇಂಥ ಮನುಷ್ಯನಿಗೆ ಹಾಜರಾಗಲಿಕ್ಕೆ ಅಥವಾ ಇಂಥ ದಸ್ತೈವಜನ್ನು ಹಾಜರಮಾಡಲಿಕ್ಕೆ ಅಥವಾ ಮಾಡಿಸಲಿಕ್ಕೆ ಒತ್ತಾಯಪಡಿಸುವದಕ್ಕೆ ಅವನಿಗೆ ಒಂದು ಸಮನ್ಸನ್ನು ತೆಗೆಯಬಹುದು, ಮತ್ತು ಇಂಥ ಮನುಷ್ಯನು ಆ ಸಮನ್ಸಿನಲ್ಲಿದ್ದ ಆಜ್ಞೆಗಳನ್ನು ಪಾಲಿಸಲು ಬದ್ಧನಿರುವನು. ಇಂಥ ಸಮನ್ಸ ಇದರಲ್ಲಿ ಹಿಂದೆ ಠರಾಯಿಸಿದ ನಮೂನೆಯಲ್ಲಿರಬೇಕು ಮತ್ತು ಅಂಥ ರೀತಿಯಲ್ಲಿ ಜಾರಿ ಮಾಡಲ್ಪಡಬೇಕು.

(೨) ಯಾವನೊಬ್ಬ ಸಾಕ್ಷಿದಾರನನ್ನು ಹಾಜರ ಪಡಿಸುವದು, ಹೆಚ್ಚಿನ ವಿಳಂಬ ವೆಚ್ಚ ಅಥವಾ ಅನಾನುಕೂಲತೆಯ ವಿನಃ ಸಾಧ್ಯವಿರುವದಿಲ್ಲವೆಂದು ಮತ್ತು ಇಂಥ ವಿಳಂಬ, ವೆಚ್ಚ ಇಲ್ಲವೆ ಅನಾನುಕೂಲತೆ ಆಯಾ ಪರಿಸ್ಥಿತಿಯಲ್ಲಿ ಅಯೋಗ್ಯವೆಂದು ನ್ಯಾಯ ಪಂಚಾಯತಿಯ ಅಭಿಪ್ರಾಯವಾದಾಗ್ಗೆ, ಅದು ಆ ಸಾಕ್ಷಿದಾರನಿಗೆ ಸಮನ್ಸ ತೆಗೆಯಲಿಕ್ಕೆ ಅಥವಾ ಆ ಸಾಕ್ಷಿದಾರನ ಮೇಲೆ ಮೊದಲೇ ತೆಗೆಯಲ್ಪಟ್ಟ ಸಮನ್ಸನ್ನು ಜಾರಿಯಲ್ಲಿ ತರಲಿಕ್ಕೆ ನಿರಾಕರಿಸಬಹುದು.

(೩) ಯಾವುದೇ ನ್ಯಾಯ ಪಂಚಾಯತವು, ಗ್ರಾಮದ ಹೊರಗೆ ಇರುವ ಯಾವನೇ ಮನುಷ್ಯನಿಗೆ, ಅವನ ಯೋಗ್ಯವೆಚ್ಚಕ್ಕಾಗಿ, ನ್ಯಾಯ ಪಂಚಾಯತಿಗೆ ಸರಿಯೆಂದು ತೋರುವಷ್ಟು ಹಣವು ನ್ಯಾಯ ಪಂಚಾಯತಿಯಲ್ಲಿ ಠೇವು ಇಡಲ್ಪಡದವಿನಃ ಸಾಕ್ಷಿಗಾಗಿ ಹಾಜರಾಗಲು ಅಥವಾ ದಸ್ತೈವ

ಜನ್ನು ಹಾಜರ ಮಾಡಲಿಕ್ಕೆ ಒತ್ತಾಯ ಪಡಿಸಬಾರದು, ಮತ್ತು ಪ್ರಸಂಗಾನು ಸಾರ ಕಲೆಕ್ಟರನ ಅಡವಾ ೬೫ ನೇ ಕಲಮಿನನ್ವಯ ಅಧಿಕಾರ ಪಡೆದ ಅದಿಕಾರಿಯ ಅಭಿಪ್ರಾಯದಂತೆ ಸದರ ದಾವೆಯ ಅಥವಾ ಖಟ್ಲೆಯ ಯೋಗ್ಯ ತಿರ್ಮಾನದ ಬಗ್ಗೆ ಇಂಥ ಯಾವನೇ ಮನುಷ್ಯನ ಹಾಜರಿಯು ಅವಶ್ಯವಿಲ್ಲವಾ ದರೆ, ಇಂಥ ಕಲೆಕ್ಟರನು ಅಥವಾ ಅಧಿಕಾರಿಯು ಹಾಗೆ ಶರಾ ಬರೆದು ಸದರ ಸಮನ್ಸನ್ನು ನ್ಯಾಯ ಪಂಚಾಯತಿಗೆ ತಿರುಗಿ ಕಳುಹಿಸಬೇಕು.

(೪) ೧೮೭೨ ನೇ ಇಸ್ವಿಯ ಭಾರತದ ಪುರಾವೆಯ ಕಾಸೂನಿನನ್ವಯ ಅಥವಾ ಆಯಾಕಾಲಕ್ಕೆ ಅಮಲಿನಲ್ಲಿರುವ ಇತರ ಯಾವುದೇ ಕಾಸೂನಿ ನನ್ವಯ ಯಾವ ಸಾಕ್ಷಿಯನ್ನು ಕೊಡಲಿಕ್ಕೆ ಯಾವ ಮನುಷ್ಯನಿಗೆ ಅಪ್ಪಣೆ ಇಲ್ಲವೋ ಅಥವಾ ಯಾವ ಪತ್ರವ್ಯವಹಾರವನ್ನು ಪ್ರಕಟಮಾಡಲಿಕ್ಕೆ ಒತ್ತಾಯ ಪಡಿಸಬಾರದೋ ಅಂಥ ಸಾಕ್ಷಿಯನ್ನು ಕೊಡಲಿಕ್ಕೆ ಅಥವಾ ಅಂಥ ಪತ್ರವ್ಯವಹಾರವನ್ನು ಪ್ರಕಟಮಾಡಲಿಕ್ಕೆ ಅಂಥ ಮನುಷ್ಯನಿಗೆ ಯಾವುದೇ ನ್ಯಾಯ ಪಂಚಾಯತವು ಒತ್ತಾಯ ಪಡಿಸಬಾರದು.

**೬೮. ವಕೀಲ ಮುಂತಾದವರಿಗೆ ಹಾಜರಾಗಲಿಕ್ಕೆ ಪ್ರತಿಬಂಧ.**

ನ್ಯಾಯ ಪಂಚಾಯತಿಯ ಮುಂದಿನ ಯಾವುದೇ ದಾವೆಯಲ್ಲಿಯ ಅಥವಾ ಖಟ್ಲೆಯಲ್ಲಿಯ ಯಾವನೇ ಪಕ್ಷಕಾರನ ವತಿಯಿಂದ ಹಾಜರಾಗಲಿಕ್ಕೆ ಯಾವನೇ ಪ್ಲೀಡರನಿಗೆ, ವಕೀಲನಿಗೆ ಅಥವಾ ಮುಖ್ತಿಯಾರನಿಗೆ ಮತ್ತು ಹಾಯಕೋರ್ಟಿನ ಯಾವನೇ ಅಡ್ವೋಕೇಟನಿಗೆ ಅಥವಾ ಅಟರ್ನಿಗೆ ಅಪ್ಪಣೆ ಇರುವದಿಲ್ಲ.

ಆದರೆ ಗೊತ್ತುಪಡಿಸುವದೇನಂದರೆ, ನ್ಯಾಯ ಪಂಚಾಯತಿಗೆ ತೃಪ್ತಿ ಯಾಗುವಂತೆ, ಯೋಗ್ಯ ಕಾರಣವನ್ನು ತೋರಿಸಿದ ಬಳಿಕ ಇಂಥ ದಾವೆ ಯಲ್ಲಿಯ ಅಥವಾ ಖಟ್ಲೆಯಲ್ಲಿಯ ಯಾವನೇ ಪಕ್ಷಕಾರನಿಗೆ, ಪ್ಲೀಡರ, ವಕೀಲ ಮುಖ್ತಿಯಾರ ಅಥವಾ ಹಾಯಕೋರ್ಟಿನ ಅಡ್ವೋಕೇಟ ಅಥವಾ ಅಟರ್ನಿ ಇರದಿರುವ ಮತ್ತು ಈ ಮೊದಲು ಆಗಿರದಿದ್ದ ಯಾವನೇ ಆಪ್ತನನ್ನು, ಸೇವಕನನ್ನು, ಆಶ್ರಿತನನ್ನು ಅಥವಾ ಸ್ನೇಹಿತನನ್ನು ಇಂಥ ಪಕ್ಷಕಾರನ

ನಂಗಡ ಅಥವಾ ಅವನ ಬದಲು ಹಾಜರಾಗಲು ನೇಮಿಸುವದಕ್ಕೆ ಅಪ್ಪಣೆ ಕೊಡಬಹುದು.

ಯಾವನೊಬ್ಬ ಪಕ್ಷಕಾರನ ಬದಲು ಯಾವನೇ ಆಪ್ತನು, ಸೇವಕನು, ಆಶ್ರಿತನು, ಅಥವಾ ಸ್ನೇಹಿತನು ಹಾಜರಾದಾಗ್ಗೆ, ಅವನು ಎಷ್ಟರಮಟ್ಟಿಗೆ ಕೆಲಸ ನಡಿಸಲಿಕ್ಕೆ ಅಧಿಕಾರ ಪಡೆದಿರುವನೋ ಅಂಥ ಅಧಿಕಾರ ಕ್ಷೇತ್ರವನ್ನು ವಿವರಿಸುವ ಒಂದು ಲೇಖಿ ಅಧಿಕಾರಪತ್ರವನ್ನು ಅವನಿಗೆ ಇಂಥ ಪಕ್ಷಕಾರನು ಕೊಡಬೇಕು.

**೬೯. ಖಾತ್ರಿಮಾಡಿಕೊಂಡ ಸಂಗತಿಗಳ ಮೇಲಿಂದ ದಾವೆಯ ಅಥವಾ ಖಟ್ಲೆಯ ನಿರ್ಣಯ ಮಾಡುವದು.**

(೧) ನ್ಯಾಯ ಪಂಚಾಯತವು ಈ ಕಾನೂನಿನ ಮತ್ತು ನಿಯಮಗಳ ಮೇರೆಗೆ ಒಂದು ವಿಚಾರಣೆಯನ್ನು ಮಾಡಿದನಂತರ ತನ್ನ ಮುಂದೆ ಬಂದ ದಾವೆಯ ಅಥವಾ ಖಟ್ಲೆಯ ನಿಜವಾದ ಸಂಗತಿಗಳನ್ನು ಖಾತ್ರಿ ಪೂರ್ವಕ ತಿಳಿದುಕೊಳ್ಳುವದು ಅದರ ಕರ್ತವ್ಯವಿರುವದು.

(೨) ಪುರಾವೆಯ ಅಥವಾ ಕೆಲಸನಡಿಸುವ ರೀತಿಯ ಸಂಬಂಧದ ಯಾವುದೇ ಕಾನೂನಿನಲ್ಲಿ ಇರುವ ಯಾವುದೇ ವಿಷಯದಿಂದ ಇಂಥ ವಿಚಾರಣೆಯನ್ನು ಮಾಡಲಿಕ್ಕೆ ನ್ಯಾಯ ಪಂಚಾಯತಿಗೆ ಇರುವ ಅಧಿಕಾರ ಗಳಿಗೆ ಯಾವುದೇ ರೀತಿಯಿಂದ ಬಾಧೆ ಬರಲಾರದು.

(೩) ನ್ಯಾಯ ಪಂಚಾಯತವು ಇಂಥ ವಿಚಾರಣೆಯನ್ನು ಮಾಡಿದ ನಂತರ, ಈ ಕಾನೂನಿಗೆ ಒಳಪಟ್ಟು, ತನಗೆ ನ್ಯಾಯವಾದದ್ದು ಮತ್ತು ಸರಿ ಯಾದದ್ದು ಎಂದು ತೋರುವ ಹುಕುಮನಾಮೆ [Decree] ಯನ್ನು ಅಥವಾ ಆಜ್ಞೆಯನ್ನು ಠರಾಯಿಸಿದ ಫೀ ಸಹಿತ ಅಥವಾ ಫೀ ಇಲ್ಲದೆ, ಮಾಡಬಹುದು. ಇಂಥ ಹುಕುಮ-ನಾಮೆಯಲ್ಲಿ ಅಥವಾ ಆಜ್ಞೆಯಲ್ಲಿ ನಿರ್ಣಯ ಮತ್ತು ಅದರ ಕಾರಣಗಳ ಒಂದು ಸಂಕ್ಷಿಪ್ತ ನಿರೂಪಣೆ ಇರಬೇಕು.

**೭೦. ನ್ಯಾಯ ಪಂಚಾಯತಿಯ ನಿರ್ಣಯ.**

ನ್ಯಾಯ ಪಂಚಾಯತಿಯ ನಿರ್ಣಯವು ಸಭೆಯಲ್ಲಿ ಹಾಜರ ಇರುವ ನ್ಯಾಯ ಪಂಚಾಯತಿಯ ಸಭಾಸದರ ಮತಾನುಸಾರ ಅಥವಾ ಇಂಥ ಸಭಾ

ಸದರ ಬಹುಮತಾನುಸಾರ ಇರಬೇಕು. ಸಭಾಸದರಲ್ಲಿ ಮತಭೇದವಾಗಿ ಉಭಯ ಪಕ್ಷಗಳ ಮತಗಳು ಸಮನಾದರೆ, ಅಧ್ಯಕ್ಷನಾದವನಿಗೆ ಎರಡನೇ ಅಥವಾ ನಿರ್ಣಾಯಕ ಮತಕೊಡಲು ಬರುವದು.

**೭೧. ದಾವೆಯ ಅಥವಾ ಖಟ್ಲೆಯ ವಿಚಾರಣೆಯನ್ನು ಮುಂದೆ ಹಾಕುವದು.**

ನ್ಯಾಯ ಪಂಚಾಯತವು ಕಾಲಕಾಲಕ್ಕೆ ಯಾವುದೇ ದಾವೆಯ ಅಥವಾ ಖಟ್ಲೆಯ ವಿಚಾರಣೆಯನ್ನು ಮುಂದೆ ಹಾಕಬಹುದು.

ಆದರೆ ಗೊತ್ತುಪಡಿಸುವದೇನಂದರೆ, ಇಂಥ ಮುಂದೆ ಹಾಕುವಿಕೆಯು ನ್ಯಾಯಪಂಚಾಯತಿಯ ಅಭಿಪ್ರಾಯದಲ್ಲಿ, ಅನಿವಾರ್ಯ ವಿರಬೇಕು ಅಥವಾ ದಾವೆಯ ಅಥವಾ ಖಟ್ಲೆಯ ನ್ಯಾಯವಾದ ಹಾಗೂ ಸರಿಯಾದ ನಿರ್ಣಯಕ್ಕಾಗಿ ಅವಶ್ಯ ವಿರಬೇಕು.

**೭೨. ಸಂಬಂಧವಿದ್ದ ಪಕ್ಷಕಾರನು ಗೈರಹಾಜರ ಇದ್ದಾಗ್ಗೆ ದಾವೆಯ ಅಥವಾ ಖಟ್ಲೆಯ ವ್ಯವಸ್ಥೆ.**

(೧) ವಾದಿಗೆ ಅಥವಾ ಫಿರ್ಯಾದಿಗೆ ವಿಚಾರಣೆಯ ಬಗ್ಗೆ ನೇಮಿಸಲ್ಪಟ್ಟ ವೇಳೆಯು ಮತ್ತು ಸ್ಥಳವು ತಿಳಿಸಲ್ಪಟ್ಟನಂತರ ಅವನು ಹಾಜರಾಗಲು ತಪ್ಪಿದರೆ, ನ್ಯಾಯ ಪಂಚಾಯತವು ಅವನ ಗೈರ ಹಾಜರಿಯಲ್ಲಿ ಆ ದಾವೆಯ ಅಥವಾ ಖಟ್ಲೆಯ ವಿಚಾರಣೆಯನ್ನ ಮಾಡಬಹುದು ಮತ್ತು ಅದರ ನಿರ್ಣಯವನ್ನು ಕೊಡಬಹುದು.

(೨) ಪ್ರತಿವಾದಿಯ ಅಥವಾ ಆರೋಪಿಯಮೇಲೆ ಇದರಲ್ಲಿ ಹಿಂದೆ ಗೊತ್ತುಪಡಿಸಿದ ರೀತಿಯಲ್ಲಿ ಸಮನ್ಸು ಜಾರಿಯಾಗಿದ್ದರೆ, ಅಥವಾ ವಿಚಾರಣೆಯ ಬಗ್ಗೆ ನೇಮಿಸಲ್ಪಟ್ಟ ವೇಳೆಯು ಮತ್ತು ಸ್ಥಳವು ಅವನಿಗೆ ತಿಳಿಸಲ್ಪಟ್ಟಿದ್ದರೆ, ನ್ಯಾಯಪಂಚಾಯತವು ದಾವೆಯ ಅಥವಾ ಖಟ್ಲೆಯ ವಿಚಾರಣೆಯನ್ನು ಮಾಡಬಹುದು ಮತ್ತು ಅದರ ನಿರ್ಣಯವನ್ನು ಕೊಡಬಹುದು.

ಆದರೆ ಗೊತ್ತುಪಡಿಸುವದೇನಂದರೆ, ಯಾವನೇ ಆರೋಪಿಯು ತಾನು ಸ್ವತಃ ಇಲ್ಲವೆ ಪ್ರತಿನಿಧಿಯ ಮುಖಾಂತರ ನ್ಯಾಯಪಂಚಾಯತಿಯ ಎದುರು

ಹಾಜರಾಗದ ವಿನಃ ಮತ್ತು ಅವನ ಜಬಾನಿಯ ಸಾರಾಂಶವು ಗೊತ್ತುಪಡಿಸಲ್ಪಟ್ಟ ರಜಿಸ್ಟರಿನಲ್ಲಿ ನೊಂದಾಯಿಸಲ್ಪಡದ ವಿನಃ, ನ್ಯಾಯ ಪಂಚಾಯತವು ಅವನಿಗೆ ಯಾವುದೇ ಶಿಕ್ಷೆಯನ್ನು ವಿಧಿಸಬಾರದು.

(೩) ಆರೋಪಿಯಮೇಲೆ ಸಮನ್ಸು ಜಾರಿಯಾದನಂತರ ಅವನು ಸ್ವತಃ ಇಲ್ಲವೆ ಪ್ರತಿನಿಧಿಯ ಮುಖಾಂತರ ಹಾಜರಾಗಲಿಕ್ಕೆ ತಪ್ಪಿದರೆ, ನ್ಯಾಯ ಪಂಚಾಯತವು ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟನಿಗೆ ಅಥವಾ ಅವನಿಂದ ಈ ಬಗ್ಗೆ ಅಧಿಕಾರ ಪಡೆದ ಯಾವನೇ ಎರಡನೇ ವರ್ಗದ ಮ್ಯಾಜಿಸ್ಟ್ರೇಟನ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅಧಿಕಾರಿಗೆ ಅರ್ಜಿ ಮಾಡಬಹುದು, ಮತ್ತು ಇಂಥ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟನು ಅಥವಾ ಅಧಿಕಾರಿಯು, ತಾನು ಆ ಖಟ್ಲೆಯ ವಿಚಾರಣೆಯನ್ನು ಮಾಡುವ ಕೋರ್ಟ ಇದ್ದಂತೆಯೇ ಎಂದು ತಿಳಿದು, ಆ ಆರೋಪಿಗೆ ನ್ಯಾಯ ಪಂಚಾಯತಿಯ ಎದುರು ಸ್ವತಃ ಅಥವಾ ಪ್ರತಿನಿಧಿಯ ಮುಖಾಂತರ ಹಾಜರಾಗಲು ಒತ್ತಾಯಪಡಿಸಬೇಕು.

(೪) ಆರೋಪಿಗೆ ೩ನೇ ಉಪಕಲಮಿನನ್ವಯ ನ್ಯಾಯಪಂಚಾಯತಿಯ ಎದುರು ಹಾಜರಾಗಲು ಒತ್ತಾಯಪಡಿಸಿದಾಗ್ಗೆ, ನ್ಯಾಯಪಂಚಾಯತವು ಕೂಡಲೇ ಅವನ ಜಬಾನಿಯನ್ನು ತೆಗೆದುಕೊಳ್ಳಬೇಕು, ಮತ್ತು ಆ ನಂತರ ಆ ಖಟ್ಲೆಯ ವಿಚಾರಣೆಯಲ್ಲಿ ಅವನಿಗೆ ಹಾಜರಾಗಲಿಕ್ಕೆ ಒತ್ತಾಯವಿಲ್ಲ.

**೭೩. ದಾವೆ ಮತ್ತು ಖಟ್ಲೆಗಳಲ್ಲಿ ರಾಜಿಯಾಗೋಣ.**

(೧) ಯಾವುದೊಂದು ದಾವೆಯು, ಪೂರ್ಣವಾಗಿಯಾಗಲಿ ಅಂಶತಃವಾಗಿಯಾಗಲಿ ಆಣೆಯ [ಶಪಥ] ಮೂಲಕ ಅಥವಾ ಯಾವುದೇ ಕ್ರಮಬದ್ಧವಾದ ಕರಾರಿನ ಅಥವಾ ರಾಜಿಯ ಮೂಲಕ ಅಥವಾ ಹಣಕೊಟ್ಟ ಮೂಲಕ ರಾಜಿಮಾಡಲ್ಪಟ್ಟಿದೆಯೆಂದು ನ್ಯಾಯಪಂಚಾಯತಿಗೆ ತೃಪ್ತಿಯಾಗುವಂತೆ ಸಿದ್ಧಮಾಡಿಕೊಟ್ಟಲ್ಲಿ, ಸದರ ನ್ಯಾಯ ಪಂಚಾಯತವು ಇಂಥ ಕರಾರನ್ನು, ರಾಜಿಯನ್ನು ಅಥವಾ ಹಣಕೊಟ್ಟದ್ದನ್ನು ಬರೆದಿಡಬೇಕೆಂದು ಆಜ್ಞೆಮಾಡಬೇಕು, ಮತ್ತು ಆ ಮೇರೆಗೆ, ಅದು ಆ ದಾವೆಗೆ ಸಂಬಂಧಪಡುವ ಮಟ್ಟಿಗೆ, ಒಂದು ಹುಕುಮ ನಾಮೆಯನ್ನು ಮಾಡಬೇಕು.

(೨) ನ್ಯಾಯಪಂಚಾಯತವು ಯಾವುದೇ ಖಟ್ಲೆಯನ್ನು ರಾಜಿಮಾಡಿ ಕೊಳ್ಳಲಿಕ್ಕೆ ಅಪ್ಪಣೆ ಕೊಡಬಹುದು.

ಆದರೆ ಗೊತ್ತುಪಡಿಸುವದೇನಂದರೆ, ೧ನೇ ಉಪಕಲಮಿನನ್ವಯ ಯಾವುದೊಂದು ನ್ಯಾಯಪಂಚಾಯತವು ಸದರ ಕರಾರಿಗೆ, ರಾಜಿಗೆ ಅಥವಾ ಹಣಕೊಟ್ಟದ್ದಕ್ಕನುಗುಣವಾಗಿ ಹುಕುಮನಾಮೆಯನ್ನು ಮಾಡದಿದ್ದಾಗ ಅಥವಾ ೨ನೇ ಉಪಕಲಮಿನನ್ವಯ ಯಾವುದೊಂದು ಖಟ್ಲೆಯನ್ನು ರಾಜಿ ಮಾಡಿ ಕೊಳ್ಳಲಿಕ್ಕೆ ಅಪ್ಪಣೆಕೊಡದಿದ್ದಾಗ, ಅದು ತನ್ನ ಕಾರಣಗಳನ್ನು ಬರೆದಿಡತಕ್ಕದ್ದು.

**೭೪. ಪಕ್ಷಕಾರರ ಮರಣ.**

ದಾವೆಯಲ್ಲಿಯ ಯಾವನೇ ಪಕ್ಷಕಾರನು ಹುಕುಮ ನಾಮೆಯಾಗುವ ಪೂರ್ವದಲ್ಲಿ ಮರಣ ಹೊಂದಿದರೆ ಆ ದಾವೆಯು ಕೊನೆಗೊಳ್ಳುವದು, ಆದರೆ [ದಾವೆಯು] ಅದೇ ಕಾರಣದಮೇಲೆ ಹೊಸದೊಂದು ದಾವೆಯನ್ನು ಮಾಡ ಬಹುದು, ಮತ್ತು ಹೊಸದಾವೆಯ ಬಗ್ಗೆ ೫೩ ನೇ ಕಲಮಿನಲ್ಲಿ ಠರಾಯಿಸಿದ ಮುದ್ದತಿನ ಲೆಖ್ಖವನ್ನು ಮಾಡುವಾಗ್ಗೆ ಆ ದಾವೆಯು ಚಾಲೂ ಇರುವ ವೇಳೆ ಯನ್ನು ಲೆಖ್ಖದಲ್ಲಿ ಹಿಡಿಯಬಾರದು.

**೭೫. ನ್ಯಾಯಪಂಚಾಯತವು ತನ್ನ ನಿರ್ಣಯವನ್ನು ಪುನಃ ಅವಲೋಕನೆ ಮಾಡಬಾರದು ಅಥವಾ ಬದಲಿಸಬಾರದು.**

(೧) ೨ನೇ ಉಪಕಲಮಿನಲ್ಲಿ ಠರಾಯಿಸಿದ್ದನ್ನು ಹೊರ್ತುಪಡಿಸಿ ನ್ಯಾಯಪಂಚಾಯತವು ತಾನು ಕೊಟ್ಟ ಯಾವುದೇ ಹುಕುಮನಾಮೆಯನ್ನು ಅಥವಾ ಆಜ್ಞೆಯನ್ನು ರದ್ದುಮಾಡಲಿಕ್ಕೆ, ಪುನರವಲೋಕನೆಮಾಡಲಿಕ್ಕೆ ಅಥವಾ ಬದಲಿಸಲಿಕ್ಕೆ ಅಧಿಕಾರವಿಲ್ಲ.

(೨) ನ್ಯಾಯಪಂಚಾಯತಿಯ ಹುಕುಮನಾಮೆಯ ಅಥವಾ ಆಜ್ಞೆಯ ತಾರೀಖಿನಿಂದ ಒಂದು ತಿಂಗಳೊಳಗಾಗಿ ಅರ್ಜಿಯು ಮಾಡಲ್ಪಟ್ಟರೆ, ಆ ನ್ಯಾಯ ಪಂಚಾಯತವು ಕಾರಣಗಳನ್ನು ಬರೆದು, ತಪ್ಪಿನಬಗ್ಗೆ ತೆಗೆದು ಹಾಕಲ್ಪಟ್ಟ ಯಾವುದೇ ದಾವೆಯನ್ನು ಅಥವಾ, ಯಾತರಲ್ಲಿ ಪ್ರತಿವಾದಿಯ

ವಿರುದ್ಧ ಏಕತರ್ಫಿ ಹುಕುಮ ನಾಮೆಯು ಕೊಡಲ್ಪಟ್ಟಿರುವದೋ ಅಂಥ ದಾವೆಯನ್ನು ಪುನಃ ವಿಚಾರಣೆಗೆ ತೆಗೆದುಕೊಳ್ಳಬಹುದು.

**೭೬. ಬಡ್ಡಿ ಮತ್ತು ಕಂತುಗಳು.**

ಹಣದ ವಿಷಯದ ದಾವೆಗಳಲ್ಲಿ, ನ್ಯಾಯ ಪಂಚಾಯತವು ತನ್ನ ವಿವೇಕಕ್ಕೆ ಸರಿದೋರಿದಂತೆ, ಹುಕುಮ ನಾಮೆಯಾದ ರಕಮಿನಮೇಲೆ ಹುಕುಮ ನಾಮೆಯ ತಾರೀಖಿನಿಂದ ಹಣ ಕೊಡುವ ತಾರೀಖಿನ ವರೆಗೆ ನೂರಕ್ಕೆ ವರ್ಷಕ್ಕೆ ಆರಕ್ಕಿಂತ ಹೆಚ್ಚಲ್ಲದ ದರದಂತೆ ಬಡ್ಡಿಯನ್ನು ಮತ್ತು ಠರಾಯಿಸಲ್ಪಡಬಹುದಾದ ಯಾವದೇ ಫೀಗಳನ್ನು ಕೊಡಬೇಕೆಂದು ಆಜ್ಞೆಮಾಡಬಹುದು.

ನ್ಯಾಯ ಪಂಚಾಯತವು ಯಾವುದೇ ದಾವೆಯಲ್ಲಿ ಹಣವನ್ನು ಕೊಡುವ ಬಗ್ಗೆ ಹುಕುಮನಾಮೆಯನ್ನು ಮಾಡಿದಾಗ್ಗೆ, ಅದು ಆ ಹಣವನ್ನು ಬಡ್ಡಿಯಿಲ್ಲದೆ ಅಥವಾ ಮೇಲೆ ಹೇಳಿದ ದರಕ್ಕಿಂತ ಹೆಚ್ಚಲ್ಲದ ದರದಂತೆ ಬಡ್ಡಿಸಹಿತವಾಗಿ, ಕಂತಿನಿಂದ ಕೊಡಬೇಕೆಂದು ಆಜ್ಞೆ ಮಾಡಬಹುದು.

**೭೭. ನ್ಯಾಯಪಂಚಾಯತವು ಜಿಲ್ಹಾ ಕೋರ್ಟಿಗೆ ಅಥವಾ ಜಿಲ್ಹಾ ಮ್ಯಾಜಿಸ್ಟ್ರೇಟನಿಗೆ ಬರೆದು ಕಳುಹಿಸುವದು.**

(೧) ಯಾವುದೇ ನ್ಯಾಯಪಂಚಾಯತವು ತನ್ನ ಮುಂದೆ ಬಂದ ದಾವೆಯು ಅಥವಾ ಖಟ್ಲೆಯು ಕೋರ್ಟಿನಿಂದ ವಿಚಾರಿಸಲ್ಪಡತಕ್ಕಂಥಾದ್ದು ಅಥವಾ ಅಷ್ಟು ಗಹನವಾದದ್ದು ಅಥವಾ ಮಹತ್ವವುಳ್ಳದ್ದು ಇರುವದೆಂದು ಅಭಿಪ್ರಾಯ ಪಟ್ಟಾಗ್ಗೆ ಅಥವಾ ಯಾವುದೊಂದು ಖಟ್ಲೆಯಲ್ಲಿ ಇಂಥ ನ್ಯಾಯ ಪಂಚಾಯತಿಗೆ ಕೊಡಲು ಅಧಿಕಾರವಿರುವ ಶಿಕ್ಷೆಗಿಂತ ಬೇರೆ ವಿಧದ ಅಥವಾ ಅದಕ್ಕಿಂತ ಹೆಚ್ಚಿನ ಕಠಿಣ ಶಿಕ್ಷೆ ಆರೋಪಿಗೆ ಕೊಡತಕ್ಕದ್ದು ಎಂದು ಇದ್ದಾಗ್ಗೆ ಅದು ಕೆಲಸವನ್ನು ನಿಲ್ಲಿಸಬೇಕು, ಮತ್ತು ಸದರ ದಾವೆಯನ್ನು ಜಿಲ್ಹಾ ಕೋರ್ಟಿಗೆ ಅಥವಾ ಸದರ ಖಟ್ಲೆಯನ್ನು ಜಿಲ್ಹಾ ಮ್ಯಾಜಿಸ್ಟ್ರೇಟನ ಕಡೆಗೆ ಆಜ್ಞೆಯ ಸಲುವಾಗಿ ಬರೆದು ಕಳಿಸಬೇಕು.

(೨) ಪ್ರಸಂಗಾನುಸಾರ, ಜಿಲ್ಹಾ ಕೋರ್ಟು ಅಥವಾ ಜಿಲ್ಹಾ ಮ್ಯಾಜಿಸ್ಟ್ರೇಟನು ಸದರಿ ದಾವೆಯು ಅಥವಾ ಖಟ್ಲೆಯು ನ್ಯಾಯಪಂಚಾಯತಿಯಿಂದ ವಿಚಾರಿಸಲ್ಪಡಬಾರದಂಥಾದ್ದು ಅಥವಾ ಅಷ್ಟು ಗಹನವಾದದ್ದು ಅಥವಾ ಮಹತ್ವವುಳ್ಳದ್ದು ಇರುವದೆಂದು ಅಭಿಪ್ರಾಯಪಟ್ಟರೆ ಅಥವಾ ಯಾವುದೊಂದು ಖಟ್ಲೆಯಲ್ಲಿ ಇಂಥ ನ್ಯಾಯಪಂಚಾಯತಿಗೆ ಕೊಡಲು ಅಧಿಕಾರ ವಿರುವ ಶಿಕ್ಷೆಗಿಂತ ಬೇರೆ ವಿಧದ ಅಥವಾ ಅದಕ್ಕಿಂತ ಕಠಿಣ ಶಿಕ್ಷೆ ಅರೋಪಿಗೆ ಕೊಡತಕ್ಕದ್ದು ಎಂದು ಇದ್ದಾಗ್ಗೆ ಇಂಥ ಕೋರ್ಟು ಅಥವಾ ಮ್ಯಾಜಿಸ್ಟ್ರೇಟನು ಇಂಥ ದಾವೆಯ ಅಥವಾ ಖಟ್ಲೆಯ ವಿಚಾರಣೆಮಾಡಲಿಕ್ಕೆ ಅಧಿಕಾರವಿರುವ, ಪ್ರಸಂಗಾನುಸಾರ, ದಿವಾಣಿ ಅಥವಾ ಫೌಜದಾರಿ ಕೋರ್ಟಿನಲ್ಲಿ ಸದರ ದಾವೆಯನ್ನು ಅಥವಾ ಖಟ್ಲೆಯನ್ನು ಮಾಡಲು ವಾದಿಗೆ ಅಥವಾ ಫಿರ್ಯಾದಿಗೆ ಆಜ್ಞೆ ಮಾಡಬೇಕು.

(೩) ಪ್ರಸಂಗಾನುಸಾರ ಜಿಲ್ಹಾ ಕೋರ್ಟು ಅಥವಾ ಜಿಲ್ಹಾ ಮ್ಯಾಜಿಸ್ಟ್ರೇಟನು ಸದರ ದಾವೆಯು ಅಥವಾ ಖಟ್ಲೆಯು ಯಾವದೊಂದು ಕೋರ್ಟಿನಿಂದ ವಿಚಾರಿಸಲ್ಪಡತಕ್ಕಂಥಾದ್ದು ಅಥವಾ ಅಷ್ಟು ಗಹನವಾದದ್ದು ಅಥವಾ ಮಹತ್ವವುಳ್ಳದ್ದು ಇರುವದಿಲ್ಲವೆಂದು ಅಭಿಪ್ರಾಯಪಟ್ಟರೆ ಅಥವಾ ಯಾವದೊಂದು ಖಟ್ಲೆಯಲ್ಲಿ ಇಂಥ ನ್ಯಾಯಪಂಚಾಯತಿಗೆ ಕೊಡಲು ಅಧಿಕಾರವಿರುವ ಶಿಕ್ಷೆಗಿಂತ ಬೇರೆ ವಿಧದ ಅಥವಾ ಅದಕ್ಕಿಂತ ಕಠಿಣ ಶಿಕ್ಷೆ ಆರೋಪಿಗೆ ಆಗಬಾರದೆಂದು ಇದ್ದರೆ, ಇಂಥ ಕೋರ್ಟು ಅಥವಾ ಇಂಥ ಮ್ಯಾಜಿಸ್ಟ್ರೇಟನು ಸದರೀ ದಾವೆಯನ್ನು ಅಥವಾ ಖಟ್ಲೆಯನ್ನು ಬರೆದು ಕೇಳಿದ ನ್ಯಾಯಪಂಚಾಯತಿಗೆ ನಿಕಾಲೆಗಾಗಿ ತಿರುಗಿ ಕಳುಹಿಸಬೇಕು.

**೭೮. ಅಪೀಲುಗಳು.**

(೧) ಯಾವುದೇ ದಾವೆಯು ಸಂಬಂಧ ನ್ಯಾಯಪಂಚಾಯತಿಯಿಂದ ಮಾಡಲ್ಪಟ್ಟ ಹುಕುಮನಾಮೆಯ ವಿರುದ್ಧ ಜಿಲ್ಹಾ ಕೋರ್ಟಿಗೆ ಮತ್ತು ಯಾವುದೇ ಖಟ್ಲೆಯ ಸಂಬಂಧ ಆದ ಆಜ್ಞೆಯವಿರುದ್ಧ ಜಿಲ್ಹಾ ಮ್ಯಾಜಿಸ್ಟ್ರೇಟನಿಗೆ ಅಪೀಲು ಮಾಡಿಕೊಳ್ಳಬೇಕು.

(೨) ಇಂಥ ಅಪೀಲುಗಳನ್ನು ದಾಖಲ ಮಾಡುವವದರ ಸಲುವಾಗಿ ಇರುವ ಅವಧಿಯು ಪ್ರಸಂಗಾನುಸಾರ, ಹುಕುಮನಾಮೆಯ ಅಥವಾ ಆಜ್ಞೆಯ ತಾರೀಖಿನಿಂದ ೩೦ ದಿವಸಗಳದ್ದಿರುವದು.

**೭೯. ಹುಕುಮನಾಮೆಗಳು ಮತ್ತು ಆಜ್ಞೆಗಳು ಕೊನೆಯ ವಾಗಿರ ಬೇಕು.**

೭೭ ನೇ ೭೮ ನೇ ೮೭ ನೇ ಅಥವಾ ೮೭ [ಅ] ಕಲಮಿನನ್ವಯ ಯಾವ ದೊಂದು ಜಿಲ್ಹಾ ಕೋರ್ಟು ಅಥವಾ ಯಾವನೊಬ್ಬ ಜಿಲ್ಹಾ ಮ್ಯಾಜಿಸ್ಟ್ರೇಟನು ಮಾಡಿದ ಪ್ರತಿಯೊಂದು ಆಜ್ಞೆಯು ಕೊನೆಯ ದಾಗುವದು, ಮತ್ತು ಅದರ ಮೇಲೆ ಯಾವುದೇ ಅಪೀಲಾಗಲಿ, ಪುನರವಲೋಕನೆಯಾಗಲಿ ಅಥವಾ ಪುನರ್ವಿಚಾರಣೆಯಾಗಲಿ ನಡೆಯಲಾರದು.

# ವಿಭಾಗ ೮.

## ಅಮಲ ಬಜಾವಣೆ.

**೮೦. ಹುಕುಮನಾಮೆಯು ಇಡೇರಿಸಲ್ಪಟ್ಟ (ಫೇಡಾದ) ಅಥವಾ ಸರಿಪಡಿಸಲ್ಪಟ್ಟ ಸಂಗತಿಯನ್ನು ಬರೆದಿಡುವದು.**

ಹುಕುಮನಾಮೆ ಧಾರಣ ಮಾಡುವವನ ಅಥವಾ [ತೀರ್ಮಾನದ] ಋಣ ಕೋನ ಅರ್ಜಿಯ ಮೇಲಿಂದ ನ್ಯಾಯಪಂಚಾಯತವು ವಿಚಾರಣೆ ಮಾಡಿದ ನಂತರ, ಅದಕ್ಕೆ ಹುಕುಮನಾಮೆಯು ಸಂಪೂರ್ಣವಾಗಿ ಅಥವಾ ಅಂಶತಃ ಇಡೇರಿಸಲ್ಪಟ್ಟಿದೆ (ಫೇಡಾಗಿದೆ) ಅಥವಾ ಸರಿಪಡಿಸಲ್ಪಟ್ಟದೆ ಎಂದು ತೃಪ್ತಿ ಯಾದರೆ ಆ ನ್ಯಾಯಪಂಚಾಯತವು ಈ ಸಂಗತಿಯನ್ನು ಗೊತ್ತುಪಡಿಸಲ್ಪಟ್ಟ ರಜಿಸ್ಟರಿನಲ್ಲಿ ಬರೆದಿಡಬೇಕು.

**೮೧. ಕಲೆಕ್ಟರನ ಮುಖಾಂತರ ಅಮಲಬಜಾವಣೆ.**

(೧) ಹುಕುಮನಾಮೆಯ ತಾರೀಖಿನಿಂದ ಒಂದು ತಿಂಗಳ ಅವಧಿಯ ನಂತರ ಆ ಹುಕುಮನಾಮೆಯು ಸಂಪೂರ್ಣವಾಗಿ ಅಥವಾ ಅಂಶತಃ ಇಡೇರಿಸಲ್ಪಡದೆ ಅಥವಾ ಸರಿಪಡಿಸಲ್ಪಡದೆ ಇದ್ದರೆ, ಆ ಹುಕುಮನಾಮೆ ಯನ್ನು ಧಾರಣ ಮಾಡುವವನು ಆ ಹುಕುಮನಾಮೆಯ ತಾರೀಖಿನಿಂದ ಒಂದು ವರ್ಷದೊಳಗೆ, ನ್ಯಾಯ ಪಂಚಾಯತಿಗೆ ಅಮಲ ಬಜಾವಣೆಗಾಗಿ ಅರ್ಜಿ ಮಾಡಬಹುದು.

(೨) ಅಮಲ ಬಜಾವಣೆಯಬಗ್ಗೆ ಹೀಗೆ ಅರ್ಜಿ ಮಾಡಲ್ಪಟ್ಟನಂತರ, ಆ ಹುಕುಮನಾಮೆಯು ಸಂಪೂರ್ಣವಾಗಿ ಅಥವಾ ಅಂಶತಃ ಇಡೇರಿಸಲ್ಪಡದೆ ಅಥವಾ ಸರಿಪಡಿಸಲ್ಪಡದೆ ಉಳಿದಿದೆಯೆಂದು ಆ ನ್ಯಾಯಪಂಚಾಯತವು ಕಲೆಕ್ಟರನಿಗೆ ತಿಳಿಸಬೇಕು [ದಾಖಲೆ ಕೊಡಬೇಕು], ಮತ್ತು ಅಮಲ

ಬಜಾವಣಿಯ ಬಗ್ಗೆ ಮಾಡಲ್ಪಟ್ಟ ಅರ್ಜಿಯ ತಾರೀಖಿನಿಂದ ಒಂದು ವರ್ಷದೊಳಗಾಗಿ, ಆ ನ್ಯಾಯಪಂಚಾಯತವು ಕಲೆಕ್ಟರನಿಗೆ ಹೀಗೆ ತಿಳಿಸಿದ್ದರೆ, ಅವನು —

ಅ] ಹುಕುಮನಾಮೆಯು ಹಣದಬಗ್ಗೆ ಇದ್ದರೆ, ಅದನ್ನು ಭೂಮಿಯ ಮಹಸೂಲಿನ ಬಾಕಿಯೆಂದು ತಿಳಿದು ವಸೂಲ ಮಾಡಲು ಕೆಲಸ ನಡಿಸಬೇಕು.

ಬ] ಹುಕುಮನಾಮೆಯು ಯಾವದೊಂದು ವಿಶಿಷ್ಟ ಜಂಗಮ ಆಸ್ತಿಯ ವಿಷಯಕ್ಕೆ ಇದ್ದರೆ, ಆ ಹುಕುಮನಾಮೆಯು ದಿವಾಣಿ ಕೋರ್ಟಿನ ಹುಕುಮನಾಮೆ ಇದ್ದಂತೆಯೇ ಎಂದು ತಿಳಿದು ಅದರ ಅಮಲ ಬಜಾವಣಿ ಮಾಡಬೇಕು, ಮತ್ತು ಹೀಗೆ ಮಾಡುವಾಗ ಅವನು ದಿವಾಣಿಕೋರ್ಟಿನ ಎಲ್ಲ ಅಧಿಕಾರಗಳನ್ನು ಉಪಯೋಗಿಸಬಹುದು.

**೮೨. ಕಲೆಕ್ಟರನ ಮುಖಾಂತರ ಕಂತಿನ ಹುಕುಮನಾಮೆಯ ಅಮಲ ಬಜಾವಣಿ.**

(೧) ನ್ಯಾಯಪಂಚಾಯತವು ೭೬ ನೇ ಕಲಮಿನನ್ವಯ ಮಾಡಿದ ಹುಕುಮನಾಮೆಯ ಹಣದ ಯಾವುದೇ ಕಂತನ್ನು ಕೊಡುವಬಗ್ಗೆ ನೇಮಿಸಲ್ಪಟ್ಟ ತಾರೀಖಿನಿಂದ ಒಂದು ತಿಂಗಳ ಅವಧಿಯನಂತರ ಯಾವುದೊಂದು ಕಂತಿನ ಅಥವಾ ಅದರ ಭಾಗವು ಕೊಡಲ್ಪಡದೆ ಉಳಿದರೆ, ಆ ಹುಕುಮನಾಮೆ ಧಾರಣ ಮಾಡುವವನು, ಅದು ಕೊಡಲ್ಪಡಬೇಕಾದ ತಾರೀಖಿನಿಂದ ಒಂದು ವರ್ಷದೊಳಗಾಗಿ ಅಮಲ ಬಜಾವಣಿಯ ಬಗ್ಗೆ ನ್ಯಾಯಪಂಚಾಯತಿಗೆ ಅರ್ಜಿ ಮಾಡಬಹುದು.

(೨) ಅಮಲ ಬಜಾವಣಿಯ ಬಗ್ಗೆ ಹೀಗೆ ಅರ್ಜಿ ಮಾಡಲ್ಪಟ್ಟ ಮೇಲೆ, ಆ ಕಂತು ಅಥವಾ ಅದರ ಭಾಗವು ಇನ್ನೂ ಕೊಡಲ್ಪಡದೆ ಉಳಿದಿರುವದೆಂದು ಆ ನ್ಯಾಯಪಂಚಾಯತವು ಕಲೆಕ್ಟರನಿಗೆ ತಿಳಿಸಬೇಕು [ದಾಖಲ ಕೊಡಬೇಕು] ಮತ್ತು ಅಮಲ ಬಜಾವಣಿಯ ಬಗ್ಗೆ ಮಾಡಲ್ಪಟ್ಟ ಅರ್ಜಿಯ ತಾರೀಖಿನಿಂದ ಒಂದು ವರ್ಷ ದೊಳಗಾಗಿ ಆ ನ್ಯಾಯಪಂಚಾಯತವು

ಕಲೆಕ್ಟರನಿಗೆ ಹೀಗೆ ತಿಳಿಸಿದ್ದರೆ, ಅವನು ಹೀಗೆ ಕೊಡಲ್ಪಡದೆ ಉಳಿದ ಕಂತಿನ ರಕಮನ್ನು, ಅದು ಭೂಮಿಯ ಮಹಸೂಲಿನ ಬಾಕಿ ಎಂದು ತಿಳಿದು ವಸೂಲ ಮಾಡಲಿಕ್ಕೆ ಕೆಲಸ ನಡಿಸಬೇಕು.

**೮೩. ತಿಳಿಸಿದನಂತರ ಹುಕುಮ ನಾಮೆಯನ್ನು ಅಥವಾ ಕಂತನ್ನು ಸಲ್ಲಿಸುವದು.**

೮೧ನೇ ಅಥವಾ ೮೨ನೇ ಕಲಮಿನನ್ವಯ ಕಲೆಕ್ಟರನಿಗೆ ತಿಳಿಸಿದನಂತರ ಆದರೆ ಆ ಹುಕುಮನಾಮೆಯ ಅಮಲ ಬಜಾವಣಿಯು ಕಲೆಕ್ಟರನ ಮುಖಾಂತರ ಮಾಡಲ್ಪಡುವ ಮೊದಲು, ಆ ಹುಕುಮನಾಮೆಯು ಇಡೇರಿಸಲ್ಪಟ್ಟು ಅಥವಾ ಕಂತು ಕೊಡಲ್ಪಟ್ಟು ಅದು ೮೦ನೇ ಕಲಮಿನನ್ವಯ ನೊಂದಿಸಲ್ಪಟ್ಟರೆ, ನ್ಯಾಯಪಂಚಾಯತವು ಇಂಥ ಇಡೇರಿಸಲ್ಪಟ್ಟದ್ದರ ಅಥವಾ ಕೊಡಲ್ಪಟ್ಟದ್ದರ ದಾಖಲೆಯನ್ನು ಕೂಡಲೆ ಕಲೆಕ್ಟರನಿಗೆ ಕೊಡಬೇಕು, ಮತ್ತು ಕಲೆಕ್ಟರನು ಆ ನಂತರ ಅಮಲ ಬಜಾವಣಿಯ ಕಾರ್ಯವನ್ನು ನಿಲ್ಲಿಸಬೇಕು. ಕಲೆಕ್ಟರನ ಮುಖಾಂತರ ಅಮಲ ಬಜಾವಣಿಯಿಂದ ವಸೂಲಾದ ಹಣದ ಎಲ್ಲ ರಕಮುಗಳನ್ನು ಹುಕುಮನಾಮೆಯು ಇಡೇರಿಸಲ್ಪಟ್ಟನಂತರ, ಋಣಕೋನಿಗೆ ತಿರುಗಿ ಕೊಡಬೇಕು.

**೮೪. ದಂಡ ಮತ್ತು ಪರಿಹಾರಧನವನ್ನು ಯಾವಾಗ ಕೊಡಬೇಕು.**

(೧) ಪರಿಹಾರಧನವೆಂದು ಕೊಡುವ ಬಗ್ಗೆ ಆಜ್ಞೆ ಮಾಡಲ್ಪಟ್ಟ ಪ್ರತಿಯೊಂದು ರಕಮು ಮತ್ತು ೪೫, ೪೬, ೪೭ ಮತ್ತು ೪೮ನೇ ಕಲಮುಗಳನ್ವಯ ನ್ಯಾಯಪಂಚಾಯತಿಯಿಂದ ವಿಧಿಸಲ್ಪಟ್ಟ ಪ್ರತಿಯೊಂದು ದಂಡವು, ಕೂಡಲೆ ಕೊಡಲ್ಪಡತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ನ್ಯಾಯಪಂಚಾಯತವು, ತಾನು ಪರಿಹಾರಧನವನ್ನು ಅಥವಾ ದಂಡವನ್ನು ಕೊಡುವದಕ್ಕೆ ಆಜ್ಞೆಮಾಡಿದ ಯಾವನೇ ಮನುಷ್ಯನಿಗೆ ಅದನ್ನು ೧೫ ದಿವಸಗಳಿಗಿಂತ ಹೆಚ್ಚಲ್ಲದ ಯಾವ ಅವಧಿಯು ಅದಕ್ಕೆ ಸರಿದೋರುವದೋ ಅಂಥ ಅವಧಿಯಲ್ಲಿ ಮತ್ತು ಜಾಮೀನಿನ ಸಲುವಾಗಿ ಯಾವ ಕರಾರುಗಳನ್ನು ಹಾಕುವದು ಯೋಗ್ಯವೆಂದು

ಆ ನ್ಯಾಯಪಂಚಾಯತಿಗೆ ತೋರುವದೋ ಅಂಥ ಕರಾರುಗಳಮೇಲೆ, ಕೊಡಲಿಕ್ಕೆ ಅಪ್ಪಣೆ ಕೊಡಬಹುದು.

(೨) ವಸೂಲ ಮಾಡುವ ವಿಧಾನ.

ದಂಡದ ಹಣವು ಅಥವಾ ಪರಿಹಾರಧನವು ಆಜ್ಞೆಯಾದ ತಾರೀಖಿನಿಂದ ೧೫ ದಿವಸಗಳ ವರಿಗೆ ಕೊಡಲ್ಪಡದೆ ಉಳಿದರೆ, ಆ ನ್ಯಾಯಪಂಚಾಯತವು ತಪ್ಪು ಮಾಡಿದವನ ಜಂಗಮ ಆಸ್ತಿಯನ್ನು ಜಪ್ತಮಾಡಿ ಮತ್ತು ಮಾರಾಟ ಮಾಡಿ ವಸೂಲ ಮಾಡಬೇಕು.

(೩) ದಂಡದ ಹಣವು ಅಥವಾ ಪರಿಹಾರಧನವು ಪೂರ್ಣವಾಗಿ ವಸೂಲ ಆಗದಿದ್ದರೆ ನ್ಯಾಯಪಂಚಾಯತವು ಕಲೆಕ್ಟರನಿಗೆ ಅದರಂತೆ ತಿಳಿಸಬೇಕು [ದಾಖಲೆ ಕೊಡಬೇಕು] ಮತ್ತು ಆ ಹಣವು ನ್ಯಾಯಪಂಚಾಯತಿಯಿಂದ ೨ನೇ ಉಪಕಲಮಿನನ್ವಯ ವಸೂಲ ಮಾಡಲ್ಪಡಲಿಕ್ಕೆ ಪಾತ್ರವಾದ ತಾರೀಖಿನಿಂದ ಒಂದು ವರ್ಷದ ಅವಧಿಯಲ್ಲಿ ನ್ಯಾಯಪಂಚಾಯತವು ಕಲೆಕ್ಟರನಿಗೆ ತಿಳಿಸಿದ್ದರೆ, ಅವನು, ಹೀಗೆ ತಿಳಿಸಿದನಂತರ ಅದನ್ನು ಭೂಮಿಯ ಮಹಸೂಲಿನ ಬಾಕಿಯೆಂದು ತಿಳಿದು ವಸೂಲ ಮಾಡಲಿಕ್ಕೆ ಕೆಲಸ ನಡಿಸಬೇಕು, ಮತ್ತು ಹೀಗೆ ವಸೂಲಾದ ರಕಮನ್ನು ನ್ಯಾಯಪಂಚಾಯತಿಗೆ ಕಳುಹಿಸಿ ಕೊಡಬೇಕು.

**೮೫. ದಂಡ ಅಥವಾ ಪರಿಹಾರಧನ ವಸೂಲಾದ ಬಗ್ಗೆ ನಮೂದಿಸಲ್ಪಡಬೇಕು.**

೮೪ನೇ ಕಲಮಿನಲ್ಲಿ ಹೇಳಲ್ಪಟ್ಟ ದಂಡದ ರಕಮು ಅಥವಾ ಪರಿಹಾರಧನವು ನ್ಯಾಯಪಂಚಾಯತಿಯಿಂದ ಪ್ರತ್ಯಕ್ಷವಾಗಿ ಅಥವಾ ಕಲೆಕ್ಟರನ ಮುಖಾಂತರ ವಸೂಲ ಮಾಡಲ್ಪಟ್ಟ ಕೂಡಲೇ, ಹೀಗೆ ವಸೂಲ ಮಾಡಲ್ಪಟ್ಟ ಹಣವು ಗೊತ್ತುಪಡಿಸಲ್ಪಟ್ಟ ರಜಿಸ್ಟರದಲ್ಲಿ ಬರೆಯಲ್ಪಡಬೇಕು.

**೮೬. ಪರಿಹಾರಧನವನ್ನು ಗ್ರಾಮದ ಫಂಡಿನೊಳಗಿಂದ ಕೊಡುವದು.**

ವೆಚ್ಚ ಅಥವಾ ಪರಿಹಾರ ಧನವೆಂದು ನ್ಯಾಯಪಂಚಾಯತಿಯಿಂದ ೪೭ನೇ ಅಥವಾ ೪೮ ನೇ ಕಲಮಿನನ್ವಯ ಆಜ್ಞೆಮಾಡಲ್ಪಟ್ಟ ಯಾವುದೇ

ಹಣವು ೪೫ ಮತ್ತು ೪೬ನೇ ಕಲಮುಗಳನ್ವಯ ವಸೂಲಾದ ರಕಮಿನೊಳಗಿಂದ ಕೊಡಲ್ಪಡಬೇಕು.

**೮೭. ಜಿಲ್ಹಾ ಕೋರ್ಟು ಅಥವಾ ಜಿಲ್ಹಾ ಮ್ಯಾಜಿಸ್ಟ್ರೇಟನು ಪ್ರಕರ್ಣಗಳನ್ನು ರದ್ದು ಮಾಡಬಹುದು.**

(೧) ಯಾವುದೇ ದಾವೆಯಲ್ಲಿ ಜಿಲ್ಹಾಕೋರ್ಟು ಮತ್ತು ಯಾವುದೇ ಖಟ್ಲೆಯಲ್ಲಿ ಜಿಲ್ಹಾ ಮ್ಯಾಜಿಸ್ಟ್ರೇಟನು ಯಾವುದೇ ಕಾಲಕ್ಕೆ ನಷ್ಟಹೊಂದಿದ ಪಕ್ಷಕಾರನು ಅರ್ಜಿ ಮಾಡಿದಮೇಲೆ ಅಥವಾ ಇತರ ರೀತಿಯಿಂದ ಅಥವಾ ನ್ಯಾಯಪಂಚಾಯತವು ೭೭ನೇ ಕಲಮಿನನ್ವಯ ಬರೆದು ಕಳುಹಿಸಿದ್ದರ ಮೇಲಿಂದ ಲೇಖಿ ಆಜ್ಞೆಯ ಮೂಲಕ, ಯಾವುದೇ ಅವಸ್ಥೆಯಲ್ಲಿ, ನ್ಯಾಯ ಪಂಚಾಯತಿಯು ನಡೆಸಿದ ಯಾವುದೇ ಪ್ರಕರ್ಣವನ್ನು ತೆಗೆದುಹಾಕಬಹುದು, ಅಥವಾ ನ್ಯಾಯಪಂಚಾಯತಿಯು ಮಾಡಿದ ಯಾವುದೇ ಹುಕುಮುನಾಮೆಯನ್ನು ಅಥವಾ ಆಜ್ಞೆಯನ್ನು ರದ್ದುಮಾಡಬಹುದು.

(೨) ಜಿಲ್ಹಾ ಕೋರ್ಟು ಯಾವುದೇ ದಾವೆಯ ಸಂಬಂಧ ೧ನೇ ಉಪಕಲಮಿನನ್ವಯ ಯಾವದೊಂದು ಆಜ್ಞೆಯನ್ನು ಮಾಡಿದಾಗ್ಗೆ ವಾದಿಯು ಅದೇ ನ್ಯಾಯಾಶ್ರಯದ ಸಲುವಾಗಿ ದಿವಾಣಿ ಕೋರ್ಟಿನಲ್ಲಿ ಹೊಸದೆಂದು ದಾವೆಯನ್ನು ತರಬಹುದು, ಮತ್ತು ಆ ಹೊಸ ದಾವೆಗಾಗಿ ಕಾಲಾವಧಿಯ ಲೆಖ್ಖಮಾಡುವಾಗ್ಗೆ, ನ್ಯಾಯಪಂಚಾಯತಿಯ ಮುಂದೆ ದಾವೆಮಾಡಿದ ತಾರೀಖಿನಿಂದ ಇಂಥ ಆಜ್ಞೆಯ ತಾರೀಖಿನ ವರೆಗಿನ ಅವಧಿಯನ್ನು ಬಿಟ್ಟು ಬಿಡಬೇಕು.

(೩) ಜಿಲ್ಹಾ ಮ್ಯಾಜಿಸ್ಟ್ರೇಟನು ಯಾವುದೇ ಖಟ್ಲೆಯ ಸಂಬಂಧ ೧ನೇ ಉಪಕಲಮಿನನ್ವಯ ಯಾವದೊಂದು ಆಜ್ಞೆಯನ್ನು ಮಾಡಿದಾಗ್ಗೆ ಆ ಬಗ್ಗೆ ಅಧಿಕಾರವುಳ್ಳ ಮ್ಯಾಜಿಸ್ಟ್ರೇಟನ ಕೋರ್ಟಿನಲ್ಲಿ ಅದೇ ಅಪರಾಧದ ಬಗ್ಗೆ ಕೆಲಸ ನಡಿಸಬಹುದು.

**೮೭ ಅ. ಜಿಲ್ಹಾ ಕೋರ್ಟು ಅಥವಾ ಜಿಲ್ಹಾ ಮ್ಯಾಜಿಸ್ಟ್ರೇಟನು ದಾವೆಯನ್ನು ಅಥವಾ ಖಟ್ಲೆಯನ್ನು ವರ್ಗಾಯಿಸುವದು.**

(೧) ಯಾವುದೇ ದಾವೆಯನ್ನು ಜಿಲ್ಹಾ ಕೋರ್ಟು ಮತ್ತು ಯಾವುದೇ ಖಟ್ಲೆಯನ್ನು ಜಿಲ್ಹಾ ಮ್ಯಾಜಿಸ್ಟ್ರೇಟನು ಯಾವುದೇ ಕಾಲಕ್ಕೆ ನಷ್ಟಹೊಂದಿದ ಪಕ್ಷಕಾರನ ಅರ್ಜಿಯ ಮೇಲಿಂದ ಅಥವಾ ಇತರ ರೀತಿಯಿಂದ ಲೇಖಿ ಆಜ್ಞೆಯ ಮೂಲಕ ಪ್ರಸಂಗಾನುಸಾರ, ಅದರ ವಿಚಾರಣೆಮಾಡಲು ಅಧಿಕಾರವುಳ್ಳ ಯಾವದೊಂದು ದಿವಾಣಿ ಅಥವಾ ಫೌಜದಾರಿ ಕೋರ್ಟಿಗೆ ವರ್ಗಾಯಿಸಬಹುದು.

(೨) ಇಂಥ ದಾವೆಯು ಅಥವಾ ಖಟ್ಲೆಯು ವರ್ಗಾಯಿಸಲ್ಪಟ್ಟ ನಂತರ ಯಾವ ಕೋರ್ಟಿಗೆ ಅದು ವರ್ಗಾಯಿಸಲ್ಪಟ್ಟಿದೆಯೋ ಆ ಕೋರ್ಟು, ಇಂಥ ದಾವೆಯು ಅಥವಾ ಖಟ್ಲೆಯು ತನ್ನ ಮುಂದೆ ದಾಖಲ ಮಾಡಲ್ಪಟ್ಟಿದೆ ಯೆಂದು ತಿಳಿದು, ಅಂಥ ದಾವೆಯ ಅಥವಾ ಖಟ್ಲೆಯ ವಿಚಾರಣೆಯನ್ನು ಹೊಸದಾಗಿ ಮಾಡಬೇಕು.

**೮೭ ಬ. ಜಿಲ್ಹಾ ಕೋರ್ಟಿನ ಮತ್ತು ಜಿಲ್ಹಾ ಮ್ಯಾಜಿಸ್ಟ್ರೇಟನ ಮುಂದಿರುವ ಪ್ರಕರ್ಣಗಳಲ್ಲಿ ಕೆಲಸ ನಡಿಸುವ ರೀತಿ.**

ಈ ಕಾನೂನಿನನ್ವಯ ಯಾವತ್ತೂ ಪ್ರಕರ್ಣಗಳಿಗೆ ಸಂಬಂಧಪಡುವ ಈ ಕಾನೂನಿನ ಠರಾವುಗಳಿಗೆ ಅನುಸರಿಸಿ, ಜಿಲ್ಹಾ ಕೋರ್ಟುಗಳಿಗೆ ಮತ್ತು ಜಿಲ್ಹಾ ಮ್ಯಾಜಿಸ್ಟ್ರೇಟರಿಗೆ ತಮ್ಮ ಸಾಮಾನ್ಯ ಅಧಿಕಾರ ಕ್ಷೇತ್ರದಲ್ಲಿ, ತಮ್ಮ ಆಧೀನದಲ್ಲಿರುವ ಕೋರ್ಟುಗಳ ಹುಕುಮನಾಮೆಗಳ ಅಥವಾ ಆಜ್ಞೆಗಳ ಸಂಬಂಧದ ಪ್ರಕರ್ಣಗಳ ವಿಷಯದಲ್ಲಿ, ಅನುಕ್ರಮವಾಗಿ, ಯಾವ ಅಧಿಕಾರ ಗಳಿರುವವೋ ಅವೇ ಅಧಿಕಾರಿಗಳಿರತಕ್ಕದ್ದು ಮತ್ತು ಅವುಗಳು ಅಥವಾ ಅವರು ಅದೇ ಕೆಲಸ ನಡಿಸುವ, ರೀತಿಯನ್ನು ಅನುಸರಿಸತಕ್ಕದ್ದು.

**೮೮. ಹುಕುಮನಾಮೆಯ ಅಮಲ ಬಜಾವಣಿಯಲ್ಲಿ ಬಂಧಿಸುವದಕ್ಕೆ ಮತ್ತು ಸೆರೆಯಲ್ಲಿಡುವದಕ್ಕೆ ಪ್ರತಿಬಂಧ.**

ಈ ಕಾನೂನಿನನ್ವಯ ಹುಕುಮನಾಮೆಯ ಅಮಲ ಬಜಾವಣಿಯಲ್ಲಿ ಯಾವನೊಬ್ಬ ಮನುಷ್ಯನನ್ನು ಬಂಧಿಸಬಾರದು ಅಥವಾ ಸೆರೆಯಲ್ಲಿಡಬಾರದು.

## ವಿಭಾಗ ೮ ಅ.

**೮೮ ಅ. ಬೃಹನ್ ಮುಂಬಯಿಯಲ್ಲಿಯ ನ್ಯಾಯಪಂಚಾಯತ ಗಳನ್ನು ರದ್ದು ಪಡಿಸುವದು.**

ಈ ಕಾನೂನಿನಲ್ಲಿ ಯಾವುದೇ ವಿಷಯವಿದ್ದರೂ ೩೭ನೇ ಮತ್ತು ೫೭ನೇ ಕಲಮುಗಳು ಬೃಹನ್ ಮುಂಬಯಿಯಲ್ಲಿಯ ಯಾವುದೇ ಪಂಚಾಯತಿಗೆ ಅನ್ವಯಿಸುವದಿಲ್ಲ.

**೮೮ ಬ. ಚಾಲೂ ಇದ್ದ ಪ್ರಕರ್ಣಗಳು.**

(೧) ೧೯೪೬ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತ [ತಿದ್ದುಪಡಿ] ಕಾನೂನು ಅಮಲಿನಲ್ಲಿ ಬರುವ ತಾರೀಖಿಗಿಂತ ಮೊದಲು ಬೃಹನ್ ಮುಂಬಯಿಯಲ್ಲಿಯ ಗ್ರಾಮದ ಸಂಬಂಧ ರಚಿತವಾದ ಮತ್ತು ಈ ಕಾನೂನಿನನ್ವಯ ನ್ಯಾಯದಾನದ ಅಧಿಕಾರವನ್ನು ಉಪಯೋಗಿಸುವ [ನಡಿಸುವ] ನ್ಯಾಯಪಂಚಾಯತವು ಅಂಥ ತಾರೀಖಿನ ದಿವಸ ವಿಸರ್ಜಿಸಲ್ಪಡುವದು.

(೨) ೧ನೇ ಉಪಕಲಮಿನನ್ವಯ ನ್ಯಾಯಪಂಚಾಯತವು ವಿಸರ್ಜಿಸಲ್ಪಟ್ಟನಂತರ, ೧೦೬ನೇ ಕಲಮಿನ ೨ನೇ ಉಪಕಲಮಿನ ೧ನೇ ಮತ್ತು ೨ನೇ ರಕಮುಗಳು, ೨ನೇ ರಕಮಿನಲ್ಲಿ ದಿವಾಣಿಕೋರ್ಟಿನ ನ್ಯಾಯಾಧೀಶನ ಅಥವಾ ಮ್ಯಾಜಿಸ್ಟ್ರೇಟನ ಕೋರ್ಟಿನ ಸಂಬಂಧದಲ್ಲಿ ಮಾಡಲ್ಪಟ್ಟ ಉಲ್ಲೇಖವು ಬೃಹನ್ ಮುಂಬಯಿಯಲ್ಲಿಯ ಯೋಗ್ಯವಾದ ದಿವಾಣಿಕೋರ್ಟು ಅಥವಾ ಮ್ಯಾಜಿಸ್ಟ್ರೇಟನ ಸಂಬಂಧ ಮಾಡಲ್ಪಟ್ಟ ಉಲ್ಲೇಖವೆಂದು ಗ್ರಹಿಸಬೇಕೆಂಬ ಬದಲಾವಣೆಯೊಂದಿಗೆ, ಅನ್ವಯಿಸುವವು.

**೮೮ ಕ. ಅಪೀಲುಗಳು.**

೮೮ ಬ ಕಲಮಿನ ೧ನೇ ಉಪಕಲಮಿನನ್ವಯ ವಿಸರ್ಜನೆಯಾಗುವ ಪೂರ್ವಥಲ್ಲಿ ಇಂಥ ನ್ಯಾಯಪಂಚಾಯತವು ಕೊಟ್ಟ ಹುಕುಮನಾಮೆಯು ಅಥವಾ ಆಜ್ಞೆಯ ವಿರುದ್ಧ ಅಪೀಲನ್ನು ಪ್ರಸಂಗಾನುಸಾರ ಹುಕುಮನಾಮೆ ಅಥವಾ ಆಜ್ಞೆಯಾದ ತಾರೀಖಿನಿಂದ ೩೦ ದಿವಸಗಳೊಳಗಾಗಿ ಪ್ರಾಂತಿಕ ಸರಕಾರದವರು ಆಜ್ಞೆ ಮಾಡಬಹುದಾದ ಅಧಿಕಾರಿಯಕಡೆಗೆ ಮಾಡಬೇಕು. ಅಪೀಲಿನಲ್ಲಿ ಆದ ಪ್ರತಿಯೊಂದು ಆಜ್ಞೆಯು ಕೊನೆಯ ದಾಗುವದು ಮತ್ತು ಅದು ಯಾವುದೇ ಅಪೀಲು, ಪುನರವಲೋಕನೆ ಅಥವಾ ಪುನರ್ವಿಚಾರಣೆಗೆ ಒಳಗಾಗುವದಿಲ್ಲ.

ಆದರೆ ಗೊತ್ತುಪಡಿಸುವದೇನಂದರೆ, ೧೯೪೬ನೇ ಇಸ್ವಿಯ ಮುಂಬಯಿ ಗ್ರಾಮಪಂಚಾಯತ [ತಿದ್ದುಪಡಿ] ಕಾನೂನು ಅಮಲಿನಲ್ಲಿ ಬರುವ ದಿವಸ ಚಾಲೂಇದ್ದ ಯಾವುದೇ ಅಪೀಲನ್ನು ಈ ಕಾನೂನು ಪಾಸಾಗಿರುವದಿಲ್ಲವೆಂದು ಗ್ರಹಿಸಿ ನಿಕಾಲೆ ಮಾಡಬೇಕು.

# ವಿಭಾಗ ೬.

## ಕರ ಕೂಡ್ರಿಸುವದು ಮತ್ತು ಬರತಕ್ಕ ರಕಮುಗಳನ್ನು ವಸೂಲ ಮಾಡುವದು.

**೪೯. ಪಂಚಾಯತಿಯು ಕರ ಮತ್ತು ಫೀಯನ್ನು ಕೂಡ್ರಿಸುವದು.**

(೧) ಪ್ರತಿಯೊಂದು ಪಂಚಾಯತು ಗ್ರಾಮದ ಹದ್ದಿಯಲ್ಲಿರುವ ಒಕ್ಕಲತನದ ತೆರಿಗೆ ಕೊಡಲಿಕ್ಕೆ ಪಾತ್ರವಿರುವ ಅಥವಾ ಇರದಿರುವ, ಹೊಲಗಳಲ್ಲಿಯ ಕಟ್ಟಡಗಳನ್ನೊಳಗೊಂಡು ಮನೆಗಳ, ಮತ್ತು ಒಕ್ಕಲತನದ ತೆರಿಗೆ ಕೊಡಲು ಪಾತ್ರವಿಲ್ಲದ ಭೂಮಿಗಳ ಒಡೆಯರ ಅಥವಾ ಭೋಗವಟಿ ಮಾಡುವವರ ಮೇಲೆ, ಠರಾಯಿಸಲ್ಪಡಬಹುದಾದ ರೀತಿಯಲ್ಲಿ ಮತ್ತು ದರಗಳಂತೆ ಮತ್ತು ಅಪವಾದಗಳಿಗೆ ಒಳಪಟ್ಟು ಕರವನ್ನು ಹಾಕಬೇಕು.

(೧ ಅ.) ಯಾವದೊಂದು ಮನೆಯ ಅಥವಾ ಭೂಮಿಯ ಒಡೆಯನು ಗ್ರಾಮವನ್ನು ಬಿಟ್ಟು ಹೋಗಿದ್ದರೆ ಅಥವಾ ಇತರ ರೀತಿಯಿಂದ ಅವನ ಪತ್ತೆಯಾಗದಿದ್ದರೆ, ಇಂಥ ಮನೆ ಅಥವಾ ಭೂಮಿಯು ಯಾವನ ಸ್ವಾಧೀನ ವಾಗಿದೆಯೋ ಅಂಥ ಯಾವನೇ ಮನುಷ್ಯನು ೧ನೇ ಉಪಕಲಮಿನ್ವಯ ಅಂಥ ಒಡೆಯನಿಂದ ವಸೂಲ ಮಾಡಲ್ಪಡುವ, ಕರವನ್ನು ಕೊಡಲು ಪಾತ್ರನಾಗುವನು.

(೧ ಬ) ೧ನೇ ಉಪಕಲಮಿನಲ್ಲಿ ನಿರ್ದಿಷ್ಟಪಡಿಸಿದ ಕರವನ್ನು ಹಾಕುವದರ ಸಲುವಾಗಿ ಮಾಡಲ್ಪಟ್ಟ ನಿಯಮಗಳಲ್ಲಿ ಇಂಥ ಕರವನ್ನು ನಗದಾಗಿ ಅಥವಾ ಕೂಲಿಯನ್ನುಮಾಡಿ ಸಲ್ಲಿಸಬಹುದೆಂದು ವ್ಯವಸ್ಥೆಮಾಡಬಹುದು.

(೨) ಠರಾಯಿಸಲ್ಪಡಬಹುದಾದ ದರದಿಂದ ಮತ್ತು ಅಪವಾದಗಳಿಗೆ ಒಳಪಟ್ಟು ಈ ಕೆಳಗಿನ ಯಾವತ್ತೂ ಅಥವಾ ಯಾವವಾದರೂ ಕರಗಳನ್ನು

ಅಥವಾ ಫೀಗಳನ್ನು ಕೂಡ್ರಿಸಲಿಕ್ಕೆ ಯಾವದೊಂದು ಪಂಚಾಯತಕ್ಕೆ ಅಧಿಕಾರವಿದೆ.

ಅವು ಯಾವವೆಂದರೆ—

(೧) [ಇದನ್ನು ೧೯೫೩ನೇ ಇಸ್ವಿಯ ೧೮ನೇ ಕಾನೂನಿನಿಂದ ತೆಗೆದು ಹಾಕಲಾಗಿದೆ].

(೨) ಯಾತ್ರಿಕರ ಮೇಲಿನ ಕರ.

(೩) ಜಾತ್ರೆ, ಉತ್ಸವ ಮತ್ತು ಮನರಂಜನೆಗಳ ಮೇಲೆ ಕರ.

(೪) ವಸ್ತುಗಳ ಮಾರಾಟಗಳ ಮೇಲಿನ ಕರ.

(೫) ಆಕ್ಟ್ರಾಯ.

(೬) ವಿವಾಹ, ದತ್ತಕ ಮತ್ತು ಮೇಜವಾನಿ (ಸುಖಭೋಜನ) ಗಳ ಮೇಲಿನ ಕರ.

(೬ ಅ) ಅಂಗಡಿ ಮತ್ತು ಉಪಹಾರಗೃಹಗಳ ಮೇಲಿನ ಕರ.

(೬ ಬ) ಗೃಹಕೃತ್ಯದ ಅಥವಾ ಒಕ್ಕಲತನದ ಕಾರಣದ ವ್ಯತಿರಿಕ್ತ ಇತರ ಯಾವುದೇ ಕಾರಣಕ್ಕಾಗಿ ಯಾವಸ್ಥಳದಲ್ಲಿ ಉಗಿ, ಎಣ್ಣಿ, ಅಥವಾ ವಿದ್ಯುಚ್ಛಕ್ತಿಯಿಂದ ಯಂತ್ರವು ನಡೆಸಲ್ಪಡುವದೋ ಅಂಥ ಸ್ಥಳದ ಮೇಲಿನ ಕರ.

(೬ ಕ) ಪೇಟೆಗಳ ಮತ್ತು ಸಂತೆಗಳ ಮೇಲಿನ ಫೀ.

(೬ ಡ) ಚಕ್ಕಡಿಗಳ ನಿಲ್ದಾಣಗಳ ಮೇಲಿನ ಫೀ.

(೬ ಈ) ತನ್ನ ಸ್ವಾಧೀನದಲ್ಲಿದ್ದ ಭಾವಿಗಳಿಂದ ಇಲ್ಲವೆ ಕೆರೆಗಳಿಂದ ಗೃಹೋಪಯೋಗದಸಲುವಾಗಿ ಬಿಟ್ಟು ಉಳಿದ ಕಾರಣಗಳಿಗಾಗಿ ನೀರಿನ ಪೂರೈಕೆ ಮಾಡಿದ ಬಗ್ಗೆ ಫೀ.

(೭) ೧೯೩೫ನೇ ಇಸ್ವಿಯ ಭಾರತ ಸರಕಾರದ ಕಾನೂನಿನನ್ವಯ ಪ್ರಾಂತಿಕ ಕಾಯಿದೆ ಮಂಡಳವು ಪ್ರಾಂತದಲ್ಲಿ ಹೇರುವ, ಮತ್ತು ಜಿಲ್ಹಾ ಲೋಕಲ್ ಬೋರ್ಡಿನಿಂದ ಮಂಜೂರಾದ (೧೯೩೫ನೇ ಇಸ್ವಿಯ ಮುಂಬಯಿ

ಮೋಟರ ವಾಹನಗಳ ಕರದ ವಿಷಯದ ಕಾನೂನಿನ ೧೪ನೇ ಕಲಮಿನಿಂದ ರಚಾಯಿಸಲ್ಪಟ್ಟದ್ದನ್ನು ಬಿಟ್ಟು, ಮೋಟರ ವಾಹನಗಳ ಅಥವಾ ಟ್ರೇಲರಗಳ ಮೇಲಿನ ಜಕಾತಿಯಲ್ಲದ] ಇತರ ಯಾವುದೇ ಕರ.

(೨ ಅ) ೨ನೇ ಉಪಕಲಮಿನಲ್ಲಿ ಏನೇ ವಿಷಯವಿದ್ದರೂ, ಪ್ರತಿ ಯೊಂದು ಪಂಚಾಯತವು ತನಗೋಸ್ಕರ ರಚಾಯಿಸಲ್ಪಡಬಹುದಾದ, ೨ನೇ ಉಪಕಲಮಿನಲ್ಲಿ ನಿರ್ದಿಷ್ಟಪಡಿಸಿದ ಕರಗಳಲ್ಲಿ ಅಥವಾ ಫೀಗಳಲ್ಲಿ ಯಾವುದೇ ಒಂದು ಕರವನ್ನು ಕೂಡ್ರಿಸಬೇಕು.

(೩) ಇಂಥ ಯಾವುದೇ ಕರದ ಅಥವಾ ಫೀಯ ಆಕರಣೆಯಿಂದ, ಕೂಡ್ರಿಸುವಿಕೆಯಿಂದ ಅಥವಾ ಹೇರುವಿಕೆಯಿಂದ ನಷ್ಟಹೊಂದಿದ ಯಾವನೇ ಮನುಷ್ಯನು ಜಿಲ್ಲಾ ಲೋಕಲ್ ಬೋರ್ಡಿನ ಸ್ಥಾಯಿ ಸಮಿತಿಗೆ ಅಪೀಲು ಮಾಡಿ ಕೊಳ್ಳಬಹುದು. ಈ ವಿಷಯದಲ್ಲಿ, ಲೋಕಲ್ ಬೋರ್ಡಿನ ಸ್ಥಾಯಿ ಸಮಿತಿಯು ಕೊಟ್ಟ ನಿರ್ಣಯವು ಕೊನೆಯದಾಗುವದು.

(೪) ಪ್ರಾಂತಿಕ ಸರಕಾರದವರು ಯಾವುದೇ ಕರ ಅಥವಾ ಫೀ ಕೂಡ್ರಿಸುವದನ್ನು ಅಥವಾ ಹೇರುವದನ್ನು ತಡೆಹಿಡಿಯಬಹುದು, ಮತ್ತು ಯಾವುದೇ ಕಾಲಕ್ಕೆ ಹೀಗೆ ತಡೆಹಿಡಿದದ್ದನ್ನು ರದ್ದು ಪಡಿಸಬಹುದು.

(೫) ಕೇಂದ್ರ ಕಾಯಿದೆ ಮಂಡಳದಿಂದ ಇದರ ವಿರುದ್ಧ ವ್ಯವಸ್ಥೆ ಮಾಡಲ್ಪಡುವ ವರೆಗೆ ೧೯೩೫ನೇ ಇಸ್ವಿಯ ಭಾರತ ಸರಕಾರದ ಕಾನೂನಿನ ೩ನೇ ವಿಭಾಗವು ಪ್ರಾರಂಭವಾಗುವ ತಕ್ಷಣ ಮೊದಲು ಯಾವ ಪಂಚಾ ಯತವು ಆ ಕಾಲಕ್ಕೆ ಅಮಲಿನಲ್ಲಿದ್ದ ಈ ಕಲಮಿನನ್ವಯ ೨ನೇ ಉಪಕಲಮಿ ನಲ್ಲಿ ವಿವರಿಸಿದ ಕರಗಳ ಹೊರ್ತು ಇತರ ಯಾವುದೇ ಕರವನ್ನು ಕ್ರಮಬದ್ಧ ವಾಗಿ ಕೂಡ್ರಿಸುತ್ತಿತ್ತೋ, ಆ ಪಂಚಾಯತವು ಆ ಕರ ಕೂಡ್ರಿಸುವದನ್ನು ಮುಂದುವರಿಸಬಹುದು.

**೯೦. ಪಂಚಾಯತದ ಕರವನ್ನು ಹೆಚ್ಚಿಸಲು ಜಿಲ್ಲಾ ಲೋಕಲ್ ಬೋರ್ಡಿಗೆ ಇರುವ ಅಧಿಕಾರ.**

(೧) ಜಿಲ್ಲಾ ಲೋಕಲ್ ಬೋರ್ಡಿನ ಅಭಿಪ್ರಾಯದ ಪ್ರಕಾರ ಯಾವದೊಂದು ಪಂಚಾಯತದ ನಿಯಮಿತ ಆದಾಯವು ೨೬ನೇ ಮತ್ತು

೨೮ನೇ ಕಲಮುಗಳಲ್ಲಿ ಹೇಳಿದ ಕರ್ತವ್ಯಗಳನ್ನು ಯೋಗ್ಯವಾಗಿ ನೆರವೇರಿಸಲು ಅವಶ್ಯವಿರುವದಕ್ಕಿಂತ ಕಡಿಮೆ ಇದ್ದರೆ, ಜಿಲ್ಹಾ ಲೋಕಲ್ ಬೋರ್ಡು ಪಂಚಾಯತಕ್ಕೆ ತನ್ನ ಆದಾಯವನ್ನು ಜಿಲ್ಹಾ ಲೋಕಲ್ ಬೋರ್ಡಿಗೆ ಅವಶ್ಯ ತೋರುವಷ್ಟು ಮರ್ಯಾದೆಯ ವರೆಗೆ ಬೆಳೆಸುವದಕ್ಕೆ ಆರು ತಿಂಗಳೊಳಗಾಗಿ ವ್ಯವಸ್ಥೆ ಮಾಡಲು ಪಂಚಾಯತಿಗೆ ಆಜ್ಞೆಮಾಡಬಹುದು. ಪಂಚಾಯತವು, ಹೇಳಿದ ಮರ್ಯಾದೆಯ ವರೆಗೆ ತನ್ನ ಆದಾಯವನ್ನು ಬೆಳೆಸಲು ಯೋಗ್ಯ ವ್ಯವಸ್ಥೆ ಮಾಡಲಿಕ್ಕೆ ತಪ್ಪಿದರೆ, ಜಿಲ್ಹಾ ಲೋಕಲ್ ಬೋರ್ಡು ೪೯ನೇ ಕಲಮಿನಲ್ಲಿ ಹೇಳಿದ ಯಾವವೇ ಕರಗಳನ್ನು ಅಥವಾ ಫೀಗಳನ್ನು ಹೇರಲು ಅಥವಾ ಹೆಚ್ಚಿಸಲು ಆಜ್ಞೆ ಮಾಡಬಹುದು.

ಆದರೆ ಗೊತ್ತುಪಡಿಸುವದೇನಂದರೆ, ಜಿಲ್ಹಾ ಲೋಕಲ್ ಬೋರ್ಡು, ಯಾವದೇ ಕರವನ್ನು ಅಥವಾ ಫೀಯನ್ನು ಈ ಬಗ್ಗೆ ಗೊತ್ತುಪಡಿಸಲ್ಪಡ ಬೇಕಾದ ಪರಮಾವಧಿ ದರಕ್ಕಿಂತ ಹೆಚ್ಚಾಗಿ ಹೇರಲು ಅಥವಾ ಹೆಚ್ಚಿಸಲು ಪಂಚಾಯತಿಗೆ ಒತ್ತಾಯ ಪಡಿಸಜಾರದು..

(೨) ಯಾವದೇ ಪಂಚಾಯತವು ೧ನೇ ಉಪಕಲಮಿನನ್ವಯ ಮಾಡಲ್ಪಟ್ಟ ಆಜ್ಞೆಯ ವಿರುದ್ಧ ಕಮಿಶನರರ ಕಡೆಗೆ ಅಪೀಲುಮಾಡಿಕೊಳ್ಳಬಹುದು. ಮತ್ತು ಕಮಿಶನರರು ತಾನು ಆ ಅಪೀಲಿನ ನಿರ್ಣಯವನ್ನು ಮಾಡುವ ವರೆಗೆ ಇಂಥ ಆಜ್ಞೆಯ ಅಮಲ ಬಜಾವಣೆಯನ್ನು ತಡೆಹಿಡಿಯಬಹುದು.

**೯೧. ಕರಗಳನ್ನು ಮತ್ತು ಬರತಕ್ಕ ಇತರ ಹಣವನ್ನು ವಸೂಲ ಮಾಡುವದು.**

(೧) ಯಾವದೇ ಕರವು ಅಥವಾ ಫೀಯು ಕೊಡಲ್ಪಡತಕ್ಕದ್ದಾದಾಗ್ಗೆ, ಪಂಚಾಯತವು ಶಕ್ಯವಿದ್ದಷ್ಟು ತಡವಿಲ್ಲದೆ, ಅದನ್ನು ಕೊಡಲಿಕ್ಕೆ ಪಾತ್ರನಿದ್ದ ಮನುಷ್ಯನಿಗೆ ಅವನಿಂದ ಬರತಕ್ಕ ಹಣದಬಗ್ಗೆ ಒಂದು ಬಿಲ್ಲನ್ನು, ಯಾವ ತಾರೀಖಿನದಿವಸ ಅಥವಾ ಅದಕ್ಕೂ ಮೊದಲು ಆ ಹಣವು ಕೊಡಲ್ಪಡಬೇಕೋ, ಆ ತಾರೀಖನ್ನು ಅದರಲ್ಲಿ ನಮೂದಿಸಿ, ಕೊಡಬೇಕು.

(೨) ಯಾವನೇ ಮನುಷ್ಯನು ಈ ಕಾನೂನಿನನ್ವಯ ಅಥವಾ ನಿಯಮಗಳನನ್ವಯ ಅಥವಾ ಉಪನಿಯಮಗಳನ್ವಯ ಪಂಚಾಯತಕ್ಕೆ ತಾನು ಕೊಡತಕ್ಕ ಯಾವದೇ ಕರವನ್ನು ಅಥವಾ ಫೀಯನ್ನು ಅಥವಾ ಇತರ ಹಣವನ್ನು ಕೊಡುವಬಗ್ಗೆ ಗೊತ್ತುಪಡಿಸಿದ ತಾರೀಖಿನ ದಿವಸ ಅಥವಾ ಅದಕ್ಕೂ ಪೂರ್ವದಲ್ಲಿ ಕೊಡಲಿಕ್ಕೆ ತಪ್ಪಿದರೆ, ಆ ಪಂಚಾಯತವು ಆ ತಪ್ಪು ಮಾಡಿದ ಮನುಷ್ಯನಮೇಲೆ, ಗೊತ್ತುಪಡಿಸಿದ ನಮೂನೆಯಲ್ಲಿ ಒಂದು ಬೇಡಿಕೆಯ ಪತ್ರವನ್ನು ಜಾರಿ ಮಾಡಿಸಬೇಕು.

(೨ ಅ) ೧ನೇ ಉಪಕಲಮಿನನ್ವಯ ಸಾದರ ಪಡಿಸಿದ ಪ್ರತಿಯೊಂದು ಬಿಲ್ಲನ್ನು ಮತ್ತು ೨ನೇ ಉಪಕಲಮಿನನ್ವಯ ಜಾರಿ ಮಾಡಲ್ಪಡುವ ಪ್ರತಿಯೊಂದು ಬೇಡಿಕೆಯ ಪತ್ರವನ್ನು ಪಂಚಾಯತಿಯ ಅಧಿಕಾರಿಯು ಅಥವಾ ಸೇವಕನು ಅಥವಾ ಈ ವಿಷಯದ ಸಂಬಂಧ ಪಂಚಾಯತಿಯಿಂದ ಅಧಿಕಾರ ಪಡೆದ ಇತರ ಮನುಷ್ಯನು,

ಅ] ಬಿಲ್ಲು ಅಥವಾ ಬೇಡಿಕೆಯ ಪತ್ರವು ಯಾವನ ಹೆಸರಿನಲ್ಲಿ ಇರುವದೋ ಅವನಿಗೆ ಕೊಟ್ಟು ಅಥವಾ ಸಾದರಪಡಿಸಿ, ಅಥವಾ

ಬ] ಇಂಥ ಮನುಷ್ಯನು ಸಿಗದಿದ್ದರೆ, ಇತ್ತೀಚಿಗೆ ಗೊತ್ತಿದ್ದ ಅವನ ವಾಸಸ್ಥಳವು ಸದರ ಗ್ರಾಮದ ಕ್ಷೇತ್ರದಲ್ಲಿದ್ದರೆ, ಆ ಸ್ಥಳದಲ್ಲಿ ಆ ಬಿಲ್ಲನ್ನು ಅಥವಾ ಬೇಡಿಕೆಯ ಪತ್ರವನ್ನು ಇಟ್ಟು ಅಥವಾ ಆ ಬಿಲ್ಲನ್ನು ಅಥವಾ ಬೇಡಿಕೆಯ ಪತ್ರವನ್ನು ಅವನ ಕುಟುಂಬದಲ್ಲಿಯ ಯಾವನೇ ಪ್ರೌಢ ಮನುಷ್ಯನಿಗೆ ಅಥವಾ ಸೇವಕನಿಗೆ ಕೊಟ್ಟು ಅಥವಾ ಸಾದರಪಡಿಸಿ, ಅಥವಾ

ಕ] ಇಂಥ ಮನುಷ್ಯನು ಸದರ ಗ್ರಾಮದ ಕ್ಷೇತ್ರದಲ್ಲಿರದಿದ್ದರೆ, ಮತ್ತು ಅವನ ಬೇರೆಕಡೆಯ ಪತ್ತೆಯು ಸರಪಂಚನಿಗೆ ಅಥವಾ ಬಿಲ್ಲನ್ನು ಇಲ್ಲವೆ ಬೇಡಿಕೆಯ ಪತ್ರವನ್ನು ಕೊಡುವದಕ್ಕೆ ಆಜ್ಞೆಮಾಡುವ ಇತರ ಮನುಷ್ಯನಿಗೆ ಗೊತ್ತಿದ್ದರೆ, ಆ ಬಿಲ್ಲನ್ನು ಅಥವಾ ಬೇಡಿಕೆಯ ಪತ್ರವನ್ನು ಪಾಕೀಟಿನಲ್ಲಿ ಹಾಕಿ ಅದರಮೇಲೆ ಸದರೀ ಪತ್ತೆಯನ್ನು ಬರೆದು ರಜಿಸ್ಟರ ಪೋಸ್ಟಿನಿಂದ ಇಂಥ ಮನುಷ್ಯನಿಗೆ ಕಳುಹಿಸಿ, ಅಥವಾ

ಡ] ಮೇಲೆ ಹೇಳಿದ ಸಾಧನಗಳಲ್ಲಿ ಯಾವುದೇ ಸಾಧನವು ಉಪಲಬ್ಧವಾಗದಿದ್ದರೆ, ಆ ಬಿಲ್ಲು ಅಥವಾ ಬೇಡಿಕೆಯ ಪತ್ರವು, ಯಾವ ಕಟ್ಟಡದ ಅಥವಾ ಭೂಮಿಯ ಸಂಬಂಧದಲ್ಲಿರುವದೋ ಅಂಥ ಕಟ್ಟಡ ಅಥವಾ ಭೂಮಿಯು ಇದ್ದರೆ, ಆ ಬಿಲ್ಲನ್ನು ಅಥವಾ ಬೇಡಿಕೆಯ ಪತ್ರವನ್ನು ಆ ಕಟ್ಟಡದ ಅಥವಾ ಭೂಮಿಯ ಮಹತ್ವದ ಭಾಗದಲ್ಲಿ ಅಂಟಿಸಿ,

ಸಾದರ ಪಡಿಸಬೇಕು ಅಥವಾ ಜಾರಿ ಮಾಡಬೇಕು.

(೩) ಯಾವ ಹಣದಬಗ್ಗೆ ಬೇಡಿಕೆಯ ಪತ್ರವು ಜಾರಿಮಾಡಲ್ಪಟ್ಟಿರುವದೋ ಅಂಥ ಹಣವು, ಜಾರಿಯಾದ ತಾರೀಖಿನಿಂದ ೩೦ ದಿವಸಗಳೊಳಗಾಗಿ ಕೊಡಲ್ಪಡದಿದ್ದರೆ, ಪಂಚಾಯತವು ಗೊತ್ತುಮಾಡಿದ ರೀತಿಯಲ್ಲಿ ಇಂಥ ಹಣವನ್ನು, ತಪ್ಪುಮಾಡಿದವನ ಜಂಗಮ ಆಸ್ತಿಯನ್ನು ಜಪ್ತಮಾಡಿ ಮತ್ತು ಮಾರಿ ವಸೂಲ ಮಾಡಬಹುದು,

(೪) ಠರಾಯಿಸಲ್ಪಡಬಹುದಾದ ದರಗಳಂತೆ,

ಅ] ೩ನೇ ಉಪಕಲಮಿನನ್ವಯ ಮಾಡಲ್ಪಟ್ಟ ಪ್ರತಿಯೊಂದು ಜಪ್ತಿಯ ಬಗ್ಗೆ,

ಬ] ೨ನೇ ಉಪಕಲಮಿನನ್ವಯ ಜಾರಿಮಾಡಲ್ಪಟ್ಟ ಪ್ರತಿಯೊಂದು ಬೇಡಿಕೆಯ ಪತ್ರದ ಬಗ್ಗೆ, ಮತ್ತು

ಕ] ೩ನೇ ಉಪಕಲಮಿನನ್ವಯ ಜಪ್ತ ಮಾಡಲ್ಪಟ್ಟ ಪ್ರಾಣಿಗಳ ಹೊಟ್ಟೆಯ ವೆಚ್ಚದ ಬಗ್ಗೆ,

ಫೀಗಳ ಆಕರಣೆ ಮಾಡಬೇಕು.

(೪ ಅ) ಮೇಲಿನ ಉಪಕಲಮುಗಳಲ್ಲಿ ಏನೇ ವಿಷಯ ಇದ್ದಾಗ್ಯೂ, ನಿಯಮಗಳಿಗನುಸರಿಸಿ, ಬೇಡಿದ ಮೇಲೆ ಕೊಡಲ್ಪಡತಕ್ಕದ್ದಾಗುವ ಯಾವುದೇ ಕರ ಅಥವಾ ಫೀಯು ಠರಾಯಿಸಲ್ಪಡಬಹುದಾದ ರೀತಿಯಲ್ಲಿ ವಸೂಲ ಮಾಡಲ್ಪಡಬೇಕು.

(೫) ಪಂಚಾಯತವು, ಮೇಲೆ ಹೇಳಿದಂತೆ ತನಗೆ ಬರತಕ್ಕ ಯಾವುದೇ ಕರವನ್ನು ಅಥವಾ ಫೀಯನ್ನು ಅಥವಾ ಹಣವನ್ನು ವಸೂಲಮಾಡಲಿಕ್ಕೆ

ಅಸಮರ್ಥವಾದರೆ, ಅದು ಬರಬೇಕಾದ ಬಾಕಿ ಹಣದಬಗ್ಗೆ ಒಂದು ಪತ್ರಕವನ್ನು ಮಾಮಲೇದಾರ ಅಥವಾ ಮಹಾಲಕರಿಗೆ, ಸದರೀ ಬಾಕಿ ಹಣವನ್ನು ಗ್ರಾಮಸ್ಥರ ಮುಖಾಂತರ ವಸೂಲ ಮಾಡುವ ಬಗ್ಗೆ ವಿನಂತಿ ಸಹಿತವಾಗಿ ಕಳುಹಿಸಬಹುದು, ಮತ್ತು ೧ನೇ ಉಪಕಲಮಿನನ್ವಯ ಕೊಡಲ್ಪಟ್ಟ ಬಿಲ್ಲಿನಲ್ಲಿ ಹೇಳಿದ ತಾರೀಖಿನಿಂದ ಒಂದು ವರ್ಷದೊಳಗಾಗಿ ಪಂಚಾಯತವು ಮಾಮಲೇದಾರನಿಗೆ ಅಥವಾ ಮಹಾಲಕರಿಗೆ ಇಂಥ ಬಾಕಿಯ ಪತ್ರಕವನ್ನು ಕೊಟ್ಟಿದ್ದರೆ, ಇಂಥ ಬಾಕಿಯ ಪತ್ರಕವು ಮುಟ್ಟಿದಮೇಲೆ, ಮಾಮಲೇದಾರನು ಅಥವಾ ಮಹಾಲಕರಿಯು ಅದನ್ನು ಭೂಮಿಯ ಮಹಸೂಲಿನ ಬಾಕಿಯಂತೆ ಗ್ರಾಮಸ್ಥರ ಮುಖಾಂತರ ವಸೂಲಮಾಡಲು ಕೆಲಸ ನಡಿಸಬೇಕು. ಇಂಥ ರಕಮುಗಳ ವಸೂಲಿಯ ಬಗ್ಗೆ ಪಂಚಾಯತವು ಗೊತ್ತುಪಡಿಸಬಹುದಾದ ರೀತಿಯಲ್ಲಿ ಗ್ರಾಮಸ್ಥರಿಗೆ ಪ್ರತಿಫಲವನ್ನು ಕೊಡಬೇಕು.

(೬) ಪಂಚಾಯತವು ತನಗೆ ಬರತಕ್ಕ ಯಾವುದೇ ಕರವನ್ನು, ಫೀಯನ್ನು ದಂಡವನ್ನು ಅಥವಾ ಇತರ ಹಣವನ್ನು ವಸೂಲ ಮಾಡಲಿಕ್ಕೆ ತಪ್ಪಿದರೆ ಅಥವಾ ೮೪ನೇ ಕಲಮಿನ ೨ನೇ ಮತ್ತು ೩ನೇ ಉಪಕಲಮುಗಳನ್ವಯ ಅಥವಾ ಈ ಕಲಮಿನ ೨ನೇ ಮತ್ತು ೩ನೇ ಉಪಕಲಮುಗಳನ್ವಯ ಕೆಲಸ ನಡಿಸಲಿಕ್ಕೆ ಅಲಕ್ಷಮಾಡಿದರೆ, ಜಿಲ್ಹಾ ಲೋಕಲ್ ಬೋರ್ಡು ಅದನ್ನು ಭೂಮಿಯ ಮಹಸೂಲಿನ ಬಾಕಿಯಂತೆ ವಸೂಲ ಮಾಡಲಿಕ್ಕೆ ಕಲೆಕ್ಟರನಿಗೆ ಅರ್ಜಿ ಮಾಡಬಹುದು.

ಆದರೆ ಗೊತ್ತುಪಡಿಸುವದೇನಂದರೆ, ಪ್ರಸಂಗಾನುಸಾರ ಇಂಥ ಅರ್ಜಿಯು, ಆ ರಕಮು ೮೪ನೇ ಕಲಮಿನ ೩ನೇ ಉಪಕಲಮಿನನ್ವಯ ತಿಳಿಸಲ್ಪಡಲಿಕ್ಕೆ ಯೋಗ್ಯವಾದ ತಾರೀಖಿನಿಂದ ಅಥವಾ ಈ ಕಲಮಿನ ೧ನೇ ಉಪಕಲಮಿನನ್ವಯ ಕೊಡಲ್ಪಟ್ಟ ಬಿಲ್ಲಿನಲ್ಲಿ ಹೇಳಿದ ತಾರೀಖಿನಿಂದ ೨ ವರ್ಷಗಳು ಗತಿಸಿದ ನಂತರ ಕಲೆಕ್ಟರನ ಕಡೆಗೆ ಮಾಡಲ್ಪಡಬಾರದು.

ಜಿಲ್ಹಾ ಲೋಕಲ್ ಬೋರ್ಡಿನಿಂದ ಇಂಥ ಅರ್ಜಿಯನ್ನು ಸ್ವೀಕರಿಸಿದ ನಂತರ ಕಲೆಕ್ಟರನು ತನಗೆ ಯೋಗ್ಯಕಂಡ ವಿಚಾರಣೆಯನ್ನು ಮಾಡಿದಬಳಿಕ

ಆ ರಕಮನ್ನು ಭೂಮಿಯ ಮಹಸೂಲಿನ ಬಾಕಿಯಂತೆ (ಇಂಥ ರಕಮು ೯೨ನೇ ಕಲಮಿನನ್ವಯ ಮುಳುಗುಗಂಟೆಂದು ಬರೆಯಲ್ಪಡಬೇಕೆಂದು ಅಪ್ಪಣೆ ಕೊಡದ ವಿನಃ) ವಸೂಲ ಮಾಡಲಿಕ್ಕೆ ಕೆಲಸ ನಡಿಸಬೇಕು.

**೯೨. ವಸೂಲಾಗದಂಥ ರಕಮುಗಳನ್ನು ಮುಳುಗುಗಂಟೆಂದು ಬರೆಯಬೇಕೆಂದು ಆಜ್ಞೆ ಮಾಡಲಿಕ್ಕೆ ಕಲೆಕ್ಟರನಿಗೆ ಅಧಿಕಾರ.**

ಅ] ಪಂಚಾಯತದಿಂದ ತಿಳಿಸಲ್ಪಟ್ಟ ಮತ್ತು ತನ್ನಿಂದ ೮೧, ೮೨ ಮತ್ತು ೮೪ನೇ ಕಲಮುಗಳನ್ವಯ ಮತ್ತು ೯೧ನೇ ಕಲಮಿನ ೬ನೇ ಉಪ ಕಲಮಿನನ್ವಯ ವಸೂಲಮಾಡಲ್ಪಡಬೇಕಾದ ಯಾವುದೇ ರಕಮು

ಬ] ಪಂಚಾಯತಕ್ಕೆ ಬರಬೇಕಾದ ಮತ್ತು ೯೧ನೇ ಕಲಮಿನ ೫ನೇ ಉಪಕಲಮಿನನ್ವಯ ಮಾಮಲೇದಾರನ ಅಥವಾ ಮಹಾಲಕರಿಯ ಮುಖಾಂತರ ವಸೂಲ ಮಾಡಲ್ಪಡಬೇಕಾದ ಯಾವುದೇ ಕರದ ಬಾಕಿಯು ಅಥವಾ ಫೀಯು ಅಥವಾ ಇತರ ರಕಮು

ಕ] ಈ ಕಾನೂನಿನನ್ವಯ ಅಥವಾ ಇತರ ರೀತಿಯಿಂದ ಪಂಚಾಯತಿಗೆ ಬರತಕ್ಕ ಯಾವುದೇ ರಕಮು,

ವಸುಲಾದಂಥಾದ್ದು ಇದ್ದರೆ, ಕಲೆಕ್ಟರನು ಇಂಥ ರಕಮನ್ನು ಅಥವಾ ಬಾಕಿಯನ್ನು ಮುಳುಗುಗಂಟೆಂದು ಬರೆಯಲು ಆಜ್ಞೆಮಾಡಬಹುದು. ಆದರೆ ೫೦೦ ರೂಪಾಯಿಗಳಿಗಿಂತ ಹೆಚ್ಚಿನ ಹಣವನ್ನು ರಾಜ್ಯ ಸರಕಾರದ ಪೂರ್ವ ಮಂಜೂರಿಯಿಲ್ಲದೆ [ಕ] ರಕಮಿನನ್ವಯ ಮುಳುಗುಗಂಟೆಂದು ಬರೆಯಬಾರದು.

# ವಿಭಾಗ ೧೦.

## ಪಂಚಾಯತಗಳಿಗೆ ಆರ್ಥಿಕ ಸಹಾಯ.

**೯೨ ಪ್ರಾಂತಿಕ ಸರಕಾರದಿಂದ ವರ್ಗಣಿ.**

೮೯ನೇ ಕಲಮಿನ ೧ನೇ ಮತ್ತು ೨ ಅ ಉಪಕಲಮುಗಳನ್ವಯ ಕರಕೊತ್ರಿಸುವ ಪ್ರತಿಯೊಂದು ಪಂಚಾಯತಿಗೆ ಸಾಮಾನ್ಯ ಭೂಮಿಯ ಮಹಸೂಲಿನಲ್ಲಿ ೧೦೦ಕ್ಕೆ ೧೫ ರಷ್ಟು ಹಣ ಅಥವಾ ಗ್ರಾಮದ ಕ್ಷೇತ್ರದಲ್ಲಿ ಹಿಂದಿನ ವರ್ಷ ವಸೂಲಾದ ಲೋಕಲ್ ಫಂಡಿನಲ್ಲಿ ೧೦೦ಕ್ಕೆ ೨೫ ರಷ್ಟು ಹಣ— ಇವೆರಡರಲ್ಲಿ ಯಾವುದು ಹೆಚ್ಚಿನದಾಗುವದೋ ಅದರಷ್ಟು ಹಣವನ್ನು ಪ್ರಾಂತಿಕ ಸರಕಾರದವರು ಪ್ರತಿವರ್ಷ ಕೊಡುವರು.

**೯೩. ಜಿಲ್ಹಾ ಲೋಕಲ್ ಬೋರ್ಡು ಸಾಲ ಕೊಡುವದು.**

೧೯೨೩ನೇ ಇಸ್ವಿಯ ಮುಂಬಯಿ ಜಿಲ್ಹಾ ಲೋಕಲ್ ಬೋರ್ಡುಗಳ ಕಾನೂನಿನಲ್ಲಿ ಯಾವುದೇ ವಿಷಯ ಇದ್ದಾಗ್ಯೂ ಜಿಲ್ಹಾ ಲೋಕಲ್ ಬೋರ್ಡು, ನಿಯಮುಗಳಿಗೊಳಪಟ್ಟು, ಈ ಕಾನೂನಿನ ಉದ್ದೇಶಗಳಿಗಾಗಿ (ತನ್ನ) ಜಿಲ್ಹೆಯಲ್ಲಿಯ ಪಂಚಾಯತಿಗೆ ಸಾಲವನ್ನು ಕೊಡಬಹುದು.

# ವಿಭಾಗ ೧೧.

## ನಿರ್ಬಂಧ.

### ೯೪. ಪ್ರಕರ್ಣ ಮೊದಲಾದವುಗಳನ್ನು ಬೇಡಲಿಕ್ಕೆ ಅಧಿಕಾರ.

(೧) ಕಲೆಕ್ಟರನಿಗೆ ಅಥವಾ ಜಿಲ್ಹಾ ಲೋಕಲ್ ಬೋರ್ಡಿಗೆ,

ಅ] ಪಂಚಾಯತಿಯ ಯಾವುದೇ ಪ್ರಕರ್ಣದಲ್ಲಿ ಯಾವುದೇ ಉತಾರವನ್ನು, ಪಂಚಾಯತಿಯ ವಶದಲ್ಲಿಯ ಅಥವಾ ನಿಯಂತ್ರಣದಲ್ಲಿದ್ದ ಯಾವುದೇ ಪುಸ್ತಕವನ್ನು ಅಥವಾ ದಸ್ತೈವಜನ್ನು ಮತ್ತು ಯಾವುದೇ ಪತ್ರಕವನ್ನು, ಪತ್ರಿಕೆಯನ್ನು, ಲೆಖ್ಖವನ್ನು ಅಥವಾ ರಿಪೋರ್ಟನ್ನು, ಪಂಚಾಯತವು ಹಾಜರಮಾಡುವದು ಯೋಗ್ಯವೆಂದು ಕಲೆಕ್ಟರನಿಗೆ ಅಥವಾ ಜಿಲ್ಹಾ ಲೋಕಲ್ ಬೋರ್ಡಿಗೆ ಯೋಗ್ಯವೆನಿಸುವದೋ ಅಂಥವುಗಳನ್ನು ಬೇಡಲಿಕ್ಕೆ, ಮತ್ತು

ಬ] ಪಂಚಾಯತಿಗೆ—

(1) ಯಾವುದನ್ನು ಪಂಚಾಯತವು ಮಾಡುವದಿರುವದೋ ಅಥವಾ ಮಾಡುತ್ತಿರುವದೋ ಅಂಥ ಯಾವುದೇ ಸಂಗತಿಯನ್ನು ಮಾಡುವದಕ್ಕೆ ಯಾವುದೇ ಆಕ್ಷೇಪವಿರುವದೆಂದು ಕಲೆಕ್ಟರನಿಗೆ ಅಥವಾ ಜಿಲ್ಹಾ ಲೋಕಲ್ ಬೋರ್ಡಿಗೆ ತೋರುವದೋ ಅಂಥ ಯಾವುದೇ ಆಕ್ಷೇಪವನ್ನು, ಅಥವಾ

(2) ಯಾವ ಮಾಹಿತಿಯನ್ನು ಪೂರೈಸಲಿಕ್ಕೆ ಕಲೆಕ್ಟರನು ಅಥವಾ ಜಿಲ್ಹಾ ಲೋಕಲ್ ಬೋರ್ಡು ಸಮರ್ಥವಿರುವದೋ ಮತ್ತು ಅದರ ಮೂಲಕ ಯಾವುದೊಂದು ಕೆಲಸವನ್ನು ಪಂಚಾಯತವು ಮಾಡುವದು ಅವಶ್ಯವಾಗುವದೆಂದು ಕಲೆಕ್ಟರನಿಗೆ ಅಥವಾ ಜಿಲ್ಹಾ ಲೋಕಲ್ ಬೋರ್ಡಿಗೆ ತೋರುವದೋ ಅಂಥ ಯಾವುದೇ ಮಾಹಿತಿಯನ್ನು,

ವಿಚಾರಮಾಡಲಿಕ್ಕೆ ಮತ್ತು ಇಂಥ ಕೆಲಸಗಳನ್ನು ಮಾಡುವದನ್ನು ಬಿಡದಿರುವದಕ್ಕೆ ಅಥವಾ ಮಾಡದಿರುವದಕ್ಕೆ ಇರುವ ತನ್ನ ಕಾರಣಗಳನ್ನು ಕೊಟ್ಟು ಯೋಗ್ಯವೇಳೆಯಲ್ಲಿ, ಪ್ರಸಂಗಾನುಸಾರ, ಕಲೆಕ್ಟರನಿಗೆ ಅಥವಾ ಜಿಲ್ಹಾ ಲೋಕಲ್ ಬೋರ್ಡಿಗೆ ಒಂದು ಲೇಖಿ ಉತ್ತರವನ್ನು ಕಳಿಸಲು ಪಂಚಾಯತಿಗೆ ಕೇಳಲು ಅಧಿಕಾರವಿದೆ.

(೨) ಜಿಲ್ಹಾ ಲೋಕಲ್ ಬೋರ್ಡಿಗೆ, ೧ನೇ ಉಪಕಲಮಿನನ್ವಯ ಕೊಡಲ್ಪಟ್ಟ ಎಲ್ಲ ಅಥವಾ ಯಾವದೇ ಅಧಿಕಾರಗಳನ್ನು ಅದು ತನ್ನ ಅಧ್ಯಕ್ಷನಿಗೆ, ಚೀಫ ಆಫೀಸರನಿಗೆ, ಆರೋಗ್ಯಶಾಖೆಯ ಅಧಿಕಾರಿಗೆ ಅಥವಾ ಎಗ್ಝಿಕ್ಯುಟಿವ್ಹ ಎಂಜಿನಿಯರನಿಗೆ ಕೊಡಬಹುದು.

**೯೫. ಪಂಚಾಯತಗಳ ಸ್ಥಾಪನೆಗೆ ಉತ್ತೇಜನ ಕೊಡುವಬಗ್ಗೆ ಮತ್ತು ಅವುಗಳ ಬೆಳವಣಿಗೆಯನ್ನು ಪೋಷಿಸುವಬಗ್ಗೆ ಕೆಲಸವನ್ನು ಒಪ್ಪಿಸಿಕೊಡುವದು, ಅಧಿಕಾರಿಗಳನ್ನು ನೇಮಿಸುವದು ಮತ್ತು ಪ್ರತಿಫಲವಿಲ್ಲದೆ ಕೆಲಸ ಮಾಡುವವರನ್ನು ಉಪಯೋಗಿಸಿ ಕೊಳ್ಳುವದು.**

(೧) ಜಿಲ್ಹಾ ಲೋಕಲ್ ಬೋರ್ಡು, ಅಧ್ಯಕ್ಷನಿಗೆ, ಉಪಾಧ್ಯಕ್ಷನಿಗೆ, ಚೀಫ ಆಫೀಸರನಿಗೆ, ಆರೋಗ್ಯಶಾಖೆಯ ಅಧಿಕಾರಿಗೆ ಅಥವಾ ಈ ಬಗ್ಗೆ ಜಿಲ್ಹಾ ಲೋಕಲ್ ಬೋರ್ಡಿನಿಂದ ವಿಶೇಷವಾಗಿ ನೇಮಿಸಲ್ಪಟ್ಟ ಇತರ ಯಾವನೇ ಅಧಿಕಾರಿಗೆ, ಪಂಚಾಯತಗಳ ಸ್ಥಾಪನೆಗೆ ಉತ್ತೇಜನಕೊಡುವ ಮತ್ತು ಅವುಗಳ ಬೆಳವಣಿಗೆಯನ್ನು ಪೋಷಿಸುವ ಕೆಲಸವನ್ನು ಮತ್ತು ಪಂಚಾಯತಗಳು ಈ ಕಾನೂನಿನನ್ವಯ ತಮ್ಮ ಅಧಿಕಾರವನ್ನು ಯೋಗ್ಯವಾಗಿ ನಡಿಸುವದರಲ್ಲಿ ಮತ್ತು ತಮ್ಮ ಕರ್ತವ್ಯಗಳನ್ನು ಮಾಡುವದರಲ್ಲಿ, ಅವುಗಳಿಗೆ ಸಹಾಯ ನೀಡುವ ಕೆಲಸವನ್ನು ಒಪ್ಪಿಸಿ ಕೊಡಬಹುದು.

(೨) ಯಾವ ಮನುಷ್ಯನು ಜಿಲ್ಹಾ ಲೋಕಲ್ ಬೋರ್ಡಿನ ಅಭಿಪ್ರಾಯದಲ್ಲಿ ಈ ಬಗ್ಗೆ ವಿಶೇಷ ಅರ್ಹತೆಯುಳ್ಳವನಿರುವನೋ, ಅಂಥವನ ಸೇವೆಯನ್ನು ೧ನೇ ಉಪಕಲಮಿನನ್ವಯ ಒಪ್ಪಿಸಲ್ಪಡಬಹುದಾದ ಯಾವವೇ

ಕೆಲಸಗಳನ್ನು ಏನೂ ಪ್ರತಿಫಲವಿಲ್ಲದೆ, ಮಾಡುವದಕ್ಕೆ ಸ್ವೀಕರಿಸಿ ಉಪಯೋಗಿಸಿ ಕೊಳ್ಳಲಿಕ್ಕೆ ಇಂಥ ಜಿಲ್ಹಾ ಲೋಕಲ್ ಬೋರ್ಡು ಸಮರ್ಥ ವಿರುವದು.

(೩) ಪ್ರಾಂತಿಕ ಸರಕಾರದವರು ಠರಾಯಿಸಬಹುದಾದ, ಈ ಕಾನೂನಿನನ್ವಯದ ಕಲೆಕ್ಟರನ ಅಧಿಕಾರವನ್ನು ನಡಿಸಲಿಕ್ಕೆ ಮತ್ತು ಕರ್ತವ್ಯಗಳನ್ನು ಮಾಡಲಿಕ್ಕೆ ಮತ್ತು ಜಿಲ್ಹಾ ಲೋಕಲ್ ಬೋರ್ಡು ರದ್ದುಗೊಳಿಸಲ್ಪಟ್ಟರೆ, ಜಿಲ್ಹಾ ಲೋಕಲ್ ಬೋರ್ಡಿನ ಕರ್ತವ್ಯಗಳನ್ನು ಮಾಡಲಿಕ್ಕೆ ಯಾವನೊಬ್ಬ ಅಧಿಕಾರಿಯನ್ನು ನೇಮಿಸಲಿಕ್ಕೆ ಪ್ರಾಂತಿಕ ಸರಕಾರವು ಸಮರ್ಥವಿದೆ. ಇಂಥ ಅಧಿಕಾರಿಯು ಪಂಚಾಯತಗಳನ್ನು ಮತ್ತು ನ್ಯಾಯ ಪಂಚಾಯತಗಳನ್ನು ಸ್ಥಾಪಿಸಲಿಕ್ಕೆ ಪ್ರೋತ್ಸಾಹಿಸುವ ಮತ್ತು ಅವುಗಳ ಬೆಳವಣಿಗೆಯನ್ನು ಪೋಷಿಸುವ ಉದ್ದೇಶದ ಸಲುವಾಗಿ ಮತ್ತು ಪಂಚಾಯತಗಳು ಮತ್ತು ನ್ಯಾಯಪಂಚಾಯತಗಳು ಈ ಕಾನೂನಿನನ್ವಯ ತಮ್ಮ ಅಧಿಕಾರಗಳನ್ನು ಯೋಗ್ಯವಾಗಿ ನಡೆಸುವಲ್ಲಿ ಮತ್ತು ಕರ್ತವ್ಯಗಳನ್ನು ಯೋಗ್ಯವಾಗಿ ನೆರವೇರಿಸುವಲ್ಲಿ ಅವುಗಳಿಗೆ ಸಹಾಯಮಾಡುವ ಮತ್ತು ಸಲಹೆಕೊಡುವ ಉದ್ದೇಶಕ್ಕಾಗಿ ಪ್ರಾಂತಿಕ ಸರಕಾರದವರು ಠರಾಯಿಸಬಹುದಾದ ಇತರ ಕರ್ತವ್ಯಗಳನ್ನು ಮಾಡಬೇಕು ಮತ್ತು ಅಧಿಕಾರಗಳನ್ನು ಸಹ ನಡಿಸಬೇಕು.

**೯೬. ಪ್ರವೇಶಮಾಡುವ ಅಧಿಕಾರ.**

ಪಂಚಾಯತದ ಸ್ವಾಧೀನದಲ್ಲಿದ್ದ ಯಾವುದೇ ಸ್ಥಾವರ ಆಸ್ತಿಯಲ್ಲಿ ಅದರ ಆಜ್ಞಾನುಸಾರ ನಡೆದ ಯಾವುದೇ ಕಾರ್ಯ (ಕಾಮಗಿರಿ) ದಲ್ಲಿ ಪ್ರವೇಶ ಮಾಡಲಿಕ್ಕೆ ಮತ್ತು ಮೇಲ್ವಿಚಾರಣೆ ಮಾಡಲಿಕ್ಕೆ ಅಥವಾ ಪ್ರವೇಶಿಸಿ ಮೇಲ್ವಿಚಾರಣೆ ಯಾಗುವಂತೆ ಮಾಡಲಿಕ್ಕೆ ಜಿಲ್ಹಾ ಲೋಕಲ್ ಬೋರ್ಡು ತನ್ನ ಅಧ್ಯಕ್ಷನಿಗೆ, ಉಪಾಧ್ಯಕ್ಷನಿಗೆ ಅಥವಾ ತನ್ನ ಯಾವನೇ ಅಧಿಕಾರಿಗೆ ಅಧಿಕಾರವನ್ನು ಕೊಡಬಹುದು.

**೯೭. ಲೆಖ್ಖಗಳ ತಪಾಸಣಿ.**

ಪ್ರಾಂತಿಕ ಸರಕಾರದಿಂದ ಈ ಬಗ್ಗೆ ಇತರ ರೀತಿಯಿಂದ ವ್ಯವಸ್ಥೆ ಯಾಗಿರದಿದ್ದರೆ, ಪ್ರತಿವರ್ಷ ಜಿಲ್ಹಾ ಲೋಕಲ್ ಬೋರ್ಡು ಪಂಚಾಯತದ

ಲೆಖ್ಖದ ತಪಾಸಣಿ ಮಾಡಬೇಕು. ಮತ್ತು ಇಂಥ ಬೋರ್ಡು ಲೆಖ್ಖ ತಪಾಸಣಿಯನ್ನು ಮುಗಿಸಿದ ಒಂದು ತಿಂಗಳೊಳಗೆ ಲೆಖ್ಖತಪಾಸಣಿಯ ಟಿಪ್ಪಣಿ (ಆಡಿಟನೋಟ)ಯ ಒಂದು ಪ್ರತಿ (ನಕಲ)ಯನ್ನು ಕಲೆಕ್ಟರನಿಗೆ ಕಳುಹಿಸಬೇಕು.

**೯೮. ನೌಕರರ ಸಂಖ್ಯೆಯನ್ನು ಕಡಿಮೆ ಮಾಡುವದು.**

(೧) ಪಂಚಾಯತದಿಂದ ಅಧಿಕಾರಿಗಳೆಂದು ಅಥವಾ ಸೇವಕರೆಂದು ಇಡಲ್ಪಟ್ಟ ಅಥವಾ ಇಡುವದಕ್ಕೆ ಯೋಚಿಸಲ್ಪಟ್ಟ ಜನರ ಸಂಖ್ಯೆಯು ಅಥವಾ ಇಂಥ ಜನರಿಗೆ ಪಂಚಾಯತದಿಂದ ಕೊಡಲ್ಪಟ್ಟ ಅಥವಾ ಕೊಡುವದಕ್ಕೆ ಯೋಚಿಸಲ್ಪಟ್ಟ ಪ್ರತಿಫಲವು ಅಧಿಕವಾಗಿದೆಯೆಂದು ಕಲೆಕ್ಟರನ ಅಥವಾ ಜಿಲ್ಹಾ ಲೋಕಲ್ ಬೋರ್ಡಿನ ಅಭಿಪ್ರಾಯವಾದರೆ, ಪ್ರಸಂಗಾನುಸಾರ, ಕಲೆಕ್ಟರನು ಅಥವಾ ಜಿಲ್ಹಾ ಲೋಕಲ್ ಬೋರ್ಡು ಆಜ್ಞೆ ಮಾಡಲಾಗಿ, ಪಂಚಾಯತವು ಇಂಥ ಸಂಖ್ಯೆಯನ್ನು ಅಥವಾ ಪ್ರತಿಫಲವನ್ನು ಕಡಿಮೆ ಮಾಡಬೇಕು.

(೨) ೧ನೇ ಉಪಕಲಮಿನನ್ವಯ ಕಲೆಕ್ಟರನ ಅಥವಾ ಜಿಲ್ಹಾ ಲೋಕಲ್ ಬೋರ್ಡಿನ ಆಜ್ಞೆಯಲ್ಲಿ, ಭೇದವಿದ್ದರೆ, ಪಂಚಾಯತವು ಆ ಭೇದವಿದ್ದ ಸಂಗತಿಯನ್ನು ಕಮಿಶನರನಿಗೆ ತಿಳಿಸಬೇಕು. ಮತ್ತು ಕಮಿಶನರನ ನಿರ್ಣಯವು ಕೊನೆಯದಾಗುವದು.

(೩) ಪಂಚಾಯತವು ೧ನೇ ಉಪಕಲಮಿನನ್ವಯ ಆಜ್ಞೆಮಾಡಲ್ಪಟ್ಟ ಯಾವುದೇ ವಿಷಯದ ವಿರುದ್ಧ ಕಮಿಶನರನಿಗೆ ಅಪೀಲು ಮಾಡಬಹುದು, ಮತ್ತು ಈ ವಿಷಯದಲ್ಲಿ ಕಮಿಶನರನು ಕೊಟ್ಟ ನಿರ್ಣಯವು ಕೊನೆಯದಾಗುವದು.

**೯೯. ಆಜ್ಞೆಯ ಅಮಲಬಜಾವಣಿಯನ್ನು ತಡೆಹಿಡಿಯುವದು.**

(೧) ಕಲೆಕ್ಟರನ ಅಭಿಪ್ರಾಯದಲ್ಲಿ ಪಂಚಾಯತದ ಯಾವುದೇ ಆಜ್ಞೆಯ ಅಥವಾ ಠರಾವಿನ ಅಮಲಬಜಾವಣಿಯಿಂದ, ಪಂಚಾಯತದಿಂದ ಅಥವಾ ಅದರವತಿಯಿಂದ ಮಾಡಲ್ಪಡಲಿರುವ ಅಥವಾ ಮಾಡಲ್ಪಡುತ್ತಿರುವ ಯಾವುದೇ

ಸಂಗತಿಯನ್ನು ಮಾಡುವದರಿಂದ ಜನರಿಗೆ ಅಪಾಯ ಅಥವಾ ತೊಂದರೆ ಯಾಗುತ್ತಿದ್ದರೆ ಅಥವಾ ಆಗುವ ಸಂಭವವಿದ್ದರೆ, ಅಥವಾ ಅದರಿಂದ ಶಾಂತತಾ ಭಂಗವಾಗುವಹಾಗಿದ್ದರೆ, ಅವನು ಲೇಖಿ ಆಜ್ಞೆಯಿಂದ ಆ ಅಮಲ ಬಜಾವಣಿಯನ್ನು ತಡೆಹಿಡಿಯಬಹುದು ಅಥವಾ ಅದನ್ನು ಮಾಡುವದಕ್ಕೆ ಪ್ರತಿಬಂಧ ಮಾಡಬಹುದು.

(೨) ಕಲೆಕ್ಟರನು ೧ನೇ ಉಪಕಲಮಿನನ್ವಯ ಯಾವುದೊಂದು ಆಜ್ಞೆಯನ್ನು ಮಾಡಿದಾಗ್ಗೆ ಅವನು ಕೂಡಲೆ ಸಂಬಂಧಪಟ್ಟ ಪಂಚಾಯತಿಗೆ ಆ ಆಜ್ಞೆಯ ಒಂದು ಪ್ರತಿಯನ್ನು, ಅದನ್ನು ಮಾಡುವದಕ್ಕೆ ಇರುವ ಕಾರಣ ಸಹಿತವಾಗಿ ಕಳುಹಿಸಬೇಕು.

(೩) ಕಲೆಕ್ಟರನು ಈ ಕಲಮಿನನ್ವಯ ಸಂಭವಿಸುವ ಪ್ರತಿಯೊಂದು ಪ್ರಕರ್ಣದ ರಿಪೋರ್ಟನ್ನು ಕೂಡಲೇ ಕಮಿಶನರನಿಗೆ ಸಾದರ ಪಡಿಸಬೇಕು, ಮತ್ತು ಕಮಿಶನರನು ಅದರಲ್ಲಿ ಮಾಡಿದ ಯಾವದೇ ಆಜ್ಞೆಯನ್ನು ತಿದ್ದ ಬಹುದು, ಅಥವಾ ಬದಲಿಸಬಹುದು, ಮತ್ತು ಆ ಸಂಬಂಧದಲ್ಲಿ ಕಲೆಕ್ಟರನು ಮಾಡಬಹುದಾದ ಇತರ ಯಾವುದೇ ಆಜ್ಞೆಯನ್ನು ಮಾಡಬಹುದು.

**೧೦೦. ಅವಸರದ ಪ್ರಸಂಗದಲ್ಲಿ ಕೆಲಸ ಮಾಡುವದು.**

(೧) ಯಾವ ಕೆಲಸವನ್ನು ಅಥವಾ ಕೃತಿಯನ್ನು ಮಾಡಲಿಕ್ಕೆ ಪಂಚಾಯತಿಗೆ ಅಧಿಕಾರವಿದೆಯೋ ಮತ್ತು ಅದನ್ನು ಕೂಡಲೆ ಮಾಡುವದು ಕಲೆಕ್ಟರನ ಅಭಿಪ್ರಾಯದಲ್ಲಿ ಜನರ ಆರೋಗ್ಯದ ಅಥವಾ ಸುರಕ್ಷತೆಯ ಸಲುವಾಗಿ ಅವಶ್ಯವಿರುವದೋ ಅಂಥ ಯಾವುದೇ ಕೆಲಸವನ್ನು ಅಥವಾ ಕೃತಿಯನ್ನು ಅವಸರದ ಪ್ರಸಂಗಗಳಲ್ಲಿ ಮಾಡುವ ಬಗ್ಗೆ ಅವನು ವ್ಯವಸ್ಥೆ ಮಾಡಬಹುದು, ಮತ್ತು ಇಂಥ ಕೆಲಸವನ್ನು ಅಥವಾ ಕೃತಿಯನ್ನು ಮಾಡುವ ವೆಚ್ಚವನ್ನು ಆ ಪಂಚಾಯತವು ಕೂಡಲೆ ಕೊಡಬೇಕೆಂದು ಆಜ್ಞೆ ವಿಧಿಸ ಬಹುದು.

(೨) ಸದರ ಖರ್ಚು ಕೊಡಲ್ಪಡದಿದ್ದರೆ, ಕಲೆಕ್ಟರನು, ಯಾವ ಟ್ರೇಝರಿಯಲ್ಲಿ ಗ್ರಾಮದ ಫಂಡು ಇಡಲ್ಪಟ್ಟಿದೆಯೋ ಆ ಟ್ರೇಝರಿಯು

ಸ್ವಾಧೀನದಲ್ಲಿದ್ದ ಅಧಿಕಾರಿಗೆ ಇಂಥ ವೆಚ್ಚವನ್ನು ಅಥವಾ ಅದರಪೈಕಿ ಶಕ್ಯವಿದ್ದಷ್ಟು ಭಾಗವನ್ನು ಇಂಥ ಫಂಡಿನಪೈಕಿ ಅವನ ಕೈಯಲ್ಲಿರುವ ಶಿಲ್ಕಿನೊಳಗಿಂದ ಕೊಡಲಿಕ್ಕೆ ಆಜ್ಞೆಮಾಡಬಹುದು.

(೩) ಕಲೆಕ್ಟರನು ತಾನು ೧ನೇ ಉಪಕಲಮಿನನ್ವಯ ಯಾವ ಪ್ರಕರಣದಲ್ಲಿ ಅಧಿಕಾರ ಉಪಯೋಗಿಸಿರುವನೋ ಅಂಥ ಪ್ರತಿಯೊಂದು ಪ್ರಕರಣದ ಸಂಬಂಧ ಕಮಿಶನರನಿಗೆ ರಿಪೋರ್ಟ ಮಾಡಬೇಕು.

**೧೦೧. ಕರ್ತವ್ಯವನ್ನು ಮಾಡುವದರಲ್ಲಿ ತಪ್ಪುವದು.**

(೧) ಪಂಚಾಯತವು, ೨೬ನೇ ಕಲಮಿನಲ್ಲಿ ಹೇಳಿದ ಯಾವುದೇ ಕರ್ತವ್ಯವನ್ನು ಮಾಡುವದರಲ್ಲಿ ತಪ್ಪಿರುವದೆಂದು, ಜಿಲ್ಹಾ ಲೋಕಲ್ ಬೋರ್ಡಿಗೆ ಯಾವುದೇ ಕಾಲಕ್ಕೆ ತೋರಿದರೆ, ಅದು ಆ ಕರ್ತವ್ಯವನ್ನು ನಿರ್ದಿಷ್ಟಪಡಿಸಿದ ಅವಧಿಯಲ್ಲಿ ಮಾಡಬೇಕೆಂದು ಜಿಲ್ಹಾ ಲೋಕಲ್ ಬೋರ್ಡು ಆಜ್ಞೆ ಮಾಡಬಹುದು, ಮತ್ತು ಆ ಕರ್ತವ್ಯವು ನಿರ್ದಿಷ್ಟಪಡಿಸಿದ ಅವಧಿಯಲ್ಲಿ ಮಾಡಲ್ಪಡದಿದ್ದರೆ, ಜಿಲ್ಹಾ ಲೋಕಲ್ ಬೋರ್ಡು ಅದನ್ನು ಮಾಡುವದಕ್ಕೆ ಯಾವನೊಬ್ಬ ಮನುಷ್ಯನನ್ನು ನೇಮಿಸಬಹುದು; ಮತ್ತು ಅದನ್ನು ಮಾಡುವ ವೆಚ್ಚವನ್ನು, ಜಿಲ್ಹಾ ಲೋಕಲ್ ಬೋರ್ಡು ಗೊತ್ತು ಮಾಡಬಹುದಾದ ಅವಧಿಯಲ್ಲಿ ಆ ತಪ್ಪುಮಾಡಿದ ಪಂಚಾಯತವು ಕೊಡಬೇಕೆಂದು ಆಜ್ಞೆ ಮಾಡಬಹುದು.

(೨) ಈ ವೆಚ್ಚವು ಕೊಡಲ್ಪಡದಿದ್ದರೆ, ಗ್ರಾಮದ ಫಂಡು ಸ್ವಾಧೀನದಲ್ಲಿದ್ದ ಮನುಷ್ಯನಿಗೆ ಇಂಥ ವೆಚ್ಚವನ್ನು ಅಥವಾ ಅದರಪೈಕಿ ಶಕ್ಯವಿದ್ದಷ್ಟು ಭಾಗವನ್ನು ಇಂಥ ಫಂಡಿನಪೈಕಿ ಅವನ ಕೈಯಲ್ಲಿರುವ ಶಿಲ್ಕಿನೊಳಗಿಂದ ಕೊಡಲಿಕ್ಕೆ ಜಿಲ್ಹಾ ಲೋಕಲ್ ಬೋರ್ಡು ಆಜ್ಞೆಮಾಡಬಹುದು.

(೨ ಅ) ೨೬ನೇ ಕಲಮಿನಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಕರ್ತವ್ಯವನ್ನು ಮಾಡಲಿಕ್ಕೆ ಯಾವದೊಂದು ಪಂಚಾಯತವು ತಪ್ಪಿರುವದೆಂದು ಮತ್ತು ೧ನೇ ಉಪಕಲಮಿನನ್ವಯ ಕೆಲಸ ನಡಿಸಲು ಜಿಲ್ಹಾ ಲೋಕಲ್ ಬೋರ್ಡು ತಪ್ಪಿರುವದೆಂದು ಅಥವಾ ತಾತ್ಸಾರ ಮಾಡಿರುವರೆಂದು ಯಾವುದೇ ಕಾಲಕ್ಕೆ

ಪ್ರಾಂತಿಕ ಸರಕಾರದವರಿಗೆ, ಅಥವಾ ಪ್ರಾಂತಿಕ ಸರಕಾರದವರಿಂದ ಈ ಬಗ್ಗೆ ಅಧಿಕಾರಪಡೆದ ಯಾವನೇ ಅಧಿಕಾರಿಗೆ ಕಂಡುಬಂದರೆ, ಪ್ರಸಂಗಾನುಸಾರ, ಪ್ರಾಂತಿಕ ಸರಕಾರದವರು, ಅಥವಾ ಸದರೀ ಅಧಿಕಾರಿಯು ೧ನೇ ಮತ್ತು ೨ನೇ ಉಪಕಲಮುಗಳನ್ವಯ ಜಿಲ್ಹಾ ಲೋಕಲ್ ಬೋರ್ಡು ನಡಿಸ ಬಹುದಾಗಿಪ್ಪ ಕೆಲಸವನ್ನು ನಡಿಸಬಹುದು.

(೩) ಈ ಕಲಮಿನನ್ವಯ ಉಂಟಾಗುವ ಪ್ರತಿಯೊಂದು ಪ್ರಕರ್ಣದ ಬಗ್ಗೆ ಪ್ರಸಂಗಾನುಸಾರ, ಜಿಲ್ಹಾ ಲೋಕಲ್ ಬೋರ್ಡು ಅಥವಾ ಅಧಿಕಾರ ಪಡೆದ ಅಧಿಕಾರಿಯು ಕಮಿಶನರನಿಗೆ ಕೂಡಲೆ ರೀಪೋರ್ಟು ಮಾಡಬೇಕು, ಮತ್ತು ಕಮಿಶನರನು ಅದರಲ್ಲಿ ಮಾಡಿದ ಯಾವುದೇ ಆಜ್ಞೆಯನ್ನು ತಿದ್ದ ಬಹುದು ಅಥವಾ ಬದಲಿಸಬಹುದು ಮತ್ತು ಈ ಸಂಬಂಧದಲ್ಲಿ ಜಿಲ್ಹಾ ಲೋಕಲ್ ಬೋರ್ಡು ಮಾಡಬಹುದಾಗಿಪ್ಪ ಇತರ ಯಾವುದೇ ಆಜ್ಞೆಯನು ಮಾಡಬಹುದು.

**೧೦೨. ತಪ್ಪಿಗಾಗಿ ಪಂಚಾಯತನ್ನು ವಿಸರ್ಜಿಸುವದು ಅಥವಾ ರದ್ದು ಮಾಡುವದು.**

(೧) ಯಾವುದೊಂದು ಪಂಚಾಯತವು ತನ್ನ ಅಧಿಕಾರಗಳನ್ನು ಮೀರಿ ನಡೆಯುತ್ತಿದೆ, ಅಥವಾ ಅವುಗಳ ದುರುಪಯೋಗ ಮಾಡುತ್ತಿದೆ, ಅಥವಾ ೨೬ನೇ ಕಲಮಿನನ್ವಯ ಅಥವಾ ಆಯಾ ಕಾಲಕ್ಕೆ ಅಮಲಿನಲ್ಲಿರುವ ಇತರ ಯಾವುದೇ ಕಾನೂನಿನನ್ವಯ ಅದಕ್ಕೆ ಕೊಡಲ್ಪಟ್ಟ ಕರ್ತವ್ಯಗಳನ್ನು ಮಾಡುವದರಲ್ಲಿ ಒಂದೇಸವನೆ ತಪ್ಪು ಮಾಡುತ್ತಿದೆ ಅಥವಾ ೮೯ನೇ ಕಲಮಿನ ೧ನೇ ಅಥವಾ ೨ ಅ ಉಪಕಲಮಿನನ್ವಯ ಯಾವುದೇ ಕರವನ್ನು ಹೇರಲು ತಪ್ಪುತ್ತಿದೆ, ಅಥವಾ ೯೯ನೇ ಕಲಮಿನನ್ವಯ ಕಲೆಕ್ಟರನ ಅಥವಾ ಕಮಿಶ ನರನ ಆಜ್ಞೆಗಳನ್ನು ಒಂದೇ ಸವನೆ ಅಮಾನ್ಯ ಮಾಡುತ್ತದೆ ಎಂದು ಪ್ರಾಂತಿಕ ಸರಕಾರದವರ ಅಭಿಪ್ರಾಯವಾದಲ್ಲಿ, ಅವರು ಜಿಲ್ಹಾ ಲೋಕಲ್ ಬೋರ್ಡಿನ ಸಲಹೆಕೇಳಿ, ಸರಕಾರಿ ಗ್ಯಾಝೇಟಿನಲ್ಲಿ ಒಂದು ಆಜ್ಞೆ ಹೊರಡಿಸಿ,

(೧) ಇಂಥ ಪಂಚಾಯತನ್ನು ವಿಸರ್ಜಿಸಬಹುದು, ಅಥವಾ

(೨) ಆ ಆಜ್ಞೆಯಲ್ಲಿ ವಿವರಿಸಿದ ಅವಧಿಯವರೆಗೆ ಇಂಥ ಪಂಚಾಯತನ್ನು ರದ್ದು ಗೊಳಿಸಬಹುದು.

(೩) ಪಂಚಾಯತವು ವಿಸರ್ಜಿಸಲ್ಪಟ್ಟಾಗ್ಗೆ ಅಥವಾ ರದ್ದುಗೊಳಿಸಲ್ಪಟ್ಟಾಗ್ಗೆ, ಆ ಆಜ್ಞೆಯಲ್ಲಿ ವಿವರಿಸಿದ ತಾರೀಖಿನಿಂದ ಪಂಚಾಯತದ ಎಲ್ಲ ಸಭಾಸದರು ತಮ್ಮ ಅಧಿಕಾರಸ್ಥಾನಗಳನ್ನು ಬಿಟ್ಟು ಕೊಡಬೇಕು.

(೪) ಪಂಚಾಯತವು ವಿಸರ್ಜಿಸಲ್ಪಟ್ಟಾಗ್ಗೆ, ಅದರ ಪುನರ್ರಚನೆಯು, ಈ ಕಾನೂನಿನಲ್ಲಿ ಠರಾಯಿಸಲ್ಪಟ್ಟ ರೀತಿಯಲ್ಲಿ ಆಗಬೇಕು.

(೫) ಪಂಚಾಯತವು ರದ್ದುಗೊಳಿಸಲ್ಪಟ್ಟರೆ,

ಅ] ಪಂಚಾಯತದ ಎಲ್ಲ ಅಧಿಕಾರಗಳು ಮತ್ತು ಕರ್ತವ್ಯಗಳು, ಪಂಚಾಯತವು ರದ್ದುಗೊಳಿಸಲ್ಪಟ್ಟ ಅವಧಿಯಲ್ಲಿ, ಪ್ರಾಂತಿಕ ಸರಕಾರದವರು ಆ ಬಗ್ಗೆ ಕಾಲಕಾಲಕ್ಕೆ ನೇಮಿಸಬಹುದಾದ ಮನುಷ್ಯನಿಂದ ಅಥವಾ ಮನುಷ್ಯರಿಂದ ಉಪಯೋಗಿಸಲ್ಪಡಬೇಕು ಮತ್ತು ಮಾಡಲ್ಪಡಬೇಕು, ಮತ್ತು

ಬ] ಪಂಚಾಯತದ ವಶದಲ್ಲಿದ್ದ ಎಲ್ಲ ಆಸ್ತಿಯು, ಅದು ರದ್ದುಗೊಳಿಸಲ್ಪಟ್ಟ ಅವಧಿಯಲ್ಲಿ ಪ್ರಾಂತಿಕ ಸರಕಾರದವರ ವಶದಲ್ಲಿ ಉಳಿಯುವದು, ಮತ್ತು

ಕ] ಪಂಚಾಯತವು, ಯಾವ ಅವಧಿಯವರೆಗೆ ರದ್ದುಗೊಳಿಸಲ್ಪಟ್ಟಿರುವದೋ ಆ ಅವಧಿಯು ಮುಗಿದನಂತರ, ಈ ಕಾನೂನಿನಲ್ಲಿ ಠರಾಯಿಸಲ್ಪಟ್ಟ ರೀತಿಯಲ್ಲಿ ಪುನಃ ರಚಿಸಲ್ಪಡಬೇಕು, ಮತ್ತು ಅಧಿಕಾರ ಸ್ಥಾನಗಳನ್ನು ಬಿಟ್ಟು ಕೊಟ್ಟ ಜನರು ಪುನಃ ಚುನಾಯಿತರಾಗಲಿಕ್ಕೆ ಅಥವಾ ನೇಮಿಸಲ್ಪಡಲಿಕ್ಕೆ ಅರ್ಹರಿರುವರು.

**೧೦೩. ಗ್ರಾಮದ ಮೇರೆಗಳಲ್ಲಿ ಬದಲಾವಣೆಯಾದ ಬಳಿಕ ಪಂಚಾಯತನ್ನು ವಿಸರ್ಜಿಸುವದು ಮತ್ತು ಅದನ್ನು ಪುನರ್ರಚಿಸುವದು.**

(೧) ಪಂಚಾಯತದ ಅಧಿಕಾರಾವಧಿಯಲ್ಲಿ, ಗ್ರಾಮದ ಮೇರೆಗಳಲ್ಲಿ ಬದಲಾವಣೆಯಾದರೆ, ಕಲೆಕ್ಟರನು ಲೇಖಿಆಜ್ಞೆಯಿಂದ ಇಂಥ ಪಂಚಾಯತನ್ನು ವಿಸರ್ಜಿಸಬಹುದು, ಮತ್ತು

(i) ಯಾವ ಗ್ರಾಮದ ಪಂಚಾಯತವು ವಿಸರ್ಜಿಸಲ್ಪಟ್ಟಿದೆಯೋ ಆ ಗ್ರಾಮದಬಗ್ಗೆ ಒಂದು ಪಂಚಾಯತದ ಪುನರ್ರಚನೆಯಾಗಬೇಕೆಂದು, ಅಥವಾ

(ii) ಹೊಸದಾಗಿ ಜಾಹೀರಮಾಡಲ್ಪಟ್ಟ ಗ್ರಾಮದ ಬಗ್ಗೆ, ಒಂದು ಪಂಚಾಯತವು ಸ್ಥಾಪಿಸಲ್ಪಡಬೇಕೆಂದು, ವಿಧಿಸಬಹುದು,

ವಿಸರ್ಜಿಸಲ್ಪಟ್ಟ ಪಂಚಾಯತದ ಸಭಾಸದರು, ಆಜ್ಞೆಯಲ್ಲಿ ವಿವರಿಸಲ್ಪಟ್ಟ ತಾರೀಖಿನಿಂದ ತಮ್ಮ ಅಧಿಕಾರ ಸ್ಥಾನಗಳನ್ನು ಬಿಟ್ಟು ಕೊಡಬೇಕು.

(೨) ೧ನೇ ಉಪಕಲಮಿನನ್ವಯ ಪುನರ್ರಚನೆಯಾದ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದಲ್ಲಿ, ಕಲೆಕ್ಟರನು ಲೇಖಿ ಆಜ್ಞೆಯಿಂದ ವಿಧಿಸಬಹುದಾದ ರೀತಿಯಲ್ಲಿ ಚುನಾಯಿಸಲ್ಪಟ್ಟ ಅಥವಾ ನೇಮಿಸಲ್ಪಟ್ಟ ಸಭಾಸದರಿರಬೇಕು.

ಹೀಗೆ ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಸರಪಂಚನು ಮತ್ತು ಉಪಸರಪಂಚನು ಈ ಕಾನೂನಿನಲ್ಲಿ ಠರಾಯಿಸಲ್ಪಟ್ಟ ರೀತಿಯಲ್ಲಿ ಚುನಾಯಿಸಲ್ಪಡಬೇಕು.

(೩) ಹೀಗೆ ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಅಧಿಕಾರಾವಧಿಯು, ಕಲೆಕ್ಟರನು ಲೇಖಿ ಆಜ್ಞೆಯಿಂದ ನಿರ್ದಿಷ್ಟಪಡಿಸುವ, ಒಂದು ವರ್ಷವನ್ನು ಮೀರದ, ಅವಧಿಯವರೆಗೆ ಇರುವದು.

(೪) ಪಂಚಾಯತದ ಅವಧಿಯು ೩ನೇ ಉಪಕಲಮಿನನ್ವಯ ಮುಗಿದಬಳಿಕ ಆ ಪಂಚಾಯತವು ಈ ಕಾನೂನಿನಲ್ಲಿ ಠರಾಯಿಸಲ್ಪಟ್ಟ ರೀತಿಯಲ್ಲಿ ರಚಿಸಲ್ಪಡಬೇಕು.

**೧೦೪. ವಿಸರ್ಜಿಸಲ್ಪಟ್ಟ ಪಂಚಾಯತದ ಆಸ್ತಿನೊದಲಾದದ್ದು ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತಿಯ ವಶಕ್ಕೆ ಹೋಗುವದು.**

(೧) ಯಾವದೊಂದು ಪಂಚಾಯತವು ೧೦೩ನೇ ಕಲಮಿನನ್ವಯ ವಿಸರ್ಜಿಸಲ್ಪಟ್ಟು ಪುನರ್ರಚಿಸಲ್ಪಟ್ಟಾಗ್ಗೆ ಅಥವಾ ಸ್ಥಾಪಿಸಲ್ಪಟ್ಟಾಗ್ಗೆ, ವಿಸರ್ಜಿ

ನಲ್ಪಟ್ಟ ಪಂಚಾಯತದ ಕಡೆಗಿದ್ದ ಗ್ರಾಮದ ಫಂಡಿನ ಅಥವಾ ಇತರ ಆಸ್ತಿಯ ಪೈಕಿ ಮತ್ತು ಸಾಲಗಳ ಮತ್ತು ಹೊಣೆಗಾರಿಕೆಯ ಪೈಕಿ ಕಮೀಶನರನು ಲೇಖಿ ಆಜ್ಞೆಯಿಂದ ವಿಧಿಸಬಹುದಾದಷ್ಟು ಭಾಗವು ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತಿಯ ವಶಕ್ಕೆ ಹೋಗುವದು.

(೨) ಪುನರ್ರಚಿನಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಅಧಿಕಾರ ಕ್ಷೇತ್ರದ ಯಾವುದೇ ಭಾಗದಲ್ಲಿ ಉದ್ಭವಿಸುವ ಅಥವಾ ಅದಕ್ಕೆ ಸಂಬಂಧಪಟ್ಟ ಕರಾರುಗಳ, ಒಡಂಬಡಿಕೆಗಳ ಮತ್ತು ಇತರ ವಿಷಯಗಳ ಅಥವಾ ಸಂಗತಿಗಳ ಸಂಬಂಧದಲ್ಲಿ ವಿಸರ್ಜಿಸಲ್ಪಟ್ಟ ಪಂಚಾಯತಕ್ಕೆ ಇದ್ದ ಹಕ್ಕುಗಳು ಮತ್ತು ಹೊಣೆಗಾರಿಕೆಗಳು ಇಂಥ ಪಂಚಾಯತದ ಕಡೆಗೆ ಹೋಗುವವು.

(೩) ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಅಧಿಕಾರಕ್ಷೇತ್ರದ ಯಾವದೇ ಭಾಗದ ಸಂಬಂಧದಲ್ಲಿ ಮಾಡಲ್ಪಟ್ಟ, ತೆಗೆಯ ಲ್ಪಟ್ಟ ಅಥವಾ ಕೊಡ್ರಿಸಲ್ಪಟ್ಟ ಯಾವದೇ ನೋಟೀಸು, ಕರ, ಆಜ್ಞೆ, ಲೈಸನ್ಸು, ಅಪ್ಪಣೆ, ನಿಯಮ ಅಥವಾ ಉಪನಿಯಮವು ಇಂಥ ಪಂಚಾಯತ ದಿಂದ ಅಥವಾ ಅದರ ಸಂಬಂಧದಲ್ಲಿ ಮಾಡಲ್ಪಟ್ಟ, ತೆಗೆಯಲ್ಪಟ್ಟ ಅಥವಾ ಕೊಡ್ರಿಸಲ್ಪಟ್ಟ ಯಾವದೇ ನೋಟೀಸಿನಿಂದ ಕರದಿಂದ, ಆಜ್ಞೆಯಿಂದ ಲೈಸನ್ಸಿ ನಿಂದ, ಅಪ್ಪಣೆಯಿಂದ, ನಿಯಮದಿಂದ ಅಥವಾ ಉಪನಿಯಮದಿಂದ ರದ್ದಾ ಗದ ವಿನಃ ಮತ್ತು ರದ್ದಾಗುವವರೆಗೆ ಇಂಥ ಪಂಚಾಯತದಿಂದ ಅಥವಾ ಅದರ ಸಂಬಂಧದಲ್ಲಿ ಮಾಡಲ್ಪಟ್ಟದ್ದೆಂದು, ತೆಗೆಯಲ್ಪಟ್ಟದ್ದೆಂದು ಅಥವಾ ಕೊಡ್ರಿಸಲ್ಪಟ್ಟದೆಂದು ತಿಳಿಯಲ್ಪಡತಕ್ಕದ್ದು.

**೧೦೪ ಅ. ಗ್ರಾಮದಿಂದ ಕ್ಷೇತ್ರವನ್ನು ಹೊರ್ತುಪಡಿಸಿದರ ಪರಿಣಾಮ.**

೪ನೇ ಕಲಮಿನಪ್ರಕಾರ ಜಾಹೀರ ನಾಮೆಯನ್ವಯ ಯಾವದೊಂದು ಗ್ರಾಮದ ಭಾಗವಾಗಿರುವ ಯಾವದೇ ಸ್ಥಾನಿಕ ಕ್ಷೇತ್ರವನ್ನು ಇಂಥ ಗ್ರಾಮ ದಿಂದ ಹೊರ್ತುಪಡಿಸಿದರೆ, ಮತ್ತು ಇಂಥ ಕ್ಷೇತ್ರವನ್ನು ಯಾವದೊಂದು

(i) ಯಾವ ಗ್ರಾಮದ ಪಂಚಾಯತವು ವಿಸರ್ಜಿಸಲ್ಪಟ್ಟಿದೆಯೋ ಆ ಗ್ರಾಮದಬಗ್ಗೆ ಒಂದು ಪಂಚಾಯತದ ಪುನರ್ರಚನೆಯಾಗಬೇಕೆಂದು, ಅಥವಾ

(ii) ಹೊಸದಾಗಿ ಜಾಹೀರಮಾಡಲ್ಪಟ್ಟ ಗ್ರಾಮದ ಬಗ್ಗೆ, ಒಂದು ಪಂಚಾಯತವು ಸ್ಥಾಪಿಸಲ್ಪಡಬೇಕೆಂದು, ವಿಧಿಸಬಹುದು,

ವಿಸರ್ಜಿಸಲ್ಪಟ್ಟ ಪಂಚಾಯತದ ಸಭಾಸದರು, ಆಜ್ಞೆಯಲ್ಲಿ ವಿವರಿಸಲ್ಪಟ್ಟ ತಾರೀಖಿನಿಂದ ತಮ್ಮ ಅಧಿಕಾರ ಸ್ಥಾನಗಳನ್ನು ಬಿಟ್ಟು ಕೊಡಬೇಕು.

(೨) ೧ನೇ ಉಪಕಲಮಿನನ್ವಯ ಪುನರ್ರಚನೆಯಾದ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದಲ್ಲಿ, ಕಲೆಕ್ಟರನು ಲೇಖಿ ಆಜ್ಞೆಯಿಂದ ವಿಧಿಸಬಹುದಾದ ರೀತಿಯಲ್ಲಿ ಚುನಾಯಿಸಲ್ಪಟ್ಟ ಅಥವಾ ನೇಮಿಸಲ್ಪಟ್ಟ ಸಭಾಸದರಿರಬೇಕು.

ಹೀಗೆ ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಸರಪಂಚನು ಮತ್ತು ಉಪಸರಪಂಚನು ಈ ಕಾನೂನಿನಲ್ಲಿ ಠರಾಯಿಸಲ್ಪಟ್ಟ ರೀತಿಯಲ್ಲಿ ಚುನಾಯಿಸಲ್ಪಡಬೇಕು.

(೩) ಹೀಗೆ ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಅಧಿಕಾರಾವಧಿಯು, ಕಲೆಕ್ಟರನು ಲೇಖಿ ಆಜ್ಞೆಯಿಂದ ನಿರ್ದಿಷ್ಟಪಡಿಸುವ, ಒಂದು ವರ್ಷವನ್ನು ಮೀರದ, ಅವಧಿಯವರೆಗೆ ಇರುವದು.

(೪) ಪಂಚಾಯತದ ಅವಧಿಯು ೩ನೇ ಉಪಕಲಮಿನನ್ವಯ ಮುಗಿದಬಳಿಕ ಆ ಪಂಚಾಯತವು ಈ ಕಾನೂನಿನಲ್ಲಿ ಠರಾಯಿಸಲ್ಪಟ್ಟ ರೀತಿಯಲ್ಲಿ ರಚಿಸಲ್ಪಡಬೇಕು.

**೧೦೪. ವಿಸರ್ಜಿಸಲ್ಪಟ್ಟ ಪಂಚಾಯತದ ಆಸ್ತಿಮೊದಲಾದದ್ದು ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತಿಯ ವಶಕ್ಕೆ ಹೋಗುವದು.**

(೧) ಯಾವದೊಂದು ಪಂಚಾಯತವು ೧೦೩ನೇ ಕಲಮಿನನ್ವಯ ವಿಸರ್ಜಿಸಲ್ಪಟ್ಟು ಪುನರ್ರಚಿಸಲ್ಪಟ್ಟಾಗ್ಗೆ ಅಥವಾ ಸ್ಥಾಪಿಸಲ್ಪಟ್ಟಾಗ್ಗೆ, ವಿಸರ್ಜಿ

ಸಲ್ಪಟ್ಟ ಪಂಚಾಯತದ ಕಡೆಗಿದ್ದ ಗ್ರಾಮದ ಫಂಡಿನ ಅಥವಾ ಇತರ ಆಸ್ತಿಯ ಪೈಕಿ ಮತ್ತು ಸಾಲಗಳ ಮತ್ತು ಹೊಣೆಗಾರಿಕೆಯ ಪೈಕಿ ಕಮಿಶನರನು ಲೇಖಿ ಆಜ್ಞೆಯಿಂದ ವಿಧಿಸಬಹುದಾದಷ್ಟು ಭಾಗವು ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತಿಯ ವಶಕ್ಕೆ ಹೋಗುವದು.

(೨) ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಅಧಿಕಾರ ಕ್ಷೇತ್ರದ ಯಾವುದೇ ಭಾಗದಲ್ಲಿ ಉದ್ಭವಿಸುವ ಅಥವಾ ಅದಕ್ಕೆ ಸಂಬಂಧಪಟ್ಟ ಕರಾರುಗಳ, ಒಡಂಬಡಿಕೆಗಳ ಮತ್ತು ಇತರ ವಿಷಯಗಳ ಅಥವಾ ಸಂಗತಿಗಳ ಸಂಬಂಧದಲ್ಲಿ ವಿಸರ್ಜಿಸಲ್ಪಟ್ಟ ಪಂಚಾಯತಕ್ಕೆ ಇದ್ದ ಹಕ್ಕುಗಳು ಮತ್ತು ಹೊಣೆಗಾರಿಕೆಗಳು ಇಂಥ ಪಂಚಾಯತದ ಕಡೆಗೆ ಹೋಗುವವು.

(೩) ಪುನರ್ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಅಧಿಕಾರಕ್ಷೇತ್ರದ ಯಾವದೇ ಭಾಗದ ಸಂಬಂಧದಲ್ಲಿ ಮಾಡಲ್ಪಟ್ಟ, ತೆಗೆಯಲ್ಪಟ್ಟ ಅಥವಾ ಕೊಡ್ರಿಸಲ್ಪಟ್ಟ ಯಾವದೇ ನೋಟೀಸು, ಕರ, ಆಜ್ಞೆ, ಲೈಸನ್ಸು, ಅಪ್ಪಣೆ, ನಿಯಮ ಅಥವಾ ಉಪನಿಯಮವು ಇಂಥ ಪಂಚಾಯತ ದಿಂದ ಅಥವಾ ಅದರ ಸಂಬಂಧದಲ್ಲಿ ಮಾಡಲ್ಪಟ್ಟ, ತೆಗೆಯಲ್ಪಟ್ಟ ಅಥವಾ ಕೊಡ್ರಿಸಲ್ಪಟ್ಟ ಯಾವದೇ ನೋಟೀಸಿನಿಂದ ಕರದಿಂದ, ಆಜ್ಞೆಯಿಂದ ಲೈಸನ್ಸಿ ನಿಂದ, ಅಪ್ಪಣೆಯಿಂದ, ನಿಯಮದಿಂದ ಅಥವಾ ಉಪನಿಯಮದಿಂದ ರದ್ದಾಗದ ವಿನಃ ಮತ್ತು ರದ್ದಾಗುವವರೆಗೆ ಇಂಥ ಪಂಚಾಯತದಿಂದ ಅಥವಾ ಅದರ ಸಂಬಂಧದಲ್ಲಿ ಮಾಡಲ್ಪಟ್ಟದ್ದೆಂದು, ತೆಗೆಯಲ್ಪಟ್ಟದ್ದೆಂದು ಅಥವಾ ಕೊಡ್ರಿಸಲ್ಪಟ್ಟದೆಂದು ತಿಳಿಯಲ್ಪಡತಕ್ಕದ್ದು.

**೧೦೪ ಅ. ಗ್ರಾಮದಿಂದ ಕ್ಷೇತ್ರವನ್ನು ಹೊರ್ತುಪಡಿಸಿದ್ದರ ಪರಿಣಾಮ.**

೪ನೇ ಕಲಮಿನಪ್ರಕಾರ ಜಾಹೀರ ನಾಮೆಯನ್ವಯ ಯಾವದೊಂದು ಗ್ರಾಮದ ಭಾಗವಾಗಿರುವ ಯಾವದೇ ಸ್ಥಾನಿಕ ಕ್ಷೇತ್ರವನ್ನು ಇಂಥ ಗ್ರಾಮ ದಿಂದ ಹೊರ್ತುಪಡಿಸಿದರೆ, ಮತ್ತು ಇಂಥ ಕ್ಷೇತ್ರವನ್ನು ಯಾವದೊಂದು

ಗ್ರಾಮದಲ್ಲಿ ಸೇರಿಸದಿದ್ದರೆ ಅಥವಾ ಅದು ಗ್ರಾಮವಿರುತ್ತದೆಂದು ಜಾಹೀರ ಮಾಡದಿದ್ದರೆ, ಇಂಥ ಕ್ಷೇತ್ರವು ಯಾವ ಗ್ರಾಮದ ಭಾಗವಾಗಿತ್ತೋ ಅಂಥ ಗ್ರಾಮದ ಪಂಚಾಯತದ ಕಡೆಗಿದ್ದ ಗ್ರಾಮದ ಫಂಡಿನಲ್ಲಿ ಮತ್ತು ಆಸ್ತಿಯಲ್ಲಿ ಕಮಿಶನರನು ಲೇಖಿ ಆಜ್ಞೆಯಿಂದ ವಿಧಿಸಬಹುದಾದಷ್ಟು ಭಾಗವು, ಜಿಲ್ಹಾ ಲೋಕಲ್ ಬೋರ್ಡಿಗೆ ಯೋಗ್ಯ ತೋರುವಂತೆ ಸದರಿ ಕ್ಷೇತ್ರದ ಹಿತದ ಸಲುವಾಗಿ ಉಪಯೋಗಿಸಲ್ಪಡುವದಕ್ಕೆ ಜಿಲ್ಹಾ ಲೋಕಲ್ ಬೋರ್ಡಿನ ವಶಕ್ಕೆ ಹೋಗುವದು.

**೧೦೫. ಯಾವದೊಂದು ಪ್ರದೇಶವು ಗ್ರಾಮವೆಂದು ಇರುವದು ನಿಂತು ಹೋದದ್ದರ ಪರಿಣಾಮವು**

೪ನೇ ಕಲಮಿನನ್ವಯದ ಯಾವದೊಂದು ಜಾಹೀರ ಪ್ರಕಟನೆಯ ಮೂಲಕ ಯಾವದೊಂದು ಪ್ರದೇಶವು ಗ್ರಾಮವಿರುವದು ನಿಂತುಹೋದ ಬಳಿಕ,

ಅ] ಸದರ ಪಂಚಾಯತವು ವಿಸರ್ಜಿಸಲ್ಪಡಬೇಕು, ಮತ್ತು ಪಂಚಾಯತದ ಎಲ್ಲ ಸಭಾಸದರು ಸದರಿ ಜಾಹೀರ ಪ್ರಕಟನೆಯ ತಾರೀಖಿನಿಂದ ತಮ್ಮ ಅಧಿಕಾರಸ್ಥಾನಗಳನ್ನು ಬಿಟ್ಟು ಕೊಡಬೇಕು.

ಬ] ಗ್ರಾಮದ ಫಂಡಿನಲ್ಲಿ ವೆಚ್ಚವಾಗದೆ ಉಳಿದ ರಕಮು ಮತ್ತು ಪಂಚಾಯತದ ವಶದಲ್ಲಿದ್ದ ಆಸ್ತಿಯು, ಜಿಲ್ಹಾ ಲೋಕಲ್ ಬೋರ್ಡಿಗೆ ಯೋಗ್ಯ ತೋರಿದಂತೆ ಸದರಿ ಪ್ರದೇಶದ ನಿವಾಸಿಗಳ ಹಿತಕ್ಕಾಗಿ ಉಪಯೋಗಿಸಲ್ಪಡುವದಕ್ಕಾಗಿ ಜಿಲ್ಹಾ ಲೋಕಲ್ ಬೋರ್ಡಿನ ವಶಕ್ಕೆ ಹೋಗುವದು.

**೧೦೬. ನ್ಯಾಯಪಂಚಾಯತಗಳಮೇಲೆ ಮತ್ತು ಅವುಗಳಮುಂದೆ ಚಾಲೂ ಇದ್ದ ಪ್ರಕರಣಗಳಮೇಲೆ, ಪಂಚಾಯತವು ವಿಸರ್ಜಿಸಲ್ಪಟ್ಟಿದ್ದರಿಂದ ಅಥವಾ ರದ್ದುಮಾಡಲ್ಪಟ್ಟಿದ್ದರಿಂದ ಅಥವಾ ನ್ಯಾಯ ಪಂಚಾಯತಿಯು ನ್ಯಾಯದಾನದ ಅಧಿಕಾರವನ್ನು ಹಿಂತೆಗೆದುಕೊಂಡ ಮೂಲಕ ಆಗುವ ಪರಿಣಾಮವು.**

(೧) ೧೦೨, ೧೦೩ ಅಥವಾ ೧೦೫ನೇ ಕಲಮಿನನ್ವಯ ಯಾವದೊಂದು ಪಂಚಾಯತವು ವಿಸರ್ಜಿಸಲ್ಪಟ್ಟಾಗ್ಗೆ ಅಥವಾ ರದ್ದುಗೊಳಿಸಲ್ಪಟ್ಟಾಗ್ಗೆ

ಯಾವ ಗ್ರಾಮದಬಗ್ಗೆ ಪಂಚಾಯತವು ಸ್ಥಾಪಿಸಲ್ಪಟ್ಟಿತ್ತೋ ಆ ಗ್ರಾಮದ ನ್ಯಾಯಪಂಚಾಯತವು ಅಥವಾ ಯಾವದೊಂದು ನ್ಯಾಯಪಂಚಾಯತಿಯ ನ್ಯಾಯದಾನದ ಎಲ್ಲ ಅಧಿಕಾರಗಳು ೩೭ನೇ ಕಲಮಿನ ೨ನೇ ಉಪಕಲಮಿನನ್ವಯ ಹಿಂತೆಗೆದುಕೊಳ್ಳಲ್ಪಟ್ಟಾಗ್ಗೆ ಇಂಥ ನ್ಯಾಯಪಂಚಾಯತವು ವಿಸರ್ಜಿಸಲ್ಪಟ್ಟಿದೆಯೆಂದು ತಿಳಿಯತಕ್ಕದ್ದು, ಮತ್ತು ನ್ಯಾಯಪಂಚಾಯತಿಯ ಎಲ್ಲ ಸಭಾಸದರು ಪ್ರಸಂಗಾನುಸಾರ, ವಿಸರ್ಜಿಸಲ್ಪಟ್ಟ, ಅಥವಾ ರದ್ದುಗೊಳಿಸಲ್ಪಟ್ಟ ಅಥವಾ ನ್ಯಾಯದಾನದ ಅಧಿಕಾರಗಳು ಹಿಂತೆಗೆದುಕೊಳ್ಳಲ್ಪಟ್ಟ ತಾರೀಖಿನಿಂದ ತಮ್ಮ ಅಧಿಕಾರಸ್ಥಾನಗಳನ್ನು ಬಿಟ್ಟು ಕೊಡಬೇಕು.

(೨) ೧ನೇ ಉಪಕಲಮಿನನ್ವಯ ನ್ಯಾಯಪಂಚಾಯತವು ವಿಸರ್ಜಿಸಲ್ಪಟ್ಟಾಗ್ಗೆ

(i) ೮೭ನೇ ಕಲಮಿನ ೨ನೇ ಮತ್ತು ೩ನೇ ಉಪಕಲಮುಗಳ ಠರಾವುಗಳು, ಪ್ರಸಂಗಾನುಸಾರ, ಜಿಲ್ಹಾ ಕೋರ್ಟ ಅಥವಾ ಜಿಲ್ಹಾ ಮ್ಯಾಜಿಸ್ಟ್ರೇಟನು ೮೭ನೇ ಕಲಮಿನ ೧ನೇ ಉಪಕಲಮಿನನ್ವಯ ಇಂಥ ದಾವೆ ಅಥವಾ ಖಟ್ಲೆಗಳನ್ನು ತೆಗೆದುಹಾಕುವ ಸಂಬಂಧದಲ್ಲಿ ಆಜ್ಞೆಮಾಡಿದ್ದರೆ ಹೇಗೋ ಹಾಗೆ, ನ್ಯಾಯಪಂಚಾಯತಿಯ ಮುಂದೆ ನಡೆದಿರುವ ಯಾವವೇ ದಾವೆಗಳಿಗೆ ಅಥವಾ ಖಟ್ಲೆಗಳಿಗೆ ಅನ್ವಯಿಸುವವು.

(ii) ಎಲ್ಲ ಚಾಲೂ ಪ್ರಕರ್ಣಗಳು ಮತ್ತು ಹುಕುಮನಾವೆಗಳ ಅಥವಾ ದಾವೆಗಳೊಳಗಿನ ಆಜ್ಞೆಗಳ ಅಮಲಬಜಾವಣಿಯ ಸಂಬಂಧದ ಮತ್ತು ಖಟ್ಲೆಗಳೊಳಗಿನ ದಂಡಗಳನ್ನು ಮತ್ತು ಪರಿಹಾರಧನವನ್ನು ವಸೂಲ ಮಾಡುವ ಸಂಬಂಧದ ಅರ್ಜಿಗಳು, ಸದರಿ ನ್ಯಾಯಪಂಚಾಯತವು ಸ್ಥಾಪಿಸಲ್ಪಡದಿದ್ದರೆ, ಸದರೀ ದಾವೆಗಳ ಮತ್ತು ಖಟ್ಲೆಗಳ ವಿಚಾರಣೆ ಮಾಡುವ ಅಧಿಕಾರವು ಯಾರಿಗೆ ಇರುತ್ತಿತ್ತೋ, ಪ್ರಸಂಗಾನುಸಾರ, ಅಂಥ ಸಬಾರ್ಡಿನೇಟ ಜಜ್ಜನ ಅಥವಾ ಮ್ಯಾಜಿಸ್ಟ್ರೇಟನ ಕೋರ್ಟಿಗೆ ವರ್ಗಾಯಿಸಲ್ಪಡಬೇಕು; ಮತ್ತು ಪ್ರಸಂಗಾನುಸಾರ, ಇಂಥ ಸಬಾರ್ಡಿನೇಟ ಜಜ್ಜನು ಅಥವಾ ಮ್ಯಾಜಿಸ್ಟ್ರೇಟನು ಇಂಥ ಚಾಲೂ ಪ್ರಕರ್ಣಗಳ ಮತ್ತು ಅರ್ಜಿಗಳ ವ್ಯವಸ್ಥೆಯನ್ನು, ಯಾತರಿಂದ ಇಂಥ ಚಾಲೂ ಪ್ರಕರ್ಣಗಳು ಅಥವಾ ಅರ್ಜಿಗಳು ಉದ್ಭವಿಸಿ

ರುವವ್ರೋ ಅಂಥ ದಾವೆಯ ಅಥವಾ ಖಟ್ಲೆಯ ವಿಚಾರಣೆಯನ್ನು ಮತ್ತು ನಿಕಾಲೆಯನ್ನು ಇಂಥ ಸಬಾರ್ಡಿನೇಟ ಜಜ್ಜನು ಅಥವಾ ಮ್ಯಾಜಿಸ್ಟ್ರೇಟನು ಮಾಡಬಹುದಾಗಿತ್ತೊ, ಹಾಗೆ, ಮಾಡಬೇಕು.

(೩) ಯಾವದೊಂದು ಸ್ಥಾನಿಕ ಕ್ಷೇತವು ಯಾವದೊಂದು ಗ್ರಾಮ ದಿಂದ ಹೊರ್ತುಪಡಿಸಲ್ಪಟ್ಟಿದ್ದರೆ, ಮತ್ತು ಹೀಗೆ ಹೊರ್ತುಪಡಿಸಲ್ಪಟ್ಟ ಕ್ಷೇತ್ರದಬಗ್ಗೆ ಯಾವುದೇ ಪಂಚಾಯತವು ರಚಿಸಲ್ಪಡದಿದ್ದರೆ, ೨ನೇ ಉಪ ಕಲಮಿನ ಠರಾವುಗಳು, ಸಾಧ್ಯವಿದ್ದಮಟ್ಟಿಗೆ, ಸದರೀ ಕ್ಷೇತ್ರಕ್ಕೆ ಸಂಬಂಧಿಸಿದ ನ್ಯಾಯಪಂಚಾಯತದ ಮುಂದೆ ನಡೆದಿರಬಹುದಾದ ಯಾವವೇ ದಾವೆಗಳ, ಖಟ್ಲೆಗಳ, ಪ್ರಕರ್ಣಗಳ ಅಥವಾ ಅರ್ಜಿಗಳ ವಿಷಯದಲ್ಲಿ, ಇಂಥ ದಾವೆ ಗಳಿಗೆ, ಖಟ್ಲೆಗಳಿಗೆ, ಪ್ರಕರ್ಣಗಳಿಗೆ ಮತ್ತು ಅರ್ಜಿಗಳಿಗೆ ಸಂಬಂಧವಿದ್ದ ಮಟ್ಟಿಗೆ, ನ್ಯಾಯಪಂಚಾಯತವು ವಿಸರ್ಜಿಸಲ್ಪಟ್ಟಿದ್ದರೆ ಹೇಗೋ ಹಾಗೆ, ಅನ್ವಯಿಸುವವು.

**೧೦೭. ಪ್ರಾಂತಿಕ ಸರಕಾರದವರ ಅಧಿಕಾರ.**

(೧) ೧೯೨೩ನೇ ಇಸ್ವಿಯ ಮುಂಬಯಿ ಲೋಕಲ್ ಬೋರ್ಡು ಕಾನೂನಿನನ್ವಯ ಜಿಲ್ಹಾ ಲೋಕಲ್ ಬೋರ್ಡುಗಳಮೇಲೆ ಪ್ರಾಂತಿಕ ಸರಕಾರದವರಿಗೆ ಇರುವ ಮತ್ತು ಅವರು ಉಪಯೋಗಿಸುವ ಅಧಿಕಾರ ಮತ್ತು ನಿರ್ಬಂಧಗಳೇ ಈ ಕಾನೂನಿಗೆ ಸಂಬಂಧಪಟ್ಟ ಎಲ್ಲವಿಷಯಗಳಲ್ಲಿ ಅವುಗಳ ಮೇಲೆ ಅವರಿಗೆ ಇರುವವು ಮತ್ತು ಅವರು ಅವುಗಳನ್ನು ಉಪಯೋಗಿಸು ವರು.

(೨) ಈ ಕಾನೂನಿಗೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲಿ, ಪ್ರಾಂತಿಕ ಸರಕಾರ, ಕಮಿಶನರ ಮತ್ತು ಕಲೆಕ್ಟರ ಇವರಿಗೆ, ಸಾಮಾನ್ಯ ಹಾಗೂ ಮುಲ್ಕಿ ಆಡಳಿತೆಯಲ್ಲಿ, ಅನುಕ್ರಮವಾಗಿ ಕಮಿಶನರ, ಕಲೆಕ್ಟರ ಮತ್ತು ಅವರ ಕೆಳಗಿನ ಅಧಿಕಾರಿಗಳಮೇಲೆ ಯಾವ ಅಧಿಕಾರ ಮತ್ತು ಯಾವ ನಿರ್ಬಂಧ ಇರುವದೋ, ಅದೇ ಅಧಿಕಾರವನ್ನು ಮತ್ತು ನಿರ್ಬಂಧವನ್ನು ಅವರು ಅನುಕ್ರಮವಾಗಿ ಕಮಿಶನರ, ಕಲೆಕ್ಟರ ಮತ್ತು ಅವರ ಕೆಳಗಿನ ಅಧಿಕಾರಿಗಳಮೇಲೆ ನಡೆಸಬೇಕು ಮತ್ತು ಇಡಬೇಕು.

**೧೦೭ ಅ. ಪ್ರಾಂತಿಕ ಸರಕಾರದವರು ಪ್ರಕರ್ಣಗಳ ಕಾಗದಪತ್ರಗಳನ್ನು ಬೇಡಬಹುದು.**

ಪ್ರಾಂತಿಕ ಸರಕಾರದವರು, [ನ್ಯಾಯಪಂಚಾಯತದ ಪ್ರಕರ್ಣಗಳ ಮೇಲಿನ ಅಪೀಲಿನಲ್ಲಿಯ, ಪುನರ್ವಿಚಾರಣೆಯ, ಅಥವಾ ಬರೆದು ಕಳಿಸಲ್ಪಟ್ಟ ವಿಷಯದ ನ್ಯಾಯ ವಿಚಾರಣೆಯ ಕೆಲಸಗಳ ಬಗ್ಗೆ, ಜಿಲ್ಹಾಕೋರ್ಟ ಅಥವಾ ಜಿಲ್ಹಾ ಮ್ಯಾಜಿಸ್ಟ್ರೇಟನು ನಡಿಸಿದ ಪ್ರಕರ್ಣಗಳನ್ನು ಬಿಟ್ಟು] ಯಾವನೇ ಅಧಿಕಾರಿಯು ನಡೆಸಿದ ಪ್ರಕರ್ಣಗಳ ಕಾಗದಪತ್ರಗಳನ್ನು, ವಿಧಿಸಲ್ಪಟ್ಟ ಯಾವುದೇ ಆಜ್ಞೆಯು ಕ್ರಮಬದ್ಧವಿರುವದೋ ಅಥವಾ ಯೋಗ್ಯವಿರುವದೋ ಎಂಬುದನ್ನು ಮನವರಿಕೆಮಾಡಿಕೊಳ್ಳುವ ಉದ್ದೇಶಕ್ಕಾಗಿ ಬೇಡಬಹುದು ಮತ್ತು ತಮಗೆ ಯೋಗ್ಯಕಂಡಂತೆ ಸದರ ಆಜ್ಞೆಯನ್ನು ತಿದ್ದಬಹುದು ಅಥವಾ ಬದಲಿಸಬಹುದು.



# ವಿಭಾಗ ೧೨.

## ನಿಯಮಗಳು ಮತ್ತು ಉಪನಿಯಮಗಳು.

**೧೦೮. ನಿಯಮಗಳು.**

(೧) ಪ್ರಾಂತಿಕ ಸರಕಾರದವರು, ಸರಕಾರಿ ಗ್ಯಾಝೆಟಿನಲ್ಲಿ ಜಾಹೀರ ಪ್ರಕಟನೆಯನ್ನು ಕೊಟ್ಟು, ಈ ಕೆಳಗಿನ ವಿಷಯಗಳ ಬಗ್ಗೆ ನಿಯಮಗಳನ್ನು ಮಾಡಬಹುದು—

ಅ] ೪ನೇ ಕಲಮಿನನ್ವಯ ಕಲೆಕ್ಟರನು ಮಾಡಬಹುದಾದ ವಿಚಾರಣೆಯ ರೀತಿಯನ್ನು ನಿಯಮನಗೊಳಿಸುವ ಬಗ್ಗೆ,

ಬ] ೬ನೇ ಕಲಮಿನನ್ವಯ ಪ್ರತಿಯೊಂದು ಗ್ರಾಮ ಪಂಚಾಯತಿಯಲ್ಲಿ, ಸ್ತ್ರೀಯರ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಜನಾಂಗಗಳ ಪ್ರತಿನಿಧಿಗಳ ಸಲುವಾಗಿ ಕಾದಿಡಬೇಕಾದ ಸ್ಥಳಗಳ ಸಂಖ್ಯೆಯನ್ನು ಗೊತ್ತುಪಡಿಸುವಬಗ್ಗೆ,

ಕ] ೭ನೇ ಕಲಮಿನನ್ವಯ ಸಭಾಸದರ ಚುನಾವಣೆಯನ್ನು ಹೇಗೆ ನಡಿಸಬೇಕೆಂಬ ರೀತಿಯನ್ನು ಗೊತ್ತುಪಡಿಸುವಬಗ್ಗೆ,

ಡ] ೨೪ನೇ ಕಲಮಿನನ್ವಯ ಸರಪಂಚನ, ಉಪಸರಪಂಚನ ಅಥವಾ ಪಂಚಾಯತದ ಸಭಾಸದರ ಸ್ಥಾನವು ಬರಿದಾದಬಗ್ಗೆ ಕೊಡಬೇಕಾದ ನೋಟೀಸಿನ ರೀತಿಯನ್ನು ನಿಯಮನಗೊಳಿಸುವಬಗ್ಗೆ,

ಡ೧] ೨೬ನೇ ಕಲಮಿನ ೧ನೇ ಉಪಕಲಮಿನ (ಸ) ರಕಮಿನನ್ವಯ ಆದಂಥ ರಕ್ಷಣೆಯ ವೆಚ್ಚವನ್ನು ಯಾವ ರೀತಿಯಿಂದ ಕರ ಕೂಡ್ರಿಸಿ, ಗ್ರಾಮದ ಯಾವ ವ್ಯಕ್ತಿಗಳಿಂದ ವಸೂಲ ಮಾಡಬೇಕೆಂಬುವದನ್ನು, ೨೬ ಅ, ಕಲಮಿನನ್ವಯು ಗೊತ್ತುಪಡಿಸುವಬಗ್ಗೆ,

ಈ] ೩೨ನೇ ಕಲಮಿನನ್ವಯ, ಪಂಚಾಯತವು ಪಡೆದ ಎಲ್ಲ ಫಂಡುಗಳನ್ನು ಮತ್ತು ಅದಕ್ಕೆ ಸಿಗುವ ಎಲ್ಲ ರಕಮುಗಳನ್ನು ಇಡಬೇಕಾದ ತಾಬೆಯನ್ನು ಗೊತ್ತುಪಡಿಸುವಬಗ್ಗೆ,

ಈ ೧] ೩೩ನೇ ಕಲಮಿನನ್ವಯ ಪಂಚಾಯತದ ಸೆಕ್ರೆಟರಿಯ ಅರ್ಹತೆಗಳು, ಅಧಿಕಾರಗಳು ಕರ್ತವ್ಯಗಳು, ಪ್ರತಿಫಲ ಮತ್ತು ನೌಕರಿಯ ("ಶಿಸ್ತು" ಸಂಬಂಧದ ವಿಷಯಗಳನ್ನೊಳಗೊಂಡು) ಕರಾರುಗಳು ಇವುಗಳನ್ನು ಗೊತ್ತುಪಡಿಸುವಬಗ್ಗೆ,

ಫ] ೩೬ನೇ ಕಲಮಿನನ್ವಯ ವಾರ್ಷಿಕ ಮುಂಗಡ ಪತ್ರಿಕೆಗಳನ್ನು, ಪತ್ರಕಗಳನ್ನು ಮತ್ತು ಲೆಖ್ಖಗಳನ್ನು ಸಾದರ ಪಡಿಸುವ ತಾರೀಖನ್ನು, ಅವುಗಳ ನಮೂನೆಯನ್ನು ಮತ್ತು ಗ್ರಾಮದ ರಹವಾಸಿಗಳ ಸಭೆಯನ್ನು ಕರೆಯಬೇಕಾದ ರೀತಿಯನ್ನು ಮತ್ತು ವೇಳೆಯನ್ನು ಗೊತ್ತುಪಡಿಸುವಬಗ್ಗೆ,

ಗ] ೩೭ನೇ ಕಲಮಿನನ್ವಯ ನ್ಯಾಯಪಂಚಾಯತನ್ನು ರಚಿಸುವ ಸಭಾಸದರು, ಚುನಾಯಿಸಲ್ಪಡತಕ್ಕ ರೀತಿಯನ್ನು ಗೊತ್ತುಪಡಿಸುವಬಗ್ಗೆ, ಮತ್ತು ಆ ಕಲಮಿನ ೬ನೇ ಉಪಕಲಮಿನಲ್ಲಿ ನಿರ್ದಿಷ್ಟಪಡಿಸಿದ ವಿಷಯಗಳ ಪೈಕಿ ಯಾವವೇ ವಿಷಯಗಳನ್ನು ನಿಯಮನಗೊಳಿಸುವಬಗ್ಗೆ,

ಗ ಗ] ೩೭ಬ ಕಲಮಿನನ್ವಯ ಯಾವುದೊಂದು ಪಂಚಾಯತದ ಜ್ಯುಡಿಸಿಯಲ್ ಕಾರಕೂನನಾಗಿ ಕೆಲಸಮಾಡುವ ಆ ಪಂಚಾಯತದ ಸೆಕ್ರೆಟರಿಯು ಮಾಡಬೇಕಾದ ಇತರ ಕರ್ತವ್ಯಗಳನ್ನು ಗೊತ್ತುಪಡಿಸುವಬಗ್ಗೆ,

ಹ] ೫೯ನೇ ಕಲಮಿನನ್ವಯ ದಾವೆಗಳನ್ನು ಮತ್ತು ಖಟ್ಲೆಗಳನ್ನು ದಾಖಲ ಮಾಡುವಾಗ್ಗೆ ಕೊಡಬೇಕಾದ ಫೀಗಳನ್ನು ಗೊತ್ತುಪಡಿಸುವಬಗ್ಗೆ,

ಇ] ೬೦ನೇ, ೭೦ನೇ, ೮೦ನೇ ಮತ್ತು ೮೫ನೇ ಕಲಮುಗಳನ್ವಯ ದಾವೆಗಳ ಮತ್ತು ಖಟ್ಲೆಗಳಬಗ್ಗೆ ರಜಿಸ್ಟರುಗಳಲ್ಲಿ ನಮೂದಿಸಬೇಕಾದ ವಿವರಗಳನ್ನು ಗೊತ್ತುಪಡಿಸುವಬಗ್ಗೆ,

ಜ] ೬೨ನೇ ಕಲಮಿನನ್ವಯ ಸಮನ್ಸಿನ ನಮೂನೆಯನ್ನು ಗೊತ್ತುಪಡಿಸುಬಗ್ಗೆ,

ಕ] (ಇದು ೧೯೩೯ನೇ ಇಸ್ವಿಯ ೧೮ನೇ ಕಾನೂನಿನಿಂದ ತೆಗೆದು ಹಾಕಲ್ಪಟ್ಟಿದೆ).

ಲ] ೭೬ನೇ ಕಲಮಿನನ್ವಯ ಯಾವುದೊಂದು ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ ಕೊಡಲ್ಪಡಬೇಕೆಂದು, ನ್ಯಾಯಪಂಚಾಯತು ವಿಧಿಸಬಹುದಾದ ಫೀಗಳ ಪ್ರಮಾಣ (ಸ್ಕೇಲ)ವನ್ನು ಗೊತ್ತುಪಡಿಸುವಬಗ್ಗೆ,

ಮ] ೮೯ನೇ ಕಲಮಿನನ್ವಯ, ಸದರೀ ಕಲಮಿನಲ್ಲಿ ಹೇಳಿದ ಕರಗಳು ಮತ್ತು ಫೀಗಳು ಯಾವದರಿಂದ ಮತ್ತು ಯಾವ ರೀತಿಯಲ್ಲಿ, (ಮತ್ತು ಯಾವ ಅಪವಾದಗಳಿಗೊಳಪಟ್ಟು) ಹೇರಲ್ಪಡಬೇಕೆಂಬುದನ್ನು ಗೊತ್ತುಪಡಿಸುವಬಗ್ಗೆ,

ಮ ೧] ೮೯ನೇ ಕಲಮಿನ ೨ಅ, ಉಪಕಲಮಿನನ್ವಯ, ೨ನೇ ಉಪ ಕಲಮಿನಲ್ಲಿ ನಿರ್ದಿಷ್ಟಪಡಿಸಿದ ಕರಗಳಪೈಕಿ ಯಾವದಾದರೊಂದು ಕರವನು ಅಥವಾ ಫೀಯನ್ನು ಪ್ರತಿಯೊಂದು ಪಂಚಾಯತಿಗಾಗಿ ಗೊತ್ತುಪಡಿಸುವ ಬಗ್ಗೆ,

ನ] ೯೦ನೇ ಕಲಮಿನನ್ವಯ, ೮೯ನೇ ಕಲಮಿನಲ್ಲಿ ನಿರ್ದಿಷ್ಟಪಡಿಸಿದ ಕರಗಳನ್ನು ಅಥವಾ ಫೀಗಳನ್ನು ವಸೂಲಮಾಡುವ ಸಂಬಂಧದಲ್ಲಿ ಪರಮಾವಧಿಯ ದರವನ್ನು ಗೊತ್ತುಪಡಿಸುವಬಗ್ಗೆ,

ನ ೧] ೯೧ನೇ ಕಲಮಿನ ೨ನೇ ಉಪಕಲಮಿನನ್ವಯ ತಪ್ಪಿದವನಿಗೆ ಹಾಜರ ಮಾಡಬೇಕಾದ ಲೇಖದ ನಮೂನೆಯನ್ನು ಗೊತ್ತುಪಡಿಸುವಬಗ್ಗೆ,

ನ ೨] ೯೧ನೇ ಕಲಮಿನ ೩ನೇ ಉಪಕಲಮಿನನ್ವಯ ವಾರಂಟಿನ ನಮೂನೆಯನ್ನು ಮತ್ತು ತಪ್ಪಿದವನ ಜಂಗಮ ಆಸ್ತಿಯ ಜಪ್ತಿಯ, ಲಿಲಾವಿನ ಮತ್ತು ಮಾರಾಟದ ರೀತಿಯನ್ನು ಗೊತ್ತುಪಡಿಸುವಬಗ್ಗೆ,

ಓ] ೯೧ನೇ ಕಲಮಿನ ೪ನೇ ಉಪಕಲಮಿನನ್ವಯ, ಬೇಡಿಕೆಯ ಪತ್ರಗಳಬಗ್ಗೆ, ಜಪ್ತಿಬಗ್ಗೆ ಮತ್ತು ಹಿಡಿದಿಡಲ್ಪಟ್ಟ ಯಾವವೇ ದನಕರುಗಳನು ಸಾಕುವ ವೆಚ್ಚದಬಗ್ಗೆ ಫೀಗಳ ದರಗಳನ್ನು ಗೊತ್ತುಪಡಿಸುವದಕ್ಕಾಗಿ, ಮತ್ತು ೯೧ನೇ ಕಲಮಿನ ೫ನೇ ಉಪಕಲಮಿನನ್ವಯ, ಪಂಚಾಯತಕ್ಕೆ ಬರತಕ್ಕ

ಕರಗಳನ್ನು ಮತ್ತು ಇತರ ರಕಮುಗಳನ್ನು ವಸೂಲಮಾಡುವವರ ಸಲುವಾಗಿ ಗ್ರಾಮಸ್ಥರಿಗೆ ಕೊಡತಕ್ಕ ಪ್ರತಿಫಲವನ್ನು ಮತ್ತು ಇಂಥ ಪ್ರತಿಫಲವನ್ನು ಕೊಡತಕ್ಕ ರೀತಿಯನ್ನು ಗೊತ್ತುಪಡಿಸುವಬಗ್ಗೆ,

ಪ] ೯೩ನೇ ಕಲಮಿನನ್ವಯ ಜಿಲ್ಹಾ ಲೋಕಲ್ ಬೋರ್ಡು ಪಂಚಾಯತಕ್ಕೆ ಯಾವ ಕರಾರುಗಳಮೇಲೆ ಸಾಲಗಳನ್ನು ಕೊಡಬಹುದೋ ಅಂಥ ಕರಾರುಗಳನ್ನು ಗೊತ್ತುಪಡಿಸುವಬಗ್ಗೆ,

ಕ್ಯೂ] ೯೫ನೇ ಕಲಮಿನನ್ವಯು, ನೇಮಿಸಲ್ಪಟ್ಟ ಅಧಿಕಾರಿಗೆ ಅಥವಾ ಮನುಷ್ಯನಿಗೆ ಒಪ್ಪಿಸಿಕೊಡಲ್ಪಡಬಹುದಾದ ಅಧಿಕಾರಗಳನ್ನು ಮತ್ತು ಕರ್ತವ್ಯ ಗಳನ್ನು ಅಥವಾ ಅವನು ಉಪಯೋಗಿಸಬಹುದಾದ ಅಧಿಕಾರಗಳನ್ನು ಅಥವಾ ಮಾಡಬಹುದಾದ, ಕರ್ತವ್ಯಗಳನ್ನು ಗೊತ್ತುಪಡಿಸುವಬಗ್ಗೆ,

ರ] ೧೧೨ನೇ ಕಲಮಿನ ೩ನೇ ಮತ್ತು ೪ನೇ ಉಪಕಲಮುಗಳನ್ವಯ, ಜಿಲ್ಹಾ ಕೋರ್ಟು ಅಥವಾ ಜಿಲ್ಹಾ ಮ್ಯಾಜಿಸ್ಟ್ರೇಟನು ಅದರಲ್ಲಿ ಹೇಳಿದ ಅಧಿಕಾರಗಳನ್ನು ಒಪ್ಪಿಸಿಕೊಡುವದನ್ನು ನಿಯಮನಗೊಳಿಸುವಬಗ್ಗೆ,

ರ ರ] ಇಂಥ ದರಗಳಿಂದ ಮತ್ತು ಇಂಥ ನಿಯಮಗಳಲ್ಲಿ ಠರಾಯಿ ಸಲ್ಪಡಬಹುದಾದಂಥ ಕರಾರುಗಳಿಗೊಳಪಟ್ಟು, ಪಂಚಾಯತದಿಂದ ಸ್ಥಾಪಿ ಸಲ್ಪಡಬಹುದಾದ ಪ್ರಾವಿಡೆಂಟ ಫಂಡಿಗೆ, (ಪಂಚಾಯತವು) ಅಥವಾ ಪಂಚಾಯತದ ಸಮ್ಮತಿಯಿಂದ, ಅದರ ಅಧಿಕಾರಿಗಳು ಮತ್ತು ನೌಕರರು ಸಹಾಯಮಾಡಲು ಅಧಿಕಾರ ಕೊಡುವಬಗ್ಗೆ,

ಸ] ಗೊತ್ತುಪಡಿಸಲ್ಪಡಬಹುದಾದ ಇತರ ಯಾವುದೇ ವಿಷಯದ ಬಗ್ಗೆ,

(೨) ೧ನೇ ಉಪಕಲಮಿನನ್ವಯ ಮಾಡಬೇಕಾದ ನಿಯಮಗಳು ಮೊದಲು ಪ್ರಕಟಿಸಲ್ಪಡಬೇಕೆಂಬ ಕರಾರಿಗೆ ಒಳಪಡುತ್ತವೆ.

(೩) ೧ನೇ ಉಪಕಲಮಿನನ್ವಯ ಮಾಡಲ್ಪಟ್ಟ ನಿಯಮಗಳು, ಪ್ರಾಂತಿಕ ಕಾಯಿದೆ ಮಂಡಳದ, ಪ್ರತಿಯೊಂದು ಸಭೆ (ಚೇಂಬರ)ಯ ಮುಂದೆ ಕೂಡಲೆ ಮುಂಬರುವ ಅಧಿವೇಶನದಲ್ಲಿ ಇಡಲ್ಪಡಬೇಕು. ಮತ್ತು

ಅವು ಎರಡೂ ಸಭೆಗಳಿಗೆ ಒಪ್ಪಿಗೆ ಇದ್ದಂಥ ಒಂದು ಗೊತ್ತುವಳಿಯಮೂಲಕ ಬದಲಾವಣೆಹೊಂದಲು. ಅಥವಾ ರದ್ದಾಗಲು ಪಾತ್ರವಾಗುವವು; ಮತ್ತು ಇಂಥ ನಿಯಮವು ಸರಕಾರಿ ಗ್ಯಾಝೆಟಿನಲ್ಲಿ ಜಾಹೀರ ಪ್ರಕಟನೆಯನಂತರ, ಆ ಪ್ರಕಾರ ಬದಲಾವಣೆ ಹೊಂದಿತು ಅಥವಾ ರದ್ದುಗೊಳಿಸಲ್ಪಟ್ಟಿತು ಎಂದು ತಿಳಿಯಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಪ್ರಾಂತಿಕ ಸರಕಾರದವರ ಅಭಿಪ್ರಾಯದಲ್ಲಿ ಇಂಥ ಬದಲಾವಣೆಯ ಅಥವಾ ರದ್ಧತಿಯ ಮೂಲಕ ಈ ಕಾನೂನಿನ ಯಾವವೇ ಉದ್ದೇಶಗಳು ನಿಷ್ಫಲವಾಗುವ ಅಥವಾ ನಿರರ್ಥಕ ವಾಗುವ ಸಂಭವವಿದ್ದರೆ, ಪ್ರಾಂತಿಕ ಸರಕಾರದವರು, ಸರಕಾರಿ ಗ್ಯಾಝೆಟಿ ನಲ್ಲಿ ಪ್ರಕಟನೆಕೊಟ್ಟು, ಸದರಿ ಬದಲಾವಣೆಯು ಅಥವಾ ರದ್ಧತಿಯು ಅಮಲಿ ನಲ್ಲಿ ಬರುವದಿಲ್ಲವೆಂದು ಪ್ರಸಿದ್ಧಪಡಿಸಬಹುದು, ಮತ್ತು ಆಮೇಲೆ ಸದರೀ ನಿಯಮಗಳು ಬದಲಾವಣೆ ಹೊಂದಿಲ್ಲ ಅಥವಾ ರದ್ದುಗೊಳಿಸಲ್ಪಟ್ಟಿಲ್ಲವೆಂದು ತಿಳಿಯಲ್ಪಟ್ಟು, ಅಮಲಿನಲ್ಲಿ ಬರುವವು.

## ೧೦೯. ಉಪನಿಯಮಗಳು.

(೧) ಜಿಲ್ಹಾ ಲೋಕಲ್ ಬೋರ್ಡು ಕಮಿಶನರನ ಪೂರ್ವ ಮಂಜೂರಿಯಿಂದ ಈ ಕಾನೂನಿನ ಉದ್ದೇಶಗಳನ್ನು ಸಾಮಾನ್ಯವಾಗಿ ನೆರವೇರಿಸುವದಕ್ಕೆ ಉಪನಿಯಮಗಳನ್ನು ಮಾಡಬಹುದು.

(೨) ಮೇಲೆ ಹೇಳಿದ ಉಪಕಲಮಿನ ಸಾಮಾನ್ಯ ವ್ಯಾಪ್ತಿಗೆ ಬಾಧೆ ಬರದಂತೆ, ಜಿಲ್ಹಾ ಲೋಕಲ್ ಬೋರ್ಡು ಈ ಕೆಳಗಿನ ವಿಷಯಗಳಬಗ್ಗೆ ಉಪನಿಯಮಗಳನ್ನು ಮಾಡಬಹುದು.

ಅ] ೧೯ನೇ ಕಲಮಿನನ್ವಯ ಪಂಚಾಯತದ ಸಭೆಗಳ ವೇಳೆಯನ್ನು ಮತ್ತು ಸ್ಥಳಗಳನ್ನು ಗೊತ್ತುಪಡಿಸುವಬಗ್ಗೆ, ಮತ್ತು ಅವರ ಸಭೆಗಳಲ್ಲಿ ಕೆಲಸ ನಡಿಸುವ ರೀತಿಯನ್ನು ನಿಯಮನಗೊಳಿಸುವದಕ್ಕೆ ಮತ್ತು ಕೋರಂ ಗೊತ್ತು ಪಡಿಸುವಬಗ್ಗೆ,

ಬ] ೨೦ನೇ ಕಲಮಿನನ್ವಯ ಉಪಸರಪಂಚನು ನಡಿಸಬಹುದಾದ ಸರಪಂಚನ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ಗೊತ್ತುಪಡಿಸುವ ಬಗ್ಗೆ,

ಕ] ೨೬ನೇ ಕಲಮಿನನ್ವಯ—

(i) ಕುಡಿಯುವದರ ಸಲುವಾಗಿ ಉಪಯೋಗಿಸಲ್ಪಡುವ ನೀರಿನ ಎಲ್ಲ ಉಗಮಗಳನ್ನು ಶುದ್ಧಗೊಳಿಸುವಬಗ್ಗೆ ಮತ್ತು ಅವುಗಳನ್ನು ಕೆಡದಂತೆ ಸಂರಕ್ಷಿಸುವಬಗ್ಗೆ,

(ii) ಯಾವುದೇ ಹಳ್ಳದಿಂದ, ಕೆರೆಯಿಂದ, ಭಾವಿಯಿಂದ ಅಥವಾ ಇತರ ಉಗಮದಿಂದ ನೀರನ್ನು ಕುಡಿಯುವ ಕಾರಣಕ್ಕಾಗಿ ಒಯ್ಯುವದರಿಂದ ಅಥವಾ ಉಪಯೋಗಿಸುವದರಿಂದ ರೋಗವನ್ನುಂಟುಮಾಡುವ ಅಥವಾ ಆರೋಗ್ಯಕ್ಕೆ ಅಪಾಯವಾಗುವ ಸಂಭವವಿದ್ದಾಗ್ಗೆ, ಇಂಥ ಒಯ್ಯುವಿಕೆಯನ್ನು ಅಥವಾ ಉಪಯೋಗವನ್ನು ಪ್ರತಿಬಂಧಿಸುವಬಗ್ಗೆ, ಮತ್ತು ಇಂಥ ಕೆರೆಯನ್ನು ಅಥವಾ ಭಾವಿಯನ್ನು ತುಂಬಿ ಅಥವಾ ಮುಚ್ಚಿ ಅಥವಾ ಯೋಗ್ಯವೆಂದು ತೋರುವ ಇತರ ಯಾವುದೇ ರೀತಿಯಿಂದ ಇಂಥ ಒಯ್ಯುವಿಕೆಗೆ ಅಥವಾ ಉಪಯೋಗಕ್ಕೆ ಪ್ರತಿಬಂಧನಮಾಡುವದರಬಗ್ಗೆ,

(iii) ಸಾರ್ವಜನಿಕ ಆರೋಗ್ಯಕ್ಕೆ, ಸುಖಕ್ಕೆ, ಅಥವಾ ಅನುಕೂಲತೆಗೆ ಬಾಧೆತರುವಂಥ ರೀತಿಯಲ್ಲಿ ಅಥವಾ ಸ್ಥಳಗಳಲ್ಲಿ ಗೊಬ್ಬರವನ್ನು, ಕಸವನ್ನು ಅಥವಾ ಇತರ ಅಸಹ್ಯಕರ ಪದಾರ್ಥವನ್ನು ಒಗೆಯುವದನ್ನು ಅಥವಾ ಕೂಡಿಹಾಕುವದನ್ನು ಪ್ರತಿಬಂಧಿಸುವಬಗ್ಗೆ,

(iv) ಅಸಹ್ಯಕರ (ತ್ರಾಸದಾಯಕ) ಉದ್ಯೋಗಗಳನ್ನು ಅಥವಾ ವ್ಯಾಪಾರಗಳನ್ನು ನಿಯಮನಗೊಳಿಸುವಬಗ್ಗೆ,

(v) ಹೆಣಗಳನ್ನು ಸುಟ್ಟು ಅಥವಾ ಹುಗಿದು ಅವುಗಳ ವ್ಯವಸ್ಥೆ ಮಾಡುವಬಗ್ಗೆ,

(vi) ಆರೋಗ್ಯಕ್ಕೆ ಅಪಾಯಕರವಾಗಿರುವ ಅಥವಾ ನೆರೆಯವರಿಗೆ ತ್ರಾಸದಾಯಕವಾಗಿರುವ ಮಣ್ಣನ್ನು ಅಗಿಯುವಬಗ್ಗೆ ಮತ್ತು ಅಗಿದದ್ದನ್ನು ಮತ್ತು ತಗ್ಗುಗಳನ್ನು ತುಂಬುವಬಗ್ಗೆ,

(vii) ಅಪಾಯಕಾರಕ ಗಿಡಗಂಟೆಗಳನ್ನು ತೆಗೆದುಹಾಕುವಬಗ್ಗೆ,

(viii) ಅಪಾಯಕಾರಕ ಅಥವಾ ಹಾಳುಬಿದ್ದ ಕಟ್ಟಡಗಳನ್ನು ದುರಸ್ತಿ ಮಾಡುವಬಗ್ಗೆ ಮತ್ತು ತೆಗೆದುಹಾಕುವಬಗ್ಗೆ,

(ix) ಹವೆಯಾಡುವ ಸಂಬಂಧದಲ್ಲಿ ಅಥವಾ ಓಣಿಗಳನ್ನು ಮಾಡುವ ಮತ್ತು ಗೊತ್ತುಪಡಿಸುವ ಸಂಬಂಧದಲ್ಲಿ ಸಾಕಷ್ಟು ವ್ಯವಸ್ಥೆಗಳಿಲ್ಲದೆ, ಕಟ್ಟಡಗಳ ರಚನೆಯನ್ನು ಪ್ರತಿಬಂಧಿಸುವಬಗ್ಗೆ,

(x) ಜಾತ್ರೆಗಳ ಮತ್ತು ಸಂತೆಗಳ ಮೇಲೆ ನಿರ್ಬಂಧವಿಡುವಬಗ್ಗೆ ಮತ್ತು ಪೇಟೆಗಳನ್ನು ಪ್ರಾಣಿಗಳ ವಧಾಲಯಗಳನ್ನು, ಗಾಡಿಗಳ ನಿಲ್ದಾಣ ಗಳನ್ನು ನಿಯಮನಗೊಳಿಸುವಬಗ್ಗೆ,

(xi) ಮಾರಾಟಕ್ಕಿಡಲ್ಪಟ್ಟ ಅಯೋಗ್ಯವಾದ ಆಹಾರವನ್ನು ಮತ್ತು ಪೇಯವನ್ನು ಪರೀಕ್ಷಿಸುವಬಗ್ಗೆ ಮತ್ತು ನಾಶಮಾಡುವಬಗ್ಗೆ, ಮತ್ತು

(xii) ಆರೋಗ್ಯವನ್ನು ಮತ್ತು ಕಸಗೂಡಿಸುವಿಕೆಯನ್ನು ಸಾಮಾನ್ಯ ವಾಗಿ ನಿಯಮನಗೊಳಿಸುವಬಗ್ಗೆ,

ಡ] ೨೮ನೇ ಕಲಮಿನನ್ವಯ ಲೋಕಲ್ ಬೋರ್ಡುಗಳಿಂದ ಕೆಲಸಕ್ಕೆ ಹಚ್ಚಲ್ಪಟ್ಟ ಕೂಲಿಕಾರರ ಮತ್ತು ಧರ್ಮಶಾಲೆಗಳ ದುರಸ್ತಿಗಳ ಮೇಲ್ವಿ ಚಾರಣೆ ಮಾಡುವಬಗ್ಗೆ, ಕೊಂಡವಾಡೆಗಳ ವ್ಯವಸ್ಥೆ ಮಾಡುವ ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡುವ ಬಗ್ಗೆ, ಮತ್ತು ಜಿಲ್ಹಾ ಲೋಕಲ್ ಬೋರ್ಡಿ ನಿಂದ ಒಪ್ಪಿಸಲ್ಪಟ್ಟ ಕೆಲಸಗಳನ್ನು ನೆರವೇರಿಸುವಬಗ್ಗೆ ಕಾಲುವೆಯ ನೀರನ್ನು ಹಂಚಿಕೊಡುವಬಗ್ಗೆ ಮತ್ತು ಪ್ರಾಂತಿಕ ಸರಕಾರದವರಿಂದ ನೇಮಿಸಿ ಕೊಡಲ್ಪಟ್ಟ ಇತರ ಕರ್ತವ್ಯಗಳನ್ನು ಮಾಡುವಬಗ್ಗೆ.

(೩) ಮೇಲಿನ ಉಪಕಲಮುಗಳನ್ವಯ ಮಾಡಲ್ಪಟ್ಟ ಯಾವುದೇ ಉಪನಿಯಮದಲ್ಲಿ, ಅದರ ಉಲ್ಲಂಘನೆಯಬಗ್ಗೆ,

(ಅ) ೨೦ ರೂಪಾಯಿಗಳ ವರೆಗೆ ದಂಡ, ಅಥವಾ

(ಬ) ಅದರ ಉಲ್ಲಂಘನೆ ಚಾಲೂ ಇದ್ದರೆ, ಮೊದಲನೆಯ ಉಲ್ಲಂಘನೆಯಬಗ್ಗೆ ಅಪರಾಧ ಸಿದ್ಧವಾದನಂತರ, ಆ ಉಲ್ಲಂಘನೆಯು ಚಾಲೂ ಇರುವ ಅವಧಿಯಲ್ಲಿ ಪ್ರತಿದಿವಸ ೧ ರೂಪಾಯಿಯ ವರೆಗೆ ದಂಡ ಎಂದು ಗೊತ್ತುಮಾಡಲ್ಪಡಬಹುದು.

# ವಿಭಾಗ ೧೩.

## ಸಂಕೀರ್ಣ.

**೧೧೦. ಹಾನಿ, ನಾಶ, ಅಥವಾ ದುರುಪಯೋಗದಬಗ್ಗೆ ಸಭಾಸದರ ಹೊಣೆಗಾರಿಕೆ.**

(೧) ಪಂಚಾಯತದ ಪ್ರತಿಯೊಬ್ಬ ಸಭಾಸದನು, ಯಾವ ವಿಷಯದಲ್ಲಿ ಅವನ ಅಂಗವಿರುವದೋ ಅದರಬಗ್ಗೆ, ಅಥವಾ ಯಾವುದು ಅವನ ದುರ್ವರ್ತನೆ, ಇಲ್ಲವೆ ಸಭಾಸದನೆಂದು ತನ್ನ ಕರ್ತವ್ಯಗಳನ್ನು ಮಾಡಲು ಅತಿಯಾಗಿ ಅಲಕ್ಷಮಾಡಿದ ಮೂಲಕ ಉದ್ಭವಿಸಿದೆಯೋ ಅಥವಾ ಉದ್ಭವಿಸಲು ಸುಲಭವಾಗಿದೆಯೋ ಅಂಥ ಪಂಚಾಯತಿಯ ಯಾವುದೇ ಹಣದ ಅಥವಾ ಆಸ್ತಿಯ ಹಾನಿ, ನಾಶ ಅಥವಾ ದುರುಪಯೋಗದಬಗ್ಗೆ ಸ್ವತಃ ಹೊಣೆಗಾರನಿರುವನು.

(೨) ತದ್ವಿರುದ್ಧವಾಗಿ ಕಾರಣವನ್ನು ತೋರಿಸಲು ಸಂಬಂಧಪಟ್ಟ ಸಭಾಸದನಿಗೆ ಸಾಕಷ್ಟು ಸಂಧಿಯನ್ನು ಕೊಟ್ಟನಂತರ, ಪಂಚಾಯತದ ಯಾವುದೇ ಹಣದ ಅಥವಾ ಇತರ ಆಸ್ತಿಯ ಹಾನಿ, ನಷ್ಟ ಅಥವಾ ದುರುಪಯೋಗವು ಸದರಿ ಸಭಾಸದನ ದುರ್ವರ್ತನೆಯ ಅಥವಾ ಅತಿಯಾದ ಅಲಕ್ಷದ ಪ್ರತ್ಯಕ್ಷ ಪರಿಣಾಮವೆಂದು ಕಲೆಕ್ಟರನಿಗೆ ತೃಪ್ತಿಯಾದರೆ, ಕಲೆಕ್ಟರನು ಲೇಖಿ ಆಜ್ಞೆಯಿಂದ ಇಂಥ ಹಾನಿ, ನಷ್ಟ ಅಥವಾ ದುರುಪಯೋಗದಬಗ್ಗೆ ಪಂಚಾಯತಕ್ಕೆ ತುಂಬಿಕೊಡಬೇಕಾದ ಹಣವನ್ನು, ಒಂದು ನಿಶ್ಚಿತ ತಾರೀಖಿನ ಪೂರ್ವದಲ್ಲಿ ಪಂಚಾಯತಕ್ಕೆ ಕೊಡಲಿಕ್ಕೆ ಇಂಥ ಸಭಾಸದನಿಗೆ ಆಜ್ಞೆಮಾಡಬೇಕು.

(೩) ಸದರಿ ಹಣವು ಈ ರೀತಿ ಕೊಡಲ್ಪಡದಿದ್ದರೆ, ಕಲೆಕ್ಟರನು ಅದನ್ನು ಭೂಮಿಯ ಮಹಸೂಲಿನ ಬಾಕಿಯಂತೆ ವಸೂಲಮಾಡಿ, ಗ್ರಾಮದ ಫಂಡಿಗೆ ಜಮಾ ಮಾಡಬೇಕು.

(೪) ೨ನೇ ಉಪಕಲಮಿನನ್ವಯ ಯಾವನೊಬ್ಬ ಸಭಾಸದನ ಹೊಣೆಗಾರಿಕೆಯ ವಿಷಯದಲ್ಲಿ ಮತ್ತು ಅವನಿಂದ ವಸೂಲಾಗತಕ್ಕ ಹಣದ ವಿಷಯದಲ್ಲಿ ಕಲೆಕ್ಟರನು ಕೊಟ್ಟ ನಿರ್ಣಯವು, ಕಮಿಶನರನ ಕಡೆಗೆ ಅಪೀಲು ಮಾಡುವದಕ್ಕೆ ಪಾತ್ರವಿದೆ.

**೧೧೧. ಪಂಚಾಯತ, ನ್ಯಾಯಪಂಚಾಯತ ಮುಂತಾದವುಗಳ ವಿರುದ್ಧ ಕೆಲಸ ನಡಿಸುವದಕ್ಕೆ ಪ್ರತಿಬಂಧ ಮತ್ತು ಕೆಲಸ ನಡಿಸುವ ಪೂರ್ವದಲ್ಲಿ ಅದರಬಗ್ಗೆ ಮುಂಚಿತವಾಗಿ ನೋಟೀಸು ಕೊಡುವದು.**

(೧) ಈ ಕಾನೂನಿನಲ್ಲಿ ಅಥವಾ ಯಾವುದೇ ನಿಯಮ ಅಥವಾ ಉಪನಿಯಮದನ್ವಯ ಪ್ರಾಮಾಣಿಕವಾಗಿ ಮಾಡಲ್ಪಟ್ಟ ಯಾವುದೇ ವಿಷಯದ ಬಗ್ಗೆ ಪಂಚಾಯತದ ಆಜ್ಞಾನುಸಾರ ಕೆಲಸಮಾಡುವ, ಅದರ ಯಾವನೇ ಸಭಾಸದನ, ಅಧಿಕಾರಿಯ, ಸೇವಕನ ಅಥವಾ ಏಜಂಟನ ವಿರುದ್ಧ ಯಾವುದೇ ಕೆಲಸವು ನಡೆಯಲಾರದು.

(೨) ಈ ಕಾನೂನಿನನ್ವಯ ಮಾಡಲ್ಪಟ್ಟ ಅಥವಾ ಮಾಡಲ್ಪಟ್ಟಿತೆಂದು ಹೇಳಲ್ಪಡುವ ಯಾವುದೇ ವಿಷಯದಬಗ್ಗೆ, ಯಾವುದೇ ಪಂಚಾಯತದ ಅಥವಾ ನ್ಯಾಯಪಂಚಾಯತದ ವಿರುದ್ಧ ಅಥವಾ ಇಂಥ ಪಂಚಾಯತದ ಅಥವಾ ನ್ಯಾಯಪಂಚಾಯತದ ಆಜ್ಞಾನುಸಾರ ಕೆಲಸಮಾಡುವ ಅದರ ಯಾವನಾದರೂ ಸಭಾಸದನ, ಅಧಿಕಾರಿಯ, ಸೇವಕನ ಅಥವಾ ಏಜಂಟನ ವಿರುದ್ಧ ಯಾವುದೇ ಕೆಲಸವು, ಆ ಬಗ್ಗೆ ಲೇಖಿ ನೋಟೀಸು ಆ ಪಂಚಾಯತದ ಅಥವಾ ನ್ಯಾಯ ಪಂಚಾಯತದ ಕಚೇರಿಯಲ್ಲಿ ಮತ್ತು ಯಾವನಮೇಲೆ ಕೆಲಸನಡಿಸುವ ಉದ್ದೇಶವಿರುವದೋ ಅಂಥ ಅದರ ಸಭಾಸದನ, ಅಧಿಕಾರಿಯ, ಸೇವಕನ ಅಥವಾ ಏಜಂಟನ ವಾಸಸ್ಥಳದಲ್ಲಿ ಸಹ ಇಡಲ್ಪಟ್ಟ ಅಥವಾ ಕೈಯಲ್ಲಿ ಕೊಡಲ್ಪಟ್ಟನಂತರ ಮುಂದೆ ಮೂರು ತಿಂಗಳುಗಳು ಮುಗಿಯುವವರೆಗೆ, ಆರಂಭವಾಗಲಾರದು. ಆ ನೋಟೀಸಿನಲ್ಲಿ, ಕೆಲಸದ ಕಾರಣ, ಬೇಡಿದ ಸಹಾಯಗಳ ಸ್ವರೂಪ, ಬೇಡಿದ ಪರಿಹಾರಧನ ಮತ್ತು ಕೆಲಸವನ್ನು ನಡಿಸಲು ಇಚ್ಛಿಸುವ ಮನುಷ್ಯನ ಹೆಸರು ಮತ್ತು ವಾಸಸ್ಥಳ ಇವುಗಳನ್ನು ನಮೂದಿಸಬೇಕು.

(೩) ಇಂಥ ಪ್ರತಿಯೊಂದು ಕೆಲಸವು. ಸದರಿ ಕೆಲಸದ ಕಾರಣ ವುಂಟಾದ ನಂತರ ಆರುತಿಂಗಳೊಳಗೆ ಪ್ರಾರಂಭಿಸಲ್ಪಡಬೇಕಲ್ಲದೆ ಅದರ ನಂತರವಲ್ಲ.

(೪) ೨ನೇ ಉಪಕಲಮಿನನ್ವಯ ನೋಟೀಸು ಕೊಡಲ್ಪಟ್ಟ ಯಾವುದೇ ಪಂಚಾಯತವು ಅಥವಾ ನ್ಯಾಯ ಪಂಚಾಯತವು ಅಥವಾ ಯಾವನೇ ಮನುಷ್ಯನು, ಕೆಲಸವು ಪ್ರಾರಂಭಿಸಲ್ಪಡುವ ಮೊದಲು, ಸಾಕಷ್ಟು (ಪರಿಹಾರ) ಧನವನ್ನು ವಾದಿಗೆ ಕೊಡಮಾಡಿ ಅದನ್ನು ಕೋರ್ಟಿನಲ್ಲಿ ಜಮಾ ಮಾಡಿದರೆ, ಹೀಗೆ ಕೊಡಮಾಡಿದ ರಕಮುಗಿಂತ ಹೆಚ್ಚಿಗೆ ವಾದಿಗೆ ಸಿಗಲಾರದು. ಹೀಗೆ ರಕಮು ಕೊಡಮಾಡಲ್ಪಟ್ಟನಂತರ ಪ್ರತಿವಾದಿಗೆ ತಗಲುವ ಯಾವತ್ತೂ ವೆಚ್ಚವನ್ನು ಸಹ ವಾದಿಯು ಕೊಡಬೇಕು.

**೧೧೨. ಅಧಿಕಾರಗಳನ್ನು ಒಪ್ಪಿಸಿಕೊಡುವದು.**

(೧) ಪ್ರಾಂತಿಕ ಸರಕಾರದವರು, ಸರಕಾರಿ ಗ್ಯಾಝೆಟಿನಲ್ಲಿ ಪ್ರಕಟನೆಯ ಮೂಲಕ ಕಮಿಶನರನಿಗೆ, ಅಥವಾ ೯೫ನೇ ಕಲಮಿನ ೩ನೇ ಉಪಕಲಮಿನನ್ವಯ ವಿಶೇಷವಾಗಿ ಅಧಿಕಾರಪಡೆದ ಯಾವನೊಬ್ಬ ಅಧಿಕಾರಿಯನ್ನು ಒಳಗೊಂಡು, ಯಾವನೇ ಅಧಿಕಾರಿಗೆ ಪಂಚಾಯತಗಳ ಸಂಬಂಧದಲ್ಲಿ (೬ನೇ ವಿಭಾಗದನ್ವಯ ನ್ಯಾಯ ಪಂಚಾಯತಗಳ ಸಂಬಂಧದ ಅಧಿಕಾರಗಳನ್ನು ಬಿಟ್ಟು) ಈ ಕಾನೂನಿನನ್ವಯ ಪ್ರಾಂತಿಕ ಸರಕಾರದವರಿಂದ ಉಪಯೋಗಿಸಲ್ಪಡಬಹುದಾದ ಯಾವವೇ ಅಧಿಕಾರಗಳನ್ನು ನಡಿಸಲಿಕ್ಕೆ ಅಧಿಕಾರ ಕೊಡಬಹುದು.

(೨) ಯಾವದೊಂದು ಜಿಲ್ಹಾ ಲೋಕಲ್ ಬೋರ್ಡು ವಿಸರ್ಜಿಸಲ್ಪಟ್ಟಾಗ್ಗೆ, ಅಥವಾ ರದ್ದುಗೊಳಿಸಲ್ಪಟ್ಟಾಗ್ಗೆ, ಪಂಚಾಯತಗಳ ಸಂಬಂಧದಲ್ಲಿ ಈ ಕಾನೂನಿನನ್ವಯ ಜಿಲ್ಹಾ ಲೋಕಲ್ ಬೋರ್ಡಿಗೆ ಕೊಡಲ್ಪಟ್ಟ ಯಾವವೇ ಅಧಿಕಾರಗಳನ್ನು ಉಪಯೋಗಿಸಲಿಕ್ಕೆ ಸರಕಾರಿ ಗ್ಯಾಝೆಟಿನಲ್ಲಿ ಪ್ರಕಟನೆಯ ಮೂಲಕ ಯಾವನೇ ಮನುಷ್ಯನಿಗೆ ಅಧಿಕಾರ ಕೊಡಬಹುದು.

(೩) ಈ ಸಂಬಂಧದಲ್ಲಿ ಮಾಡಲ್ಪಟ್ಟ ನಿಯಮುಗಳಿಗೊಳಪಟ್ಟು ಜಿಲ್ಹಾ ಕೋರ್ಟು, ಸಬಾರ್ಡಿನೇಟ ಜಜ್ಜನಿಗೆ ಸದರೀ ಸಬಾರ್ಡಿನೇಟ ಜಜ್ಜನ

ಅಧಿಕಾರಕ್ಷೇತ್ರದಲ್ಲಿರುವ ಯಾವದೊಂದು ನ್ಯಾಯ ಪಂಚಾಯತಿಯ ವಿಷಯ ದಲ್ಲಿ ಈ ಕಾನೂನಿನನ್ವಯ ದಾವೆಗಳ ಸಂಬಂಧದಲ್ಲಿ ಜಿಲ್ಹಾ ಕೋರ್ಟು ಉಪಯೋಗಿಸುವ ಅಧಿಕಾರಗಳನ್ನು ಒಪ್ಪಿಸಿ ಕೊಡಬಹುದು.

(೪) ಈ ಸಂಬಂಧದಲ್ಲಿ ಮಾಡಲ್ಪಟ್ಟ ನಿಯಮಗಳಿಗೊಳಪಟ್ಟು ಜಿಲ್ಹಾ ಮ್ಯಾಜಿಸ್ಟ್ರೇಟನು ೧೮೯೮ನೇ ಇಸ್ವಿಯ ಫೌಜದಾರಿ ಕೆಲಸ ನಡಿಸುವ ರೀತಿಯ ವಿಷಯದ ಕಾನೂನಿನ ೪೦೭ನೇ ಕಲಮಿನನ್ವಯ ಅಪೀಲಿನ ಅಧಿಕಾರ ಕ್ಷೇತ್ರವುಳ್ಳ ಒಂದನೇ ವರ್ಗದ ಮ್ಯಾಜಿಸ್ಟ್ರೇಟನಿಗೆ, ಸದರೀ ಮ್ಯಾಜಿಸ್ಟ್ರೇಟನ ಅಧಿಕಾರ ಕ್ಷೇತ್ರದಲ್ಲಿರುವ ಗ್ರಾಮದೊಳಗಿನ ನ್ಯಾಯ ಪಂಚಾ ಯತದ ಸಂಬಂಧದಲ್ಲಿ ಈ ಕಾನೂನಿನನ್ವಯ ಖಟ್ಲೆಗಳ ವಿಷಯದಲ್ಲಿ ತಾನು ಉಪಯೋಗಿಸುವ ಅಧಿಕಾರಗಳನ್ನು ಒಪ್ಪಿಸಿ ಕೊಡಬಹುದು.

(೫) ಪ್ರಾಂತಿಕ ಸರಕಾರದವರ ಸಾಮಾನ್ಯ ಅಥವಾ ವಿಶೇಷ ಆಜ್ಞೆ ಗಳಿಗೊಳಪಟ್ಟು, ಕಲೆಕ್ಟರನು ಮಾಮಲೇದಾರ ಅಥವಾ ಮಹಾಲಕರಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಯಾವನೊಬ್ಬ ಅಧಿಕಾರಿಗೆ, ಈ ಕಾನೂನಿನನ್ವಯ ಕಲೆಕ್ಟರನು ಉಪಯೋಗಿಸುವ ಅಧಿಕಾರಗಳನ್ನು ಒಪ್ಪಿಸಿ ಕೊಡಬಹುದು.

**೧೧೩. ಪಂಚಾಯತವು ಮಾಡಬೇಕಾದ ಸ್ಥಾನಿಕ ವಿಚಾರಣೆ ಮತ್ತು ರಿಪೋರ್ಟುಗಳು (ವರದಿಗಳು).**

ಈ ಕೆಳಗಿನ ಯಾವವೇ ಪ್ರಕರ್ಣಗಳಲ್ಲಿ ವಿಚಾರಣೆ ಮಾಡುವದು ಮತ್ತು ರಿಪೋರ್ಟು (ವರದಿ) ಮಾಡುವದು ಪ್ರತಿಯೊಂದು ಪಂಚಾಯತದ ಕರ್ತವ್ಯ ವಿರುವದು.

ಅ] ೧೮೯೮ನೇ ಇಸ್ವಿಯ ಫೌಜದಾರಿ ಕೆಲಸ ನಡಿಸುವ ರೀತಿಯ ವಿಷ ಯದ ಕಾನೂನಿನ ೨೦೨ನೇ ಕಲಮಿನನ್ವಯ ಯಾವದೊಂದು ಪಂಚಾಯತವು ಮುಂಚಿತವಾಗಿ ಸ್ಥಾನಿಕ ವಿಚಾರಣೆ ಮಾಡಬೇಕು ಎಂದು ಮ್ಯಾಜಿಸ್ಟ್ರೇಟನು ಆಜ್ಞೆಮಾಡಿದ ಯಾವದೇ ವಿಷಯದಲ್ಲಿ ಮತ್ತು ಸದರ ಕಲಮಿನ ೧ನೇ ಉಪ ಕಲಮಿನಲ್ಲಿರುವ "ಇಂಥ ಎರಡನೇ ಮನುಷ್ಯನು" ಎಂಬ ಶಬ್ದಗಳಲ್ಲಿ ಪಂಚಾ ಯತಿಯು ಸಮಾವೇಶವಾಗುತ್ತದೆಂದು ತಿಳಿಯಬೇಕು;

ಬ] ೧೮೯೮ನೇ ಇಸ್ವಿಯ ಫೌಜದಾರಿ ಕೆಲಸ ನಡಿಸುವ ರೀತಿಯ ವಿಷಯದ ಕಾನೂನಿನ ೪೮೮ನೇ ಕಲಮಿನನ್ವಯ ವಿಚಾರಣೆ ನಡಿಸುತ್ತಿರುವ ಮ್ಯಾಜಿಸ್ಟ್ರೇಟನು ಯಾರ ಪೋಟಗಿಯಬಗ್ಗೆ ಅರ್ಜಿಯು ಮಾಡಲ್ಪಟ್ಟಿದೆಯೋ ಅಂಥ ಹೆಂಡತಿಯು ಅಥವಾ ಮಗುವು ಅಥವಾ ಇಂಥ ಹೆಂಡತಿಯ ಗಂಡ ಅಥವಾ ಇಂಥ ಮಗುವಿನ ತಾಯಿ-ತಂದೆಗಳು ಯಾವ ಗ್ರಾಮದಲ್ಲಿ ವಾಸಿಸು-ತ್ತಿರುವರೋ ಅಂಥ ಗ್ರಾಮದ ಪಂಚಾಯತವು ಪಕ್ಷಕಾರರ ಪರಿಸ್ಥಿತಿಗಳನ್ನು ಲಕ್ಷದಲ್ಲಿಟ್ಟು, ಕೊಡಬೇಕಾಗುವ ಪೋಟಗಿಯ ರಕಮಿನ ವಿಷಯದಲ್ಲಿ ರೀಪೋರ್ಟನ್ನು ಮಾಡಬೇಕೆಂದು ಹೇಳುವ ಯಾವುದೇ ಸಂಬಂಧದಲ್ಲಿ; ಮತ್ತು ಇಂಥ ರೀಪೋರ್ಟು ಇಂಥ ವಿಚಾರಣೆಯಲ್ಲಿ ಪುರಾವೆಯಾಗುವದು.

ಆದರೆ ಗೊತ್ತುಪಡಿಸುವದೇನಂದರೆ, ರಿಪೋರ್ಟೇ ಪುರಾವೆಯಾಗಿರುವ ಯಾವುದೇ ವಿಷಯದಲ್ಲಿ, ಪಂಚಾಯತದ ಯಾವ ಸಭಾಸದನಿಗೂ ಸಾಕ್ಷಿದಾರನೆಂದು ಹಾಜರಾಗಲು ವಿಧಿಸಬಾರದು; ಆದರೆ ಮ್ಯಾಜಿಸ್ಟ್ರೇಟನು ತನ್ನ ಇಚ್ಛಾನುಸಾರ ಇನ್ನೂ ಹೆಚ್ಚಿನ ರೀಪೋರ್ಟನ್ನು ಬೇಡಬಹುದು.

**೧೧೪. ಪಂಚಾಯತಗಳ ಅಥವಾ ನ್ಯಾಯಪಂಚಾಯತಗಳ ಸಭಾಸದ ಮೊದಲಾದವರು ಸರಕಾರಿ ನೌಕರರು.**

ಪಂಚಾಯತದ ಅಥವಾ ನ್ಯಾಯಪಂಚಾಯತಿಯ ಪ್ರತಿಯೊಬ್ಬ ಸಭಾಸದನು ಮತ್ತು ಪಂಚಾಯತದಿಂದ ಅಥವಾ ನ್ಯಾಯ ಪಂಚಾಯತದಿಂದ ಇಡಲ್ಪಟ್ಟ ಅಥವಾ ಅದರ ಆಧೀನದಲ್ಲಿ ಕೆಲಸಮಾಡುವ ಪ್ರತಿಯೊಬ್ಬ ಅಧಿಕಾರಿಯು ಮತ್ತು ಸೇವಕನು ಇಂಡಿಯನ್ ಪೀನಲ್ ಕೋಡಿನ ೨೧ನೇ ಕಲಮಿನ ಅರ್ಥದ ಪ್ರಕಾರ ಸರಕಾರಿ ನೌಕರನಿರುವನೆಂದು ತಿಳಿಯಬೇಕು.

**೧೧೫. ರದ್ದತಿ ಮತ್ತು ಅಪವಾದಗಳು.**

(೧) ೧೯೨೦ನೇ ಇಸ್ವಿಯ ಮುಂಬಯಿ ಗ್ರಾಮಪಂಚಾಯತಗಳ ಕಾನೂನು ಈ ಮೂಲಕ ರದ್ದುಗೊಳಿಸಲ್ಪಟ್ಟಿದೆ.

ಆದರೆ ಗೊತ್ತುಪಡಿಸುವದೇನಂದರೆ,

ಅ] ಸದರಿ ಕಾನೂನಿನನ್ವಯ ಯಾವನೇ ಮನುಷ್ಯನಿಂದ ಬರತಕ್ಕ ಯಾವುದೇ ಹಣವನ್ನು ಕೊಡುವ ಅವನ ಪಾತ್ರತೆಗೆ ಅಥವಾ ಸದರಿ ಕಾನೂನಿ-

ನನ್ವಯ ಈ ಮೊದಲೇ ಮಾಡಲ್ಪಟ್ಟ ಯಾವುದೇ ಸಂಗತಿಯ ಕ್ರಮಬದ್ಧತೆಗೆ ಅಥವಾ ಅಕ್ರಮತೆಗೆ ಇಂಥ ರದ್ದತಿಯಿಂದ ಬಾಧೆಬರಲಾರದು.

ಬ] ೧೯೨೦ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತಗಳ ಕಾನೂನಿನನ್ವಯ ಸ್ಥಾಪಿಸಲ್ಪಟ್ಟ ಮತ್ತು ಈ ಕಾನೂನು ಅಮಲಿನಲ್ಲಿ ಬರುವ ತಕ್ಷಣ ಪೂರ್ವದಲ್ಲಿ ಅಸ್ತಿತ್ವದಲ್ಲಿರುವ ಯಾವತ್ತೂ ಪಂಚಾಯತಗಳು ಈ ಕಾನೂನಿನನ್ವಯ ಸ್ಥಾಪಿಸಲ್ಪಟ್ಟಿವೆಯೆಂದು ತಿಳಿಯಲ್ಪಡಬೇಕು.

ಮತ್ತು ಇಂಥ ಯಾವವಾದರೂ ಪಂಚಾಯತಗಳ ಹಕ್ಕುಗಳು ಮತ್ತು ಹೊಣೆಗಾರಿಕೆಗಳು, ಹೀಗೆ ಸ್ಥಾಪಿಸಲ್ಪಟ್ಟಿವೆಯೆಂದು ತಿಳಿಯಲ್ಪಡುವ ಪಂಚಾಯತದ ಕಡೆಗೆ ಹೋಗುವವು ಮತ್ತು ಅದರವುಗಳಾಗುವವು.

ಹೀಗೆ ರದ್ದುಗೊಳಿಸಲ್ಪಟ್ಟ ಕಾನೂನಿನನ್ವಯ ಇಂಥ ಯಾವುದೇ ಪಂಚಾಯತದ ವಿಷಯದಲ್ಲಿ ಮಾಡಲ್ಪಟ್ಟ ಯಾವುದೇ ನೇಮಣೂಕಿ, ಹೊರಡಿಸಲ್ಪಟ್ಟ ಯಾವುದೇ ಪ್ರಕಟನೆ, ನೋಟೀಸು, ಆಜ್ಞೆ, ಹೇರಲ್ಪಟ್ಟ ಯಾವುದೇ ಕರ ಅಥವಾ ಕೊಡಲ್ಪಟ್ಟ ಅಪ್ಪಣೆ ಅಥವಾ ಮಾಡಲ್ಪಟ್ಟ ಯಾವುದೇ ನಿಯಮ ಅಥವಾ ಉಪನಿಯಮವು, ಈ ಕಾನೂನಿಗೆ ವಿರೋಧವಿರದಿರುವಷ್ಟರ ಮಟ್ಟಿಗೆ ಈ ಕಾನೂನಿನನ್ವಯ ಮಾಡಲ್ಪಟ್ಟ, ಹೊರಡಿಸಲ್ಪಟ್ಟ, ಹೇರಲ್ಪಟ್ಟ ಅಥವಾ ಕೊಡಲ್ಪಟ್ಟ ಯಾವುದೇ ನೇಮಣೂಕಿಯಿಂದ, ಪ್ರಕಟನೆಯಿಂದ, ನೋಟೀಸಿನಿಂದ, ಆಜ್ಞೆಯಿಂದ, ಕರದಿಂದ, ಅಪ್ಪಣೆಯಿಂದ, ನಿಯಮದಿಂದ ಅಥವಾ ಉಪನಿಯಮದಿಂದ, ರದ್ದುಗೊಳಿಸಲ್ಪಡದ ವಿನಃ ಮತ್ತು ರದ್ದುಗೊಳಿಸಲ್ಪಡುವ ವರೆಗೆ ಈ ಕಾನೂನಿನನ್ವಯ ಹೀಗೆ ಸ್ಥಾಪಿಸಲ್ಪಟ್ಟಿವೆಯೆಂದು ತಿಳಿಯಲ್ಪಡುವ ಪಂಚಾಯತಗಳ ವಿಷಯದಲ್ಲಿ ಈ ಕಾನೂನಿನನ್ವಯ, ಮಾಡಲ್ಪಟ್ಟಿವೆ ಹೊರಡಿಸಲ್ಪಟ್ಟಿವೆ, ಹೇರಲ್ಪಟ್ಟಿದೆ ಅಥವಾ ಕೊಡಲ್ಪಟ್ಟಿವೆಯೆಂದು ತಿಳಿಯಬೇಕು.

(೨) ಈ ಕಾನೂನು, ಮತ್ತು ನಿಯಮಗಳು ಮತ್ತು ಉಪನಿಯಮಗಳು ಯಾವುದೇ ಗ್ರಾಮದಲ್ಲಿ ಅಮಲಿನಲ್ಲಿರುವ ಕಾಲದಲ್ಲಿ ಪರಿಶಿಷ್ಟದಲ್ಲಿ ಹೇಳಿದ ಕಾನೂನುಗಳು, ಪರಿಶಿಷ್ಟದ ಮೂರನೇ ಆಸನ (ಕಾಲಂ) ದಲ್ಲಿ ನಮೂದಿಸಿದ ಮಟ್ಟಿಗೆ, ಸದರಿ ಗ್ರಾಮದಲ್ಲಿ ಅಮಲಿನಲ್ಲಿರುವದು ನಿಂತು ಹೋಗುವದು.

೧೯೫೦ನೇ ಇಸ್ವಿಯ ೧೭ನೇ ಕಾನೂನಿನ ೮ನೇ ಕಲಮಿನ ಪ್ರಕಾರ ತಿದ್ದುಪಡೆಯಾದದ್ದು.

## ಪರಿಶಿಷ್ಟ

### ೧೧೫ನೇ ಕಲಮನ್ನು ನೋಡಿರಿ.

| ಕಾನೂನಿನ ನಂಬರು ಮತ್ತು ವರ್ಷ | ಹೆಸರು | ಎಷ್ಟರಮಟ್ಟಿಗೆ ರದ್ದು ಗೊಳಿಸಲ್ಪಟ್ಟಿದೆ. |
|---|---|---|
| ೧೮೬೭ನೇ ಇಸ್ವಿಯ ಮುಂಬಯಿ ಕಾನೂನು ನಂಬರು ೭ | ೧೮೬೭ನೇ ಇಸ್ವಿಯ ಮುಂಬಯಿ ಡಿಸ್ಟ್ರಿಕ್ಟ ಪೋಲಿಸ ಆಕ್ಟ. | ಕಲಮುಗಳು ೩೩ ಮತ್ತು ೩೪ |

ಮುಸಲ್ಮಾನರ, ಆಂಗ್ಲೋ - ಇಂಡಿಯನ್ನರ ಅಥವಾ ಇಂಡಿಯನ್ ಕ್ರಿಶ್ಚಿಯನ್‌ರ ಸಲುವಾಗಿ ಕಾದಿಡಲ್ಪಟ್ಟ ಸ್ಥಳಗಳಿಗಾಗಿ ಚುನಾಯಿಸಲ್ಪಟ ಯಾವನೇ ಕೌನ್ಸಿಲರನು ಅಥವಾ ಸಭಾಸದನು ಈ ಕಾನೂನು ಅಮಲಿನಲ್ಲಿ ಬರುವ ಮೊದಲು, ಯಾವ ಅಧಿಕಾರಾವಧಿಗಾಗಿ ಕ್ರಮಬದ್ಧವಾಗಿ ಚುನಾಯಿ-ಸಲ್ಪಟ್ಟಿರುವನೋ, ಆ ಅವಧಿಯಲ್ಲಿ (ಪ್ರಸಂಗಾನುಸಾರ, ನಗರಸಭೆಯು ಲೋಕಲ್ ಬೋರ್ಡಿನ (ಅಥವಾ) ಗ್ರಾಮಪಂಚಾಯತಿಯ ಸಭಾಸದನಾಗಿ ಉಳಿಯುವ ಅವನ ಹಕ್ಕಿಗೆ, ಈ ಕಾನೂನಿನಲ್ಲಿಯ ಯಾವದೇ ವಿಷಯದಿಂದ ಬಾಧೆ ಬರಲಾರದು.

# ನಿಯಮಗಳು.

೧೦೮ನೇ ಕಲಮಿನ (೧) (ಅ) ಉಪಕಲಮಿನನ್ವಯ ಕಲೆಕ್ಟರನು ಯಾವ ರೀತಿಯಿಂದ ವಿಚಾರಣೆಯನ್ನು ಮಾಡಬೇಕೆಂಬುವದರ ಬಗ್ಗೆ ಮಾಡಲ್ಪಟ್ಟ ನಿಯಮಗಳು.

(ಜನರಲ್ ಡಿಪಾರ್ಟಮೆಂಟ ನಂಬರು ೧೭೪/೮ ದಿನಾಂಕ ೭-೬-೪೦, ಹೆಲ್ಥ ಮತ್ತು ಲೋಕಲ್ ಸೆಲ್ಫ ಗವ್ಹರ್ನಮೆಂಟ ಡಿಪಾರ್ಟಮೆಂಟ ನಂಬರು ಎಸ್ ೧೭೪/೮ ದಿನಾಂಕ ೨೩-೬-೧೯೪೯ ರಿಂದ ತಿದ್ದುಪಡೆಯಾದದ್ದು).

೧೯೩೩ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತಿಯ ಕಾನೂನಿನ (೧೯೩೩ನೇ ಇಸ್ವಿಯ ಮುಂಬಯಿ ಕಾನೂನು ನಂಬರು ೬) (ಇನ್ನು ಮುಂದೆ ಅದನ್ನು "ಸದರ ಕಾನೂನು" ಎಂದು ಉಲ್ಲೇಖ ಮಾಡಲಾಗಿದೆ) ೧೦೮ನೇ ಕಲಮಿನ ೧ನೇ ಉಪಕಲಮಿನ (ಅ) ರಕಮಿನನ್ವಯ ದೊರೆತ ಅಧಿಕಾರವನ್ನು ಉಪಯೋಗಿಸಿ (ನಡಿಸಿ) ಮುಂಬಯಿ ಸರಕಾರದವರು ಈ ಕೆಳಗಿನ ನಿಯಮಗಳನ್ನು ಮಾಡಿರುತ್ತಾರೆ:

೧. ಯಾವುದೇ ಸ್ಥಾನಿಕ ಕ್ಷೇತ್ರವನ್ನು, ಈ ಕಾನೂನಿನ ೪ನೇ ಕಲಮಿನ ೧ನೇ ಉಪಕಲಮಿನನ್ವಯ ಗ್ರಾಮವೆಂದು ಜಾಹೀರಮಾಡಬೇಕೆಂದು ಯೋಚಿಸಲ್ಪಟ್ಟಾಗೆಲ್ಲ, ಕಲೆಕ್ಟರನು ಇಂಥ ಸ್ಥಾನಿಕ ಕ್ಷೇತ್ರದ ಜನಸಂಖ್ಯೆಯನ್ನು ಮತ್ತು ವಿಸ್ತಾರವನ್ನು, ಮತ್ತು ಇಂಥ ಸ್ಥಾನಿಕ ಕ್ಷೇತ್ರವು ಮುಲ್ಕಿ ಗ್ರಾಮವನ್ನು ಒಳಗೊಂಡಿರುವದೋ ಅಥವಾ ಮುಲ್ಕಿಗ್ರಾಮಗಳ ಸಮುದಾಯವಾಗಿರುವದೋ ಅಥವಾ ಮುಲ್ಕಿಗ್ರಾಮದ ಭಾಗವಾಗಿರುವ ಸಣ್ಣಹಳ್ಳಿಗಳಲ್ಲಿ ಸಮಾವೇಶವಾಗಿರುವದೋ, ಎಂಬುದನ್ನು ನಿರ್ಧರಿಸಲು ವಿಚಾರಣೆಯನ್ನು ಮಾಡಬೇಕು.

೨. (i) ಸ್ಥಾನಿಕ ಕ್ಷೇತ್ರವು ೧ ಸಾವಿರಕ್ಕಿಂತ ಕಡಿಮೆಯಲ್ಲದ ಜನವಸತಿಯುಳ್ಳ ಮುಲ್ಕಿಗ್ರಾಮವನ್ನು ಒಳಗೊಂಡಿದ್ದರೆ, ಅಥವಾ

(ii) ಸ್ಥಾನಿಕ ಕ್ಷೇತ್ರವು ೧ ಸಾವಿರಕ್ಕಿಂತ ಕಡಿಮೆ ಜನವಸತಿಯುಳ್ಳ ಮುಲ್ಕಿಗ್ರಾಮವನ್ನು ಒಳಗೊಂಡಿದ್ದರೆ ಮತ್ತು ಅದರಲ್ಲಿ ಕನಿಷ್ಟ ೫೦ ಪ್ರೌಢ ರಹವಾಸಿಗಳು ಪಂಚಾಯತದ ಸ್ಥಾಪನೆಗಾಗಿ ಲೇಖಿ ಅರ್ಜಿಯನ್ನು ಮಾಡಿದರೆ, ಕಲೆಕ್ಟರನು, ಇದಕ್ಕೆ ಜೋಡಿಸಿದ "ಅ" ನಮೂನೆಯಲ್ಲಿ ಒಂದು ಪತ್ರಕವನ್ನು ಸರಕಾರಕ್ಕೆ ಸಾದರ ಪಡಿಸಬೇಕು.

೩. ಸ್ಥಾನಿಕ ಕ್ಷೇತ್ರವು ಮುಲ್ಕಿಗ್ರಾಮಗಳ ಸಮುದಾಯವಿದ್ದಾಗ್ಗೆ ಅಥವಾ ಮುಲ್ಕಿಗ್ರಾಮದ ಭಾಗವಿರುವ ಸಣ್ಣಹಳ್ಳಿಗಳಿದ್ದಾಗ್ಗೆ, ಕಲೆಕ್ಟರನು ಮೊದಲು

(i) ಗ್ರಾಮಗಳಲ್ಲಿಯ ಅಥವಾ ಸಣ್ಣ ಹಳ್ಳಿಗಳಲ್ಲಿಯ ಪ್ರತಿಯೊಂದು ಗ್ರಾಮದ ಅಥವಾ ಸಣ್ಣಹಳ್ಳಿಯ ಬಹುಸಂಖ್ಯ ರಹವಾಸಿಗಳು, ಗ್ರಾಮವೆಂದು ಜಾಹೀರ ಮಾಡುವದಕ್ಕಾಗಿ, ಸದರ ಗ್ರಾಮಗಳನ್ನು ಅಥವಾ ಸಣ್ಣ ಹಳ್ಳಿಗಳನ್ನು ಒಂದುಗೂಡಿಸುವದಕ್ಕೆ ಸಮ್ಮತಿಸುವರೋ ಹೇಗೆ, ಅಥವಾ

(ii) ಇಂಥ ಗ್ರಾಮಗಳಲ್ಲಿ ಅಥವಾ ಸಣ್ಣ ಹಳ್ಳಿಗಳಲ್ಲಿ ಅಥವಾ ಅವುಗಳ ಗುಂಪುಗಳಲ್ಲಿ ಈ ಮೊದಲೆ ಗ್ರಾಮ ಪಂಚಾಯತಗಳು ಸ್ಥಾಪಿಸಲ್ಪಟ್ಟಿವೆಯೋ ಮತ್ತು ಸಮಾಧಾನಕಾರಕವಾಗಿ ಕೆಲಸ ನಡಿಸುತ್ತಿರುವವೋ ಎಂಬುದನ್ನು ನಿರ್ಧರಿಸಬೇಕು. ಕಲೆಕ್ಟರನಿಗೆ (೧) ಇಂಥ ಗ್ರಾಮಗಳ ಅಥವಾ ಸಣ್ಣ ಹಳ್ಳಿಗಳ ಗುಂಪಿಗಾಗಿ ಪಂಚಾಯತನ್ನು ಸ್ಥಾಪಿಸಲು ಬಹುಸಂಖ್ಯ ಜನರು ಸಮ್ಮತಿಸುವರು, ಅಥವಾ (೨) ಇಂಥ ಗ್ರಾಮಗಳಲ್ಲಿ ಅಥವಾ ಸಣ್ಣ ಹಳ್ಳಿಗಳಲ್ಲಿ ಪಂಚಾಯತಗಳು ಸ್ಥಾಪಿಸಲ್ಪಟ್ಟಿದ್ದು, ಅವು ಸಮಾಧಾನಕಾರಕವಾಗಿ ಕೆಲಸ ನಡಿಸುತ್ತಿವೆಯೆಂದು, ತೃಪ್ತಿಯಾದರೆ, ಅವನು ಇದಕ್ಕೆ ಜೋಡಿಸಿದ "ಬ" ನಮೂನೆಯಲ್ಲಿ ಒಂದು ಪತ್ರಕವನ್ನು ಸರಕಾರಕ್ಕೆ ಸಾದರ ಪಡಿಸಬೇಕು.

## ನಮೂನೆ "ಅ"

(೨ನೇ ನಿಯಮವನ್ನು ನೋಡಿರಿ.)

| ಮುಲ್ಕಿಗ್ರಾಮದ ಹೆಸರು ೧ | ತಾಲೂಕ ೨ | ಜಿಲ್ಹಾ ೩ | ಮುಲ್ಕಿಗ್ರಾಮದ ವಿಸ್ತಾರ ೪ | ಮುಲ್ಕಿಗ್ರಾಮದ ಜನಸಂಖ್ಯೆ ೫ | ಕಲೆಕ್ಟರನ ಶರಾ ೬ |
|---|---|---|---|---|---|
| | | | | | |

ಕಲೆಕ್ಟರ.

# ನಮೂನೆ "ಬ"

(೩ನೇ ನಿಯಮವನ್ನು ನೋಡಿರಿ.)

| ಸ್ಥಾನಿಕ ಕ್ಷೇತ್ರದಲ್ಲಿ ಸಮಾವೇಶವಾಗಿರುವ ಗ್ರಾಮಗಳ ಅಥವಾ ಸಣ್ಣ ಹಳ್ಳಿಗಳ ಹೆಸರುಗಳು | ತಾಲೂಕ | ಜಿಲ್ಹಾ | ಸ್ಥಾನಿಕ ಕ್ಷೇತ್ರದ ವಿಸ್ತಾರ, ಮತ್ತು ಸ್ಥಾನಿಕ ಕ್ಷೇತ್ರವು ಮುಳ್ಳಿ ಗ್ರಾಮಗಳ ಭಾಗಗಳನ್ನು ಮತ್ತು ಸಣ್ಣಹಳ್ಳಿಗಳನ್ನು ಒಳಗೊಂಡಾಗ್ಗೆ, ಸರ್ವೆನಂಬರುಗಳನ್ನು ಕೊಡಬೇಕು. | ಸ್ಥಾನಿಕ ಕ್ಷೇತ್ರದ ಜನಸಂಖ್ಯೆ | ಕಲೆಕ್ಟರನ ಶರಾ |
|---|---|---|---|---|---|
| ೧ | ೨ | ೩ | ೪ | ೫ | ೬ |
| | | | | | |

ಕಲೆಕ್ಟರ.

## ೧೯೪೮ನೇ ಇಸ್ವಿಯ ಮುಂಬಯಿ ಗ್ರಾಮಪಂಚಾಯತಗಳ ಚುನಾವಣಿಯ ನಿಯಮಗಳು.

(೭ನೇ ಕಲಮಿನನ್ವಯ ಪಂಚಾಯತದ ಸಭಾಸದರ ಚುನಾವಣೆಯನ್ನು ಜರುಗಿಸತಕ್ಕ ರೀತಿಯನ್ನು ಗೊತ್ತುಪಡಿಸುವದಕ್ಕಾಗಿ ಮಾಡಿದ ನಿಯಮಗಳು).

ಹೆಲ್ಥ ಮತ್ತು ಲೋಕಲ್ ಗವ್ಹರ್ನಮೆಂಟ ಡಿಪಾರ್ಟಮೆಂಟ ನಂಬರ ಎಸ್ ೧೭೪/೩-ಸಿ ದಿನಾಂಕ ೨-೬-೧೯೪೮.

(ಹೆಲ್ಥ ಮತ್ತು ಲೋಕಲ್ ಗವ್ಹರ್ನಮೆಂಟ ಡಿಪಾರ್ಟಮೆಂಟಿನ ನಂಬರುಗಳು, ಎಸ್ ೧೭೪/೩ (ಎ) ದಿನಾಂಕ ೧೮-೧೦-೧೯೪೮, ಎಸ್ ೧೭೪/೩ (ಸಿ) ದಿನಾಂಕ ೨-೬-೧೯೪೯, ಎಸ್ ೧೭೪/೩ ದಿನಾಂಕ ೧೯-೭-೪೯ ಮತ್ತು ಎಸ್ ೧೭೪/೩ ದಿನಾಂಕ ೧೩-೧-೧೯೫೦ ಇವುಗಳಿಂದ ತಿದ್ದುಪಡೆಯಾದದ್ದು).

ಮುಂಬಯಿ ಗ್ರಾಮಪಂಚಾಯತಿಯ ಕಾನೂನಿನ (೧೯೩೩ನೇ ಇಸ್ವಿಯ ಮುಂಬಯಿ ಕಾನೂನು ನಂಬರ ೬) ೧೦೮ನೇ ಕಲಮಿನ ೧ನೇ ಉಪಕಲಮಿನ (ಕ) ಮತ್ತು (ಕ್ಯೂ) ರಕಮುಗಳನ್ವಯ ದೊರೆತ ಅಧಿಕಾರವನ್ನು ಉಪಯೋಗಿಸಿ ಮತ್ತು ೧೯೪೦ನೇ ಇಸ್ವಿಯ ಜೂನ ೬ನೇ ದಿನಾಂಕದ ಸರಕಾರಿ ಪ್ರಕಟನೆ ಜನರಲ್ ಡಿಪಾರ್ಟಮೆಂಟ ನಂಬರು ಸ ೧೭೪/೩ ರಲ್ಲಿ ಪ್ರಸಿದ್ಧಮಾಡಿದ ಮುಂಬಯಿ ಗ್ರಾಮ ಪಂಚಾಯತಗಳ ಚುನಾವಣೆಯ ನಿಯಮಗಳನ್ನು ರದ್ದುಗೊಳಿಸಿ, ಮುಂಬಯಿ ಸರಕಾರದವರು ಈ ಕೆಳಗಿನ ನಿಯಮಗಳನ್ನು ಮಾಡಿರುತ್ತಾರೆ.

### ೧. ಸಂಕ್ಷಿಪ್ತ ಹೆಸರು.

ಈ ನಿಯಮುಗಳಿಗೆ ಮುಂಬಯಿ ಗ್ರಾಮಪಂಚಾಯತಗಳ ಚುನಾವಣಿಯ ನಿಯಮುಗಳೆಂದೆನ್ನಬಹುದು.

### ೨. ವ್ಯಾಖ್ಯೆಗಳು.

ಈ ನಿಯಮುಗಳಲ್ಲಿ ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವುದೇ ಬಾಧೆಬರದಿದ್ದರೆ,

(೧) "ಆಕ್ಟ" ಅಂದರೆ, ೧೯೩೩ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತಗಳ ವಿಷಯದ ಕಾನೂನು ಎಂದರ್ಥವಾಗುತ್ತದೆ;

(೨) "ಚುನಾವಣಿ" ಅಂದರೆ ಗ್ರಾಮಪಂಚಾಯತಿಗೆ ಸಭಾಸದನನ್ನು ಆರಿಸುವದಕ್ಕೆ ನಡೆಪ ಚುನಾವಣಿಯು ಎಂದರ್ಥವಾಗುತ್ತದೆ;

(೩) "ಅಧ್ಯಕ್ಷ ಸ್ಥಾನದಲ್ಲಿರುವ ಅಧಿಕಾರಿಯು" * ಅಂದರೆ ಅಧ್ಯಕ್ಷ ಸ್ಥಾನದಲ್ಲಿರುವ ಅಧಿಕಾರಿಯೆಂದು ಮಾಮಲೇದಾರನಿಂದ ಅಥವಾ ಮಹಾಲ ಕರಿಯಿಂದ ೭ನೇ ನಿಯಮದನ್ವಯ ನೇಮಿಸಲ್ಪಟ್ಟ ಯಾವನೇ ಮನುಷ್ಯನು ಎಂದರ್ಥವಾಗುತ್ತದೆ;

(೪) "ಕಾದಿಟ್ಟ ಸ್ಥಳ" ಅಂದರೆ, ಸ್ತ್ರೀಯರ, ಮುಸಲ್ಮಾನರ, ಹರಿ-ಜನರ ಅಥವಾ ಹಿಂದುಳಿದ ಜಾತಿಗಳ ಪ್ರತಿನಿಧಿಗಳ ಸಲುವಾಗಿ, ಈ ಬಗ್ಗೆ ಈ ಕಾನೂನಿನ ೧೦೪ನೇ ಕಲಮಿನ ೧ನೇ ಉಪಕಲಮಿನ (ಬ) ರಕಮಿನನ್ವಯ ಮಾಡಲ್ಪಟ್ಟ ನಿಯಮಗಳಿಂದ ಕಾದಿಡಲ್ಪಟ್ಟ ಸ್ಥಳವು ಎಂದರ್ಥವಾಗುತ್ತದೆ;

(೫) "ರಿಟರ್ನಿಂಗ ಆಫೀಸರ" ಅಂದರೆ ರಿಟರ್ನಿಂಗ ಅಫೀಸರನೆಂದು ೭ನೇ ನಿಯಮದನ್ವಯ ಮಾಮಲೇದಾರನಿಂದ ಅಥವಾ ಮಹಾಲಕರಿಯಿಂದ ನೇಮಿಸಲ್ಪಟ್ಟ ಯಾವನೇ ಮನುಷ್ಯನು ಎಂದರ್ಥವಾಗುತ್ತದೆ;

(೬) "ಕಲಮು" ಅಂದರೆ ಸದರಿ ಕಾನೂನಿನ ಕಲಮು ಎಂದರ್ಥ ವಾಗುತ್ತದೆ.

(೭) "ವಿಶಿಷ್ಟ ಅಧಿಕಾರಿಯು" ಅಂದರೆ, ಸದರ ಕಾನೂನಿನ ೭ನೇ ಕಲಮಿನ ೩ನೇ ಉಪಕಲಮಿನನ್ವಯ ಕಲೆಕ್ಟರನ ಅಧಿಕಾರಗಳನ್ನು ನಡಿಸಲಿಕ್ಕೆ ೯೫ನೇ ಕಲಮಿನ ೩ನೇ ಉಪಕಲಮಿನನ್ವಯ ಪ್ರಾಂತಿಕ ಸರಕಾರದವರಿಂದ ನೇಮಿಸಲ್ಪಟ್ಟ ಅಧಿಕಾರಿಯು ಎಂದರ್ಥ ವಾಗುತ್ತದೆ.

(೮) "ಗ್ರಾಮದ ಚಾವಡಿ" ಎಂಬ ಸಂಜ್ಞೆಯಲ್ಲಿ ೧೮೭೯ನೇ ಇಸ್ವಿಯ ಮುಂಬಯಿ ಭೂಮಿಯ ಮಹಸೂಲಿನ ಕಾನೂನಿನನ್ವಯ ಚಾವಡಿಯೆಂದು ತಿಳಿಯಲ್ಪಟ್ಟ ಯಾವದೊಂದು ಸ್ಥಳದ ಸಮಾವೇಶವಾಗುತ್ತದೆ;

* ಪ್ರಿಸಾಯಿಡಿಂಗ ಆಫೀಸರ.

(೯) "ಮತದಾರ" ಅಂದರೆ, ಚುನಾವಣೆಯ ಕಾಲಕ್ಕೆ ಮತ ಕೊಡಲಿಕ್ಕೆ ೭ನೇ ಕಲಮಿನ ೨ನೇ ಉಪಕಲಮಿನನ್ವಯ ಹಕ್ಕಿರುವ ಮನುಷ್ಯನು ಎಂದರ್ಥವಾಗುತ್ತದೆ;

(೧೦) ಈ ನಿಯಮಗಳಲ್ಲಿ ವ್ಯಾಖ್ಯಾಯಿಸಲ್ಪಡದಿದ್ದ ಶಬ್ದಗಳಿಗೆ ಮತ್ತು ಸಂಜ್ಞೆಗಳಿಗೆ, ಅನುಕ್ರಮವಾಗಿ ಸದರ ಕಾನೂನಿನಲ್ಲಿ ಅವುಗಳಿಗೆ ಕೊಡಲ್ಪಟ್ಟ ಅರ್ಥಗಳಿರುವವು.

**೩. ಮತದಾರರ ಯಾದಿಯನ್ನು ತಯಾರಿಸುವದು.**

(೧) ಸಾಮಾನ್ಯ ಚುನಾವಣೆಗಾಗಿ ಗೊತ್ತುಪಡಿಸಲ್ಪಟ್ಟ ದಿನಾಂಕ ದಿಂದ ೩ ತಿಂಗಳಿಗಿಂತ ಕಡಿಮೆಯಲ್ಲದ ಕಾಲಮುಂಚಿತವಾಗಿ, ಕಲೆಕ್ಟರನು ಈ ಬಗ್ಗೆ ತಾನು ನೇಮಿಸಿದ ಅಧಿಕಾರಿಯ ಕಡೆಯಿಂದ ಒಂದು ಮತದಾರರ ಯಾದಿಯನ್ನು ಗ್ರಾಮದ ಪ್ರಾದೇಶಿಕ ಭಾಷೆಯಲ್ಲಿ ತಯಾರ ಮಾಡಿಸಬೇಕು.

(೨) ಸಭಾಸದರ ಚುನಾವಣೆಯಬಗ್ಗೆ ಗ್ರಾಮವನ್ನು ವಾರ್ಡುಗಳಲ್ಲಿ ವಿಭಾಗ ಮಾಡಿದಕಾಲಕ್ಕೆ, ಎಷ್ಟು ವಾರ್ಡುಗಳಿರುವವೋ ಅಷ್ಟು ವಿಭಾಗ ಗಳನ್ನು ಮತದಾರರ ಯಾದಿಯಲ್ಲಿ ಮಾಡಬೇಕು; ಮತ್ತು ಪ್ರತ್ಯೇಕ ಮತದಾ ರನ ಹೆಸರನ್ನು, ಅವನು ಸಾಮಾನ್ಯವಾಗಿ ಯಾವ ವಾರ್ಡಿನಲ್ಲಿ ವಾಸವಾಗಿರು ವನೋ ಆ ವಾರ್ಡಿಗೆ ಸಂಬಂಧಪಟ್ಟ ವಿಭಾಗದಲ್ಲಿ ಅಥವಾ ಅವನು ಯಾವದೇ ವಾರ್ಡಿನಲ್ಲಿ ವಾಸವಾಗಿರದಿದ್ದರೆ, ಯಾವ ಮನೆಯ ಅಥವಾ ಭೂಮಿಯ ಸಂಬಂಧದಲ್ಲಿ ಅವನು ಮತಕೊಡಲು ಪಾತ್ರನಿರುವನೋ ಆ ಮನೆಯು ಅಥವಾ ಭೂಮಿಯು ಯಾವ ವಾರ್ಡಿನಲ್ಲಿರುವದೋ, ಆ ವಾರ್ಡಿಗೆ ಸಂಬಂಧಪಟ್ಟ ವಿಭಾಗದಲ್ಲಿ ನಮೂದ ಮಾಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಈ ನಿಯಮದನ್ವಯ ಒಬ್ಬ ಮತ ದಾರನ ಹೆಸರನ್ನು ಎರಡು ಇಲ್ಲವೆ ಅಧಿಕ ವಿಭಾಗಗಳಲ್ಲಿ ನಮೂದಮಾಡಲು ಅಧಿಕಾರವಿದ್ದಾಗ್ಗೆ, ಅವನು ಯಾದಿಯನ್ನು ತಯಾರಮಾಡುವ ಅಧಿಕಾರಿಯ ಕಡೆಯಿಂದ ಈ ಬಗ್ಗೆ ನೋಟೀಸು ಮುಟ್ಟಿದ ೭ ದಿವಸಗಳಲ್ಲಿ, ಯಾವ ವಿಭಾಗದಲ್ಲಿ ತನ್ನ ಹೆಸರನ್ನು ನಮೂದ ಮಾಡಬೇಕೆಂಬುದನ್ನು ಗೊತ್ತುಪಡಿಸ ಬೇಕು.

(೩) ಮತದಾರರ ಯಾದಿಯನ್ನು, ಅದು ತಯಾರಿಸಲ್ಪಟ್ಟನಂತರ, ಆದಷ್ಟು ಬೇಗನೆ ಅದರ ಪ್ರತಿಗಳನ್ನು, ಗ್ರಾಮದ ಚಾವಡಿಯಲ್ಲಿ ಅಥವಾ ಗ್ರಾಮಪಂಚಾಯತದ ಕಚೇರಿಯಲ್ಲಿ ಅಥವಾ ೧ನೇ ಉಪನಿಯಮದನ್ವಯ ಆ ಯಾದಿಯನ್ನು ತಯಾರಿಸಿದ ಅಧಿಕಾರಿಯಿಂದ ಈ ಬಗ್ಗೆ ಗೊತ್ತುಪಡಿಸಲ್ಪಡ ಬಹುದಾದಂಥ ಇತರ ಸಾರ್ವಜನಿಕ ಸ್ಥಳದಲ್ಲಿ, ಅಂಟಿಸಿ ಪ್ರಸಿದ್ಧಪಡಿಸಬೇಕು. ಇಂಥ ಯಾದಿಯು ಗ್ರಾಮದ ಪ್ರಾದೇಶಿಕ ಭಾಷೆಯಲ್ಲಿಯ ಒಂದು ನೋಟೀಸಿ ನೊಂದಿಗೆ ಪ್ರಸಿದ್ಧಿಸಲ್ಪಡಬೇಕು. ಆ ನೋಟೀಸಿನಲ್ಲಿ, ತನ್ನ ಹೆಸರು ಸದರಿ ಯಾದಿಯಲ್ಲಿ ನಮೂದ ಮಾಡಲ್ಪಟ್ಟಿರುವದಿಲ್ಲ ಮತ್ತು ತನ್ನ ಹೆಸರು ಅದರಲ್ಲಿ ನಮೂದಮಾಡಲ್ಪಡಬೇಕೆಂದು ಹಕ್ಕಿನಿಂದ ಹೇಳುವ ಯಾವನೇ ಮನುಷ್ಯನು, ಅಥವಾ ಯಾವನು ತನ್ನ ಹೆಸರು ಸದರಿ ಯಾದಿಯಲ್ಲಿ ನಮೂದಮಾಡ ಲ್ಪಟ್ಟಿದೆ ಮತ್ತು ತನ್ನ ಅಥವಾ ಇತರ ಯಾವನೇ ಮನುಷ್ಯನ ಹೆಸರು ತಪ್ಪಾಗಿ ನಮೂದಮಾಡಲ್ಪಟ್ಟಿದೆ, ಅಥವಾ ಯಾವನೇ ಮನುಷ್ಯನ ಹೆಸರನ್ನು ಅದರಲ್ಲಿ ಸೇರಿಸಲು ತಪ್ಪಿರುತ್ತದೆ, ಎಂದು ತಿಳಿಯುವನೋ, ಅವನು ಇಂಥ ಯಾದಿಯ ತಿದ್ದುಪಡೆಯಬಗ್ಗೆ, ಇಂಥ ನೋಟೀಸು ಪ್ರಸಿದ್ಧಿಸಲ್ಪಟ್ಟ ದಿನಾಂಕದಿಂದ ೧೪ ದಿವಸಗಳೊಳಗಾಗಿ, ವಿಶಿಷ್ಟ ಅಧಿಕಾರಿಯ ಕಡೆಗೆ, ಅಥವಾ ಇಂಥ ಯಾವನೇ ಅಧಿಕಾರಿಯು ನೇಮಿಸಲ್ಪಟ್ಟಿರದಿದ್ದರೆ, ಕಲೆಕ್ಟರನ ಕಡೆಗೆ ಲೇಖಿ ಅರ್ಜಿಯನ್ನು ಮಾಡಬಹುದು, ಎಂಬ ವಿವರವಿರಬೇಕು.

**೪. ಮತದಾರರ ಯಾದಿಯ ತಿದ್ದುಪಡೆ.**

(೧) ಪ್ರಸಂಗಾನುಸಾರ, ವಿಶಿಷ್ಟ ಅಧಿಕಾರಿಯು ಅಥವಾ ಕಲೆಕ್ಟರನು ೩ನೇ ನಿಯಮದ ೩ನೇ ಉಪನಿಯಮದನ್ವಯ ಮತದಾರರ ಯಾದಿಯ ತಿದ್ದುಪಡೆಯಬಗ್ಗೆ ಮಾಡಲ್ಪಟ್ಟ ಅರ್ಜಿಗಳ ನಿರ್ಣಯ ಮಾಡಬೇಕು. ಮತ್ತು ಅವನು ಮಾಡಿದ ನಿರ್ಣಯಗಳಿಗನುಸರಿಸಿ ಮತದಾರರ ಯಾದಿಯು ಸುಧಾರಿಸಲ್ಪಡಬೇಕು.

(೨) ಹೀಗೆ ಸುಧಾರಿಸಲ್ಪಟ್ಟ ಮತದಾರರ ಯಾದಿಯು ಅದು ೪ನೇ ನಿಯಮದನ್ವಯ ಯಾವ ಅಧಿಕಾರಿಯಿಂದ ತಯಾರಿಸಲ್ಪಟ್ಟಿದೆಯೋ ಅವನಿಂದ ಅದರ ಪ್ರತಿಗಳನ್ನು ಗ್ರಾಮದ ಚಾವಡಿಯಲ್ಲಿ ಅಥವಾ ಗ್ರಾಮ ಪಂಚಾಯತದ ಕಚೇರಿಯಲ್ಲಿ ಅಥವಾ ಸದರ ಅಧಿಕಾರಿಯು ಈ ಬಗ್ಗೆ

ನೆಮಿಸಬಹುದಾದಂಥ ಇತರ ಸಾರ್ವಜನಿಕ ಸ್ಥಳದಲ್ಲಿ ಅಂಟಿಸಿ ಚುನಾವಣೆಯ ದಿನಾಂಕದಿಂದ ೨ ತಿಂಗಳುಗಳಿಗೆ ಕಡಿಮೆಯಿಲ್ಲವಷ್ಟು ಕಾಲಮುಂಚಿತ ವಾಗಿ ಪ್ರಸಿದ್ಧಿಸಲ್ಪಡಬೇಕು.

**೫. ಮತಕೊಡಲು ಯಾರಿಗೆ ಅಧಿಕಾರವಿದೆ.**

೭ನೇ ಕಲಮಿನ ೨ನೇ ಉಪಕಲಮಿನಲ್ಲಿ ನಿರ್ದಿಷ್ಟ ಪಡಿಸಿದ ಅರ್ಹತೆಗಳು ಯಾವನಿಗಿರುವವೋ ಮತ್ತು ಮತದಾರರ ಯಾದಿಯಲ್ಲಿ ಯಾವನ ಹೆಸರು ನಮೂದಮಾಡಲ್ಪಟ್ಟಿರುವದೋ ಅಂಥ ಪ್ರತಿಯೊಬ್ಬ ಮನುಷ್ಯನಿಗೆ ಮತಕೊಡಲು ಅಧಿಕಾರವಿದೆ.

**೬. ಕಾದಿಟ್ಟ ಸ್ಥಳಗಳ ಸಲುವಾಗಿ ಉಮೇದವಾರರಿಗಿರಬೇಕಾದ ಅರ್ಹತೆಗಳು.**

ಸ್ತ್ರೀಯರಿಗಾಗಿ ಅಥವಾ ಯಾವುದೇ ಸಮಾಜದ, ವರ್ಗದ ಅಥವಾ ಜಾತಿಯ ಸಲವಾಗಿ ಯಾವುದೇ ಸ್ಥಳವನ್ನು ಕಾದಿಟ್ಟಿರುವಾಗ, ಪ್ರಸಂಗಾನುಸಾರ, ಕೇವಲ ಸ್ತ್ರೀಯರು ಅಥವಾ ಅಂಥ ಸಮಾಜದ, ವರ್ಗದ ಅಥವಾ ಜಾತಿಯ ಜನರು ಇಂಥ ಸ್ಥಳಗಳನ್ನು ತುಂಬುವದಕ್ಕೆ ಚುನಾಯಿತರಾಗಲು ಅರ್ಹರಿರುವರು.

**೭. ಚುನಾವಣೆಯ ಸಂಬಂಧ ನೌಕರವರ್ಗವನ್ನು ನೇಮಿಸುವದು.**

ಪ್ರತಿಯೊಂದು ಚುನಾವಣೆಯಬಗ್ಗೆ ಮಾಮಲೇದಾರನು ಅಥವಾ ಮಹಾಲಕರಿಯು ಚುನಾವಣೆಯನ್ನು ನಡೆಸಲು ಒಬ್ಬ ರಿಟರ್ನಿಂಗ ಆಫೀಸರ ಮತ್ತು ಮತಗಳನ್ನು ನೊಂದಾಯಿಸುವದಕ್ಕಾಗಿ, ಗೊತ್ತುಮಾಡಲ್ಪಟ್ಟ ಪ್ರತ್ಯೇಕ ಸ್ಥಳದ ಸಲುವಾಗಿ (ಇನ್ನುಮುಂದೆ ಪೋಲಿಂಗ ಸ್ಟೇಶನ್ (ಮತಗಟ್ಟೆ) ಎಂದು ಉಲ್ಲೇಖಮಾಡಲ್ಪಟ್ಟಿದೆ) ಪ್ರಿಸಾಯಿಡಿಂಗ ಆಫೀಸರನನ್ನು ನೇಮಿಸಬೇಕು. ಚುನಾವಣೆಯ ಕಾರ್ಯದಲ್ಲಿ ರಿಟರ್ನಿಂಗ ಆಫೀಸರ ಮತ್ತು ಪ್ರಿಸಾಯಿಡಿಂಗ ಆಫೀಸರರಿಗೆ ಸಹಾಯಮಾಡಲು ಮಾಮಲೇದಾರನು ಅಥವಾ ಮಹಾಲಕರಿಯು ಒಬ್ಬ ಅಥವಾ ಅಧಿಕ ಪೋಲಿಂಗ ಆಫೀಸರನ್ನು ನೇಮಿಸಬಹುದು.

## ೮. ಚುನಾವಣೆಯ ಹಂತಗಳನ್ನು ಗೊತ್ತುಮಾಡುವದು.

(೧) ಮಾಮಲೇದಾರನು ಅಥವಾ ಮಹಾಲಕರಿಯು ಚುನಾವಣೆಯ ಹಂತಗಳ ಸಲುವಾಗಿ ತಾರೀಖು, ವೇಳೆ ಮತ್ತು ಸ್ಥಳ ಇಲ್ಲವೆ ಸ್ಥಳಗಳನ್ನು ಗೊತ್ತುಮಾಡಬೇಕು.

ಆ ಹಂತುಗಳು ಯಾವವೆಂದರೆ:— (1) ಉಮೇದವಾರರು ನಾಮ ಪತ್ರಗಳನ್ನು ಕೊಡುವದು. ಮತ್ತು ನಾಮಪತ್ರಗಳ ಪರಿಶೀಲನೆ (2) ಮತ ದಾನ ಮಾಡುವದು, ಮತ್ತು (3) ಮತಗಳ ಎಣಿಕೆ.

ಆಪರೆ ಗೊತ್ತುಪಡಿಸುವದೇನಂದರೆ, ಮಾಮಲೇದಾರನು ಅಥವಾ ಮಹಾಲಕರಿಯು (1) ನಾಮಪತ್ರವನ್ನು ಕೊಡುವದಕ್ಕಾಗಿ ಗೊತ್ತುಮಾಡಿದ ದಿನ ಮತ್ತು ಮತದಾನಕ್ಕಾಗಿ ಗೊತ್ತುಮಾಡಿದ ದಿನ ಇವುಗಳ ನಡುವೆ ಕನಿಷ್ಟ ೨೫ ದಿವಸಗಳ ಅಂತರವನ್ನು ಇಡಬೇಕು. ಮತ್ತು (2) ನಾಮಪತ್ರವನ್ನು ಕೊಡುವದಕ್ಕಾಗಿ ಗೊತ್ತುಮಾಡಿದ ದಿನ ಮತ್ತು ನಾಮಪತ್ರಗಳ ಪರಿಶೀಲನೆ ಗಾಗಿ ಗೊತ್ತುಮಾಡಿದ ದಿನ ಇವುಗಳ ನಡುವಿನ ಅಂತರವು ೩ ದಿವಸಗಳನ್ನು ಮೀರದಂತೆ ಗೊತ್ತುಮಾಡಬೇಕು.

(೨) ೭ನೇ ನಿಯಮದನ್ವಯ, ರಿಟರ್ನಿಂಗ ಆಫೀಸರ ಮತ್ತು ಪ್ರಿಸಾಯಿಡಿಂಗ ಆಫೀಸರರೆಂದು ನೇಮಿಸಲ್ಪಟ್ಟವರ ಹೆಸರುಗಳನ್ನು ಅಥವಾ ಹುದ್ದೆಗಳನ್ನು ಒಳಗೊಂಡ ಇಂಥ ಚುನಾವಣೆಯ ಲೇಖಿ ನೋಟೀಸನ್ನು ಕೊಡಬೇಕು, ಮತ್ತು ಅದನ್ನು ಚುನಾವಣೆಗಾಗಿ ಗೊತ್ತುಮಾಡಲ್ಪಟ್ಟ ತಾರೀಖಿ ನಿಂದ ಸುಸ್ಪಷ್ಟವಾಗಿ ೪೫ ದಿವಸ ಮೊದಲು ಗ್ರಾಮದ ಪ್ರಾದೇಶಿಕ ಭಾಷೆಯಲ್ಲಿ ಕೊಡಬೇಕು. ಸದರ ನೋಟೀಸಿನ ಪ್ರತಿಗಳನ್ನು ಗ್ರಾಮದ ಚಾವಡಿಯಲ್ಲಿ ಅಥವಾ ಗ್ರಾಮಪಂಚಾಯತಿಯ ಕಚೇರಿಯಲ್ಲಿ ಅಥವಾ ಈ ಬಗ್ಗೆ ಮಾಮಲೇ ದಾರನು ಅಥವಾ ಮಹಾಲಕರಿಯು ಗೊತ್ತುಮಾಡಿದ ಯಾವುದೇ ಸಾರ್ವ ಜನಿಕ ಸ್ಥಳದಲ್ಲಿ ಅಂಟಿಸಬೇಕು.

(೩) ಮತದಾನಮಾಡಲು ಗೊತ್ತುಮಾಡಲ್ಪಟ್ಟ ದಿವಸದ ಹಿಂದಿನ ದಿವಸ ರಿಟರ್ನಿಂಗ ಆಫೀಸರನು ಗ್ರಾಮದಲ್ಲಿ ಡಂಗುರ ಹೊಡೆಯಿಸಿ, ಇಂಥ ಮತದಾನದ ದಿವಸ ಮತದಾನಮಾಡಲು ಗೊತ್ತುಮಾಡಲ್ಪಟ್ಟ ವೇಳೆಗೆ ಮತ್ತು

ಗೊತ್ತುಮಾಡಲ್ಪಟ್ಟ ಮತಗಟ್ಟೆಗಳಲ್ಲಿ ಹಾಜರಾಗುವದಕ್ಕೆ ಎಲ್ಲ ಮತದಾರರಿಗೆ ಬರಹೇಳುವ ನೋಟೀಸನ್ನು ಕೊಡಿಸಬೇಕು.

## ೯. ಉಮೇದವಾರರು ನಾಮಪತ್ರಗಳನ್ನು ಕೊಡುವದು.

ಉಮೇದವಾರರು ನಾಮಪತ್ರಗಳನ್ನು ಕೊಡುವದರಬಗ್ಗೆ ಗೊತ್ತು ಮಾಡಲ್ಪಟ್ಟ ದಿವಸ ಅಥವಾ ಅದಕ್ಕೂ ಮೊದಲು ಚುನಾವಣೆಗೆ ನಿಲ್ಲಲು ಇಚ್ಛಿಸುವ ಪ್ರತ್ಯೇಕ ಮನುಷ್ಯನು ಪಂಚಾಯತಿಯ ಸಭಾಸದನಾಗಿ ಕೆಲಸ ಮಾಡಲು ತನ್ನ ಸಮ್ಮತಿ ಇದೆಯೆಂದು ಸೂಚಿಸುವ ಮತ್ತು ತನ್ನ ಸಮಾಜ, ವರ್ಗ ಅಥವಾ ಜಾತಿಯ ಹೆಸರನ್ನು ನಮೂದಿಸಿ, ಗೊತ್ತುಮಾಡಲ್ಪಟ್ಟ ನಮೂನೆ (ಸಿ ನಮೂನೆ)ಯಲ್ಲಿ ಅರ್ಜಿಯನ್ನು ರಿಟರ್ನಿಂಗ ಆಫೀಸರನಿಗೆ ಕೊಡಬೇಕು.

ಗ್ರಾಮದ ಎರಡು ಅಥವಾ ಅಧಿಕ ವಾರ್ಡುಗಳಿಗಾಗಿ ಏಕಕಾಲಕ್ಕೆ ಅಥವಾ ಸುಮಾರು ಒಂದೇ ವೇಳೆಗೆ ಚುನಾವಣೆ ನಡೆದಕಾಲಕ್ಕೆ ಒಬ್ಬನೇ ಮನುಷ್ಯನು ಎಲ್ಲ ಅಥವಾ ಬೇಕಾದ ಇಂಥ ವಾರ್ಡುಗಳಿಗಾಗಿ ಚುನಾವಣೆಗೆ ನಿಲ್ಲಬಹುದು.

## ೧೦. ನಾಮಪತ್ರದ ಪರಿಶೀಲನೆ.

(೧) ನಾಮಪತ್ರದ ಪರಿಶೀಲನೆಯನ್ನು ಮಾಡುವದಕ್ಕಾಗಿ ಗೊತ್ತು ಮಾಡಲ್ಪಟ್ಟ ವೇಳೆಗೆ ಮತ್ತು ಸ್ಥಳದಲ್ಲಿ ಚುನಾವಣೆಗೆ ನಿಲ್ಲಲು ಇಚ್ಛಿಸುವ ಉಮೇದವಾರರು ಮತ್ತು ಇಂಥ ಪ್ರತಿಯೊಬ್ಬ ಉಮೇದವಾರನಿಂದ ಲೇಖಿ ಅಧಿಕಾರವನ್ನು ಪಡೆದ ಎರಡನೇ ಮನುಷ್ಯನು ಮಾತ್ರ ಹಾಜರ ಇರಲು ಅಧಿಕಾರವಿದೆ. ಚುನಾವಣೆಗೆ ನಿಲ್ಲಲು ಇಚ್ಛಿಸುವ ಉಮೇದವಾರರ ಅರ್ಜಿಗಳನ್ನು ಪರೀಕ್ಷಿಸುವದರ ಸಲುವಾಗಿ, ರಿಟರ್ನಿಂಗ ಆಫೀಸರನು ಇಂಥ ಜನರಿಗೆ ಯೋಗ್ಯ ಸೌಕರ್ಯಗಳನ್ನು ಒದಗಿಸಿ ಕೊಡಬೇಕು.

(೨) ರಿಟರ್ನಿಂಗ ಆಫೀಸರನು, ಅರ್ಜಿಗಳನ್ನು ಪರಿಶೀಲಿಸಿದನಂತರ ಮತ್ತು ಯಾವುದೇ ಅರ್ಜಿಯಬಗ್ಗೆ ತನ್ನ ಮುಂದೆ ಮಾಡಲ್ಪಟ್ಟ ಆಕ್ಷೇಪ ಗಳನ್ನು ವಿಚಾರಿಸಿ, ಉಮೇದವಾರರು ೮ನೇ ಕಲಮಿನನ್ವಯ ಅನರ್ಹರಿದ್ದರೆ ಅಥವಾ ಇರದಿದ್ದರೆ, ಅದಕ್ಕನುಸರಿಸಿ, ಅರ್ಜಿಗಳನ್ನು ನಿರಾಕರಿಸಬೇಕು

ಅಥವಾ ಸ್ವೀಕರಿಸಬೇಕು. ಅವನು ಪ್ರತಿಯೊಂದು ಅರ್ಜಿಯಮೇಲೆ ತನ್ನ ನಿರ್ಣಯವನ್ನು ನಮೂದಿಸಬೇಕು ಮತ್ತು ಅರ್ಜಿಯನ್ನು ನಿರಾಕರಿಸಿದ್ದರೆ, ನಿರಾಕರಿಸಿದ್ದರಬಗ್ಗೆ ಸಂಕ್ಷಿಪ್ತವಾಗಿ ಕಾರಣಗಳನ್ನು ಕೊಡಬೇಕು. ಅವನು ತನ್ನ ನಿರ್ಣಯವನ್ನು ಚುನಾವಣೆಗೆ ನಿಲ್ಲಲು ಇಚ್ಛಿಸುವ ಪ್ರತಿಯೊಬ್ಬ ಉಮೇದವಾರನಿಗೆ ತಿಳಿಸಬೇಕು.

## ೧೧. ನಾಮಪತ್ರಗಳನ್ನು ಹಿಂತೆಗೆದುಕೊಳ್ಳುವದು.

ಯಾವನೇ ಉಮೇದವಾರನು ೧೦ನೇ ನಿಯಮದನ್ವಯ ನಾಮಪತ್ರದ ಪರಿಶೀಲನೆಯು ಪೂರ್ಣವಾದ ೪೮ ತಾಸುಗಳೊಳಗಾಗಿ ಸಹಿಮಾಡಿ ಲೇಖಿ ನೋಟೀಸನ್ನು ರಿಟರ್ನಿಂಗ ಆಫೀಸರನಿಗೆ ಕೊಟ್ಟು ತನ್ನ ಉಮೇದವಾರಿಕೆಯನ್ನು ಹಿಂತೆಗೆದುಕೊಳ್ಳಬಹುದು. ಯಾವ ಉಮೇದವಾರನು ತನ್ನ ಉಮೇದವಾರಿಕೆಯನ್ನು ಹಿಂತೆಗೆದು ಕೊಂಡಿರುವನೋ ಅವನು ಉಮೇದವಾರಿಕೆಯನ್ನು ಹಿಂತೆಗೆದುಕೊಂಡದ್ದನ್ನು ರದ್ದುಪಡಿಸಲಾರನು. ಉಮೇದವಾರಿಕೆಯನ್ನು ಹಿಂತೆಗೆದುಕೊಳ್ಳಲು ಈ ನಿಯಮದಲ್ಲಿ ನಿರ್ದಿಷ್ಟಪಡಿಸಿದ ಅವಧಿಯನಂತರ ಕೊಡಲ್ಪಟ್ಟ ಯಾವುದೇ ನೋಟೀಸಿನಿಂದ ಏನೂ ಪ್ರಯೋಜನ ವಾಗಲಾರದು (ಅಮಲಿನಲ್ಲಿ ಬರಲಾರದು).

## ೧೨. ನಾಮಪತ್ರಗಳನ್ನು ನಿರಾಕರಿಸಿದ್ದರ ವಿರುದ್ಧ ಅಪೀಲು.

ರಿಟರ್ನಿಂಗ ಆಫೀಸರನು ೧೦ನೇ ನಿಯಮದ ೨ನೇ ಉಪನಿಯಮದನ್ವಯ ಅರ್ಜಿಯನ್ನು ನಿರಾಕರಿಸಿದ ನಿರ್ಣಯದ ವಿರುದ್ಧ, ಇಂಥ ನಿರ್ಣಯವು ಆದ ೩ ದಿವಸಗಳೊಳಗಾಗಿ ಕಲೆಕ್ಟರನ ಕಡೆಗೆ ಅಥವಾ ಪ್ರಾಂತಿಕಸರಕಾರದವರು ಈ ಬಗ್ಗೆ ನೇಮಿಸಿದ ಇತರ ಯಾವನೇ ಅಧಿಕಾರಿಯ ಕಡೆಗೆ ಅಪೀಲು ಮಾಡಿಕೊಳ್ಳಬಹುದು. ಪ್ರಸಂಗಾನುಸಾರ, ಕಲೆಕ್ಟರನು ಅಥವಾ ಇಂಥ ಇತರ ಅಧಿಕಾರಿಯು ಮತದಾನದಬಗ್ಗೆ ಗೊತ್ತುಮಾಡಲ್ಪಟ್ಟ ದಿನಕ್ಕಿಂತ ಮೊದಲು ೧೮ ದಿವಸಗಳಿಗಿಂತ ಹೆಚ್ಚು ತಡವಾಗದೆ ಸದರ ಅಪೀಲನ್ನು ನಿರ್ಣಯಿಸಬೇಕು. ಕಲೆಕ್ಟರನು ತನ್ನ ನಿರ್ಣಯವನ್ನು ಕೂಡಲೆ ರಿಟರ್ನಿಂಗ ಆಫೀಸರನಿಗೆ ತಿಳಿಸಬೇಕು.

**೧೩. ಉಮೇದವಾರರ ಯಾದಿಯನ್ನು ತಯಾರಿಸುವದು.**

ಕಲೆಕ್ಟರನು ೧೨ನೇ ನಿಯಮದನ್ವಯ ತಿಳಿಸಿದಮೇಲೆ ಮತ್ತು ೧೨ನೇ ನಿಯಮದನ್ವಯ ಉಮೇದವಾರಿಕೆಯನ್ನು ಹಿಂತೆಗೆದುಕೊಳ್ಳುವ ಅವಧಿಯು ಮುಗಿದಮೇಲೆ ರಿಟರ್ನಿಂಗ ಆಫೀಸರನು ಕ್ರಮಬದ್ಧವಾಗಿ ನಾಮಪತ್ರಗಳನ್ನು ಕೊಟ್ಟ ಎಲ್ಲ ಉಮೇದವಾರರ ಹೆಸರುಗಳ ಯಾದಿಯನ್ನು ತನ್ನ ಸಹಿಯೊಂದಿಗೆ ತಯಾರಿಸಬೇಕು, ಮತ್ತು ಅದನ್ನು ಚುನಾವಣೆಗಾಗಿ ಗೊತ್ತುಮಾಡಲ್ಪಟ್ಟ ತಾರೀಖಿಗಿಂತ ಕನಿಷ್ಟ ೧೫ ದಿವಸ ಮೊದಲು ಗ್ರಾಮದ ಚಾವಡಿಯಲ್ಲಿ ಅಥವಾ ಗ್ರಾಮಪಂಚಾಯತದ ಕಚೇರಿಯಲ್ಲಿ ಹಚ್ಚಬೇಕು ಅಥವಾ ಹಚ್ಚಿಸಬೇಕು.

**೧೪. ಪ್ರತಿಸ್ಪರ್ಧಿಗಳಿಲ್ಲದ ಚುನಾವಣೆ ಮತ್ತು ಚುನಾಯಿಸಲು ತಪ್ಪುವದು.**

(೧) ಯಾವ ವಾರ್ಡಿನಲ್ಲಿ ಸ್ತ್ರೀಯರಿಗಾಗಿ ಅಥವಾ ಯಾವದೊಂದು ಸಮಾಜದ, ವರ್ಗದ ಅಥವಾ ಜಾತಿಯ ಸಲುವಾಗಿ ಯಾವುದೇ ಸ್ಥಳವನ್ನು ಕಾಯ್ದಿಟ್ಟಿಲ್ಲವೋ, ಆ ವಾರ್ಡಿನಲ್ಲಿ ಮತ್ತು ಈ ಕೆಳಗಿನ ೨, ೩ ಮತ್ತು ೪ನೇ ಉಪನಿಯಮಗಳ ಶರಾವುಗಳಿಗೊಳಪಟ್ಟು ಎರಡನೇ ಯಾವುದೇ ವಾರ್ಡಿನಲ್ಲಿ, ಕ್ರಮಬದ್ಧವಾಗಿ ನಾಮಪತ್ರಕೊಟ್ಟ ಉಮೇದವಾರರ ಸಂಖ್ಯೆಯು ತುಂಬಲ್ಪಡ ತಕ್ಕ ಸ್ಥಳಗಳ ಸಂಖ್ಯೆಗೆ ಸಮವಿದ್ದರೆ ರಿಟರ್ನಿಂಗ ಆಫೀಸರನು, ಯಾವವೇ ಮತಗಳನ್ನು ತೆಗೆದುಕೊಳ್ಳದೆ, ಹೀಗೆ ನಾಮಪತ್ರ ಕೊಟ್ಟ ಉಮೇದವಾರನು ಅಥವಾ ಉಮೇದವಾರರು ಚುನಾಯಿಸಲ್ಪಟ್ಟಿರುತ್ತಾರೆಂದು ಜಾಹೀರ ಮಾಡ ಬೇಕು.

(೨) ಯಾವ ವಾರ್ಡಿನಲ್ಲಿ, ಸ್ತ್ರೀಯರಿಗಾಗಿ, ಅಥವಾ ಯಾವದೊಂದು ಸಮಾಜದ, ವರ್ಗದ ಅಥವಾ ಜಾತಿಯ ಸಲುವಾಗಿ ಸ್ಥಳ ಅಥವಾ ಸ್ಥಳ ಗಳನ್ನು ಕಾಯ್ದಿಟ್ಟಿದ್ದರೆ, ಆ ವಾರ್ಡಿನಲ್ಲಿ ಅಂಥ ಸ್ಥಳಗಳನ್ನು ತುಂಬಲು ಚುನಾಯಿಸಲ್ಪಡುವದಕ್ಕೆ ಅರ್ಹರಿದ್ದು, ಕ್ರಮಬದ್ಧವಾಗಿ ನಾಮಪತ್ರಕೊಟ್ಟ ಉಮೇದವಾರರ ಸಂಖ್ಯೆಯು ಇಂಥ ಜಾಗೆಗಳ ಸಂಖ್ಯೆಗೆ ಸಮನಿದ್ದರೆ, ಹೀಗೆ ಅರ್ಹರಿದ್ದ ಉಮೇದವಾರರು ಸದರಿ ಕಾಯ್ದಿಡಲ್ಪಟ್ಟ ಸ್ಥಳ ಅಥವಾ ಸ್ಥಳ ಗಳನ್ನು ತುಂಬಲು ಚುನಾಯಿಸಲ್ಪಟ್ಟಿರುತ್ತಾರೆಂದು ರಿಟರ್ನಿಂಗ ಆಫೀಸರನು

ಜಾಹೀರ ಮಾಡಬೇಕು. ಮತ್ತು ಈ ಉಪನಿಯಮದನ್ವಯ ತುಂಬಲ್ಪಡದ ಸ್ಥಳ ಅಥವಾ ಸ್ಥಳಗಳನ್ನು ತುಂಬಲು ಮಾತ್ರ, ಅವಶ್ಯವಿದ್ದರೆ, ಮತಗಳನ್ನು ತೆಗೆದುಕೊಳ್ಳಬೇಕು.

(೩) ಇಂಥ ಯಾವುದೇ ವಾರ್ಡಿನಲ್ಲಿ ಈ ರೀತಿಯಿಂದ ಕಾಯ್ದಿಡಲ್ಪಟ್ಟ ಸ್ಥಳ ಅಥವಾ ಸ್ಥಳಗಳನ್ನು ತುಂಬಲು ಚುನಾಯಿಸಲ್ಪಡುವದಕ್ಕೆ ಅರ್ಹರಿದ್ದು, ಕ್ರಮಬದ್ಧವಾಗಿ ನಾಮಪತ್ರಗಳನ್ನುಕೊಟ್ಟ ಉಮೇದವಾರರ ಸಂಖ್ಯೆಯು ಹೀಗೆ ಕಾಯ್ದಿಡಲ್ಪಟ್ಟ ಸ್ಥಳಗಳ ಸಂಖ್ಯೆಗಿಂತ ಕಡಿಮೆ ಇದ್ದರೆ, ಉಮೇದವಾರರು, ಇದ್ದರೆ ಅವರೆಲ್ಲರು ಹೀಗೆ ಕಾಯ್ದಿಡಲ್ಪಟ್ಟ ಸ್ಥಳಗಳನ್ನು ತುಂಬಲು ಚುನಾಯಿಸಲ್ಪಟ್ಟಿರುತ್ತಾರೆಂದು ರಿಟರ್ನಿಂಗ ಆಫೀಸರನು ಜಾಹೀರ ಮಾಡಬೇಕು, ಮತ್ತು ಉಳಿದ ಸ್ಥಳ ಅಥವಾ ಸ್ಥಳಗಳಿಗಾಗಿ ಚುನಾವಣೆಯಾಗುವದು ತಪ್ಪಿಹೋಯಿತು ಎಂದು ತಿಳಿಯಬೇಕು. ಹೀಗೆ ಕಾಯ್ದಿಡಲ್ಪಡದ ಸ್ಥಳಗಳಿಗಾಗಿಮಾತ್ರ, ಅವಶ್ಯವಿದ್ದರೆ, ಮತಗಳನ್ನು ತಕ್ಕೊಳ್ಳಬೇಕು.

(೪) ಇಂಥ ಯಾವುದೇ ವಾರ್ಡಿನಲ್ಲಿ ಹೀಗೆ ಕಾಯ್ದಿಡಲ್ಪಟ್ಟ ಸ್ಥಳ ಅಥವಾ ಸ್ಥಳಗಳನ್ನು ತುಂಬಲು ಚುನಾಯಿಸಲ್ಪಡಲು ಅರ್ಹರಿದ್ದು ಕ್ರಮಬದ್ಧವಾಗಿ ನಾಮಪತ್ರವನ್ನು ಕೊಟ್ಟ ಉಮೇದವಾರನು ಇರದಿದ್ದರೆ, ಇಂಥ ಸ್ಥಳ ಅಥವಾ ಸ್ಥಳಗಳ ಸಂಬಂಧ ಚುನಾವಣೆಯಾಗುವದು ತಪ್ಪಿ ಹೋಯಿತೆಂದು ತಿಳಿಯಬೇಕು. ಹೀಗೆ ಕಾಯ್ದಿಡಲ್ಪಡದ ಸ್ಥಳಗಳನ್ನು ತುಂಬಲು ಮಾತ್ರ, ಅವಶ್ಯವಿದ್ದರೆ, ಮತಗಳನ್ನು ತಕ್ಕೊಳ್ಳಬೇಕು.

(೫) ಮೇಲಿನ ಉಪನಿಯಮಗಳಿಗೆ ಒಳಪಟ್ಟ, ಕ್ರಮಬದ್ಧವಾಗಿ ನಾಮಪತ್ರಗಳನ್ನು ಕೊಟ್ಟ ಉಮೇದವಾರರ ಸಂಖ್ಯೆಯು ಯಾವುದೇ ವಾರ್ಡಿನಲ್ಲಿ ತುಂಬಲ್ಪಡತಕ್ಕ ಸ್ಥಳಗಳ ಸಂಖ್ಯೆಗಿಂತ ಕಡಿಮೆ ಇದ್ದರೆ, ರಿಟರ್ನಿಂಗ ಆಫೀಸರನು ಇಂಥ ಸ್ಥಳಗಳಲ್ಲಿ ಶಕ್ಯವಿದ್ದಷ್ಟು ಸ್ಥಳಗಳನ್ನು, ಉಮೇದವಾರರು ಇದ್ದರೆ, ಅವರೆಲ್ಲರು ಚುನಾಯಿಸಲ್ಪಟ್ಟರೆಂದು ಜಾಹೀರ ಮಾಡಬೇಕು.

**೧೫. ಪ್ರತಿಸ್ಪರ್ಧಿಗಳಿದ್ದ ಚುನಾವಣೆ.**

೧೪ನೇ ನಿಯಮದಲ್ಲಿಯ ಸಂಗತಿಗಳನ್ನು ಒಳಗೊಳ್ಳದ ಪ್ರಸಂಗಗಳಲ್ಲಿ, ಬರಿದಾದ ಸ್ಥಳಗಳನ್ನು ತುಂಬಲು ಬ್ಯಾಲಟ (ಗುಪ್ತಮತದಾನ) ಪದ್ಧತಿಯಿಂದ ಮತಗಳನ್ನು ತಕ್ಕೊಳ್ಳಬೇಕು.

**೧೬. ಪ್ರತಿಯೊಬ್ಬ ಉಮೇದವಾರನಿಗೆ (ಚುನಾವಣೆಯ) ಚಿನ್ಹ ಕೊಡುವದು.**

ಪ್ರತಿಸ್ಪರ್ಧಿಗಳಿದ್ದ ಪ್ರತ್ಯೇಕ ಚುನಾವಣೆಯ ಸಂಬಂಧದಲ್ಲಿ, ರಿಟರ್ನಿಂಗ ಆಫೀಸರನು, ಪ್ರತಿಯೊಬ್ಬ ಉಮೇದವಾರನಿಗೆ ಒಂದು ಸ್ಪಷ್ಟ (ಗುರುತಿಸುವ) ಚಿನ್ಹವನ್ನು ಒಪ್ಪಿಸಿ ಕೊಡಬೇಕು.

**೧೭. ಮತಪತ್ರಿಕೆಯ ನಮೂನೆ.**

ಮತಪತ್ರಿಕೆಯ ನಮೂನೆಯನ್ನು ಈ ನಿಯಮಗಳಿಗೆ ಜೋಡಿಸಿದ "ಅ" ನಮೂನೆಯಲ್ಲಿ ಮುದ್ರಿಸಬೇಕು, ಮತ್ತು ಅದರಲ್ಲಿ ಉಮೇದವಾರರ ಹೆಸರುಗಳು ವರ್ಣಾನುಕ್ರಮವಾಗಿ ರಿಟರ್ನಿಂಗ ಆಫೀಸರನು ಪ್ರತಿಯೊಬ್ಬ ಉಮೇದವಾರನಿಗೆ ಒಪ್ಪಿಸಿಕೊಟ್ಟ ಚಿನ್ಹದೊಂದಿಗೆ ಇರಬೇಕು.

ಆದರೆ ಗೊತ್ತುಪಡಿಸುವದೇನಂದರೆ, ರಿಟರ್ನಿಂಗ ಆಫೀಸರನು ೧೪ನೇ ನಿಯಮದನ್ವಯ ಚುನಾಯಿಸಲ್ಪಟ್ಟರೆಂದು ಜಾಹೀರುಮಾಡಿದ ಉಮೇದು-ವಾರರ ಹೆಸರುಗಳನ್ನು ಮತಪತ್ರಿಕೆಯಲ್ಲಿ ನಮೂದ ಮಾಡಬಾರದು.

**೧೮. ಮಾದರಿಯ ಮತಪತ್ರಿಕೆಯು.**

ಮತದಾನವು ಪ್ರಾರಂಭವಾಗುವದಕ್ಕಿಂತ ಕನಿಷ್ಟ ೪೮ ತಾಸು ಮೊದಲು, ಮತದಾರರ ಮಾರ್ಗದರ್ಶನದ ಸಲುವಾಗಿ ಮಾದರಿಯ ಮತಪತ್ರಿಕೆಯನ್ನು ಮತಗಟ್ಟೆಯ ಹೊರಗೆ ಹಚ್ಚಬೇಕು.

**೧೯. ಚುನಾವಣೆಯ ಸಾಹಿತ್ಯ ಸಲಕರಣೆ ಮತ್ತು ಮತಪೆಟ್ಟಿಗೆಗಳು (ಬ್ಯಾಲೇಟ್ ಬಾಕ್ಸಿಸ್)**

(೧) ಮತದಾನದ ದಿವಸ ಪ್ರಾತಃಕಾಲ ಪ್ರತಿಯೊಬ್ಬ ಪ್ರಿಸಾಯಿಡಿಂಗ ಆಫೀಸರನಿಗೆ ಮತಪತ್ರಿಕೆಗಳನ್ನು ಹಾಕಲು ತೂತುಳ್ಳ ಪೆಟ್ಟಿಗೆಗಳನ್ನು, ಅವರ ಮತಗಟ್ಟಿಗೆ ಸಂಬಂಧಿಸಿದ ಮತದಾರರ ಯಾದಿಯ ವಿಭಾಗದ ಪ್ರತಿಯನ್ನು ಮತದಾರರ ಯಾದಿಯಲ್ಲಿಯ ಪ್ರತಿಯೊಬ್ಬ ಮತದಾರನಿಗೆ ಒಂದು ಮತಪತ್ರಿಕೆಯಂತೆ-, ಪ್ರತಿ ಮತ್ತು ಸ್ಥಳ ಪ್ರತಿಗಳುಳ್ಳ ಮತ್ತು ಅನುಕ್ರಮವಾಗಿ ನಂಬರುಗಳುಳ್ಳ ಮತಪತ್ರಿಕೆಗಳ ಕಟ್ಟಲ್ಪಟ್ಟ ಪುಸ್ತಕಗಳನ್ನು ಮತ್ತು ಮತದಾನದ ಉದ್ದೇಶಗಳ ಸಲುವಾಗಿ ಅವಶ್ಯವಿದ್ದ ಇತರ ಸಾಹಿತ್ಯ ಸಲಕರಣೆಗಳನ್ನು ಪೂರೈಸಬೇಕು.

(೨) ಮತದಾನವು ಪ್ರಾರಂಭವಾಗುವ ಪೂರ್ವದಲ್ಲಿ ಪ್ರಿಸಾಯಿಡಿಂಗ ಆಫೀಸರನು ಮತಗಟ್ಟೆಗಳಲ್ಲಿ ಹಾಜರಿರುವ ಉಮೇದುವಾರರಿಗೆ ಅಥವಾ ಅವರ ಏಜಂಟರಿಗೆ ಮತಪೆಟ್ಟಿಗೆಯು ಬರಿಯದು (ಖಾಲಿ) ಇದ್ದದ್ದನ್ನು ತೋರಿಸಬೇಕು. ಮತ್ತು ಆ ಮೇಲೆ ಅದಕ್ಕೆ ಕೀಲಿಯನ್ನು ಹಾಕಬೇಕು. ಮತ್ತು ಮೊಹರನ್ನು ಮುರಿಯದೆ ಪೆಟ್ಟಿಗೆಯನ್ನು ತೆರೆಯಲು ಬರದಂತೆ ಅದಕ್ಕೆ ಮೊಹರಮಾಡಬೇಕು.

**೨೦ ಉಮೆದವಾರರು ಮತ್ತು ಏಜಂಟರು ಮತದಾರರ ಸಂಗಡ ಮಾತನಾಡಕೂಡದು.**

(೧) ಉಮೆದವಾರರು ಮತ್ತು ಅವರ ಏಜಂಟರು ಮುಂದಿನ ಕೋಣೆಯಲ್ಲಿ (ante room) ಯಾವನೇ ಮತದಾರನ ಸಂಗಡ ಮಾತನಾಡಬಾರದು, ಅಥವಾ ಏನೂ ಹೇಳಬಾರದು. ಆದರೆ ಯಾವನೊಬ್ಬ ಮತದಾರನ ಸಂಬಂಧ ಈ ಕೆಳಗಿನ ಯಾವುದೇ ಕಾರಣಕ್ಕಾಗಿ ಪ್ರಿಸಾಯಿಡಿಂಗ ಆಫೀಸರನ ಮುಂದೆ ಆಕ್ಷೇಪಗಳನ್ನು ಇಡಬಹುದು.

(1) ಯಾವ ವಾರ್ಡಿನ ಸಂಬಂಧ ಚುಣಾವಣೆಯು ನಡೆದಿದೆಯೋ, ಆ ವಾರ್ಡಿನಲ್ಲಿ ಮತಕೊಡಲು ಹಕ್ಕುಳ್ಳ ಮತದಾರರ ಯಾದಿಯಲ್ಲಿ ಆ ಮತದಾರನ ಹೆಸರು ಇರದಿದ್ದರೆ,

(2) ಮತದಾರರ ಯಾದಿಯಲ್ಲಿ ಯಾವನ ಹೆಸರು ನಮೂದಾಗಿರು-ವದೋ ಅವನೇ ಎಂದು ಹೇಳುವ ಆ ಮತದಾರನ ಹಕ್ಕು ಸಾಧಿಸುವಿಕೆಯು ಸುಳ್ಳಿದ್ದರೆ,

(3) ಅವನು ಚುನಾವಣೆಯಲ್ಲಿ ಈಗಾಗಲೇ ಮತದಾನಮಾಡಿದ್ದರೆ.

(೨) ಈನಿಯಮದ ೧ನೇ ಉಪನಿಯಮದ ಶರಾವುಗಳನ್ನು ಉಲ್ಲಂಘಿಸುವ ಯಾವನೇ ಮನುಷ್ಯನನ್ನು ಪ್ರಿಸಾಯಿಡಿಂಗ ಆಫೀಸರನು ಮುಂದಿನ ಕೋಣೆಯಿಂದ ಹೊರಗೆಹಾಕಬಹುದು. ಮತ್ತು ಹೀಗೆ ಹೊರಗೆ ಹಾಕಲ್ಪಟ್ಟ ಮನುಷ್ಯನನ್ನು ಪುನಃ ಚುನಾವಣೆಯು ನಡೆದಾಗ್ಗೆ ಒಳಗೆ ಬಿಡಬಾರದು.

**೨೧ ಮತದಾರರು ಮತಗಟ್ಟೆಗಳಲ್ಲಿ ಹಾಜರ ಇರುವದು.**

ಮತದಾನ ಮಾಡಲು ಇಚ್ಛೆಯುಳ್ಳ ಪ್ರತಿಯೊಬ್ಬ ಮನುಷ್ಯನು, ತನ್ನ ಹೆಸರು ಮತದಾರರ ಯಾದಿಯಲ್ಲಿ ಯಾವ ವಾರ್ಡಿಗಾಗಿ ಇರುವದೊ, ಆ ವಾರ್ಡಿಗಾಗಿ ಇದ್ದ ಮತಗಟ್ಟೆಯಲ್ಲಿ ಮತಕೊಡಲು ಈ ಬಗ್ಗೆ ೮ನೇ ನಿಯಮದನ್ವಯ ಮಾಮಲೇದಾರನು ಅಥವಾ ಮಹಾಲಕರಿಯು ಗೊತ್ತು ಮಾಡಿದ ತಾರೀಖಿನ ದಿವಸ ಮತ್ತು ತಾಸುಗಳಲ್ಲಿ ಹಾಜರ ಇರಬೇಕು.

**೨೨. ಮತದಾನ ಮಾಡುವದು.**

ಈ ಕೆಳಗಿನ ಶರಾವುಗಳಿಗನುಸರಿಸಿ ಮತದಾನ ಮಾಡಬೇಕು:—

(೧) ಮತದಾರನ ವಾರ್ಡಿನಲ್ಲಿ ಎಷ್ಟು ಸ್ಥಳಗಳನ್ನು ತುಂಬಲು ಮತಗಳನ್ನು ತೆಗೆದುಕೊಳ್ಳುವದಿದೆಯೋ ಅಷ್ಟು ಮತಗಳನ್ನು ಕೊಡಲು ಆ ಪ್ರತಿಯೊಬ್ಬ ಮತದಾರನಿಗೆ ಅಧಿಕಾರವಿದೆ, ಆದರೆ ಮತದಾರನು ಯಾವ ಉಮೇದವಾರನಿಗೂ ಒಂದಕ್ಕಿಂತ ಅಧಿಕ ಮತಗಳನ್ನು ಕೊಡಬಾರದು.

(೨) ಇನ್ನೊಬ್ಬನ ವತಿಯಿಂದ ಮತದಾನಮಾಡಲು ಬರಲಾರದು.

(೩) ಮತದಾನಮಾಡಲು ಇಚ್ಛೆಯುಳ್ಳ ಮತದಾರನಿಗೆ ಮತಪತ್ರಿಕೆಯನ್ನು ಕೊಡುವವೊದಲು ಮತದಾರರ ಯಾದಿಯಲ್ಲಿದ್ದ ಅವನ ಹೆಸರನ್ನು ಮತ್ತು ಅವನ ನಂಬರನ್ನು ಹಾಜರಿದ್ದ ಜನರಿಗೆ ಕೇಳಿಸುವಂತೆ ಒದರಿ ಹೇಳಬೇಕು.

(೪) ಪ್ರಿಸಾಯಿಡಿಂಗ ಆಫೀಸರನು, ಉಮೇದವಾರರು ಮತ್ತು ಅವರ ಏಜಂಟರು ಎತ್ತಿದ್ದ ಆಕ್ಷೇಪಗಳನ್ನು ನಿಕಾಲಿ ಮಾಡಬೇಕು, ಮತ್ತು ಮತದಾನ ಮಾಡಲು ಇಚ್ಛಿಸುವ ಮತದಾರನು, ಮತದಾನಮಾಡಲು ಹಕ್ಕುಳ್ಳವನಿರುವನು ಮತ್ತು ಈ ಮೊದಲೇ ಅವನು ಮತದಾನ ಮಾಡಿರುವ ದಿಲ್ಲ ಎಂದು ಅವನಿಗೆ ತೃಪ್ತಿಯಾದಾಗ್ಗೆ, ಮತಪತ್ರಿಕೆಯ ಪ್ರತಿಯಮೇಲೆ ಸಹಿ ಮಾಡಬೇಕು. ಮತ್ತು ಸ್ಥಳಪ್ರತಿಯಮೇಲೆ ಮತದಾರನ ಸಹಿಯನ್ನು ಅಥವಾ ಗುರ್ತನ್ನು ತಕ್ಕೊಂಡು, ಪ್ರತಿ ಮತ್ತು ಸ್ಥಳಪ್ರತಿ ಇವುಗಳ ನಡುವೆ ಮೊಹರ ಹಾಕಿ, ಪ್ರತಿಯನ್ನು ಮತದಾರನಿಗೆ ಕೊಡಬೇಕು ಮತ್ತು ಅವನಿಗೆ ಮತದಾನಮಾಡುವ ಕೋಣೆಯಲ್ಲಿ ಪ್ರವೇಶಿಸಲು ಅಪ್ಪಣೆ ಕೊಡಬೇಕು.

(೫) ಮತದಾರನು, ತಾನು ಯಾವ ಉಮೇದವಾರನಿಗೆ ಮತ ಕೊಡಲು ಇಚ್ಛಿಸುವನೋ ಆ ಪ್ರತಿಯೊಬ್ಬ ಉಮೇದವಾರನ ಹೆಸರಿನ ಮುಂದೆ, ಮತಪತ್ರಿಕೆಯ ೪ನೇ ಆಸನದಲ್ಲಿ ಒಂದು ಕತ್ತರಿ ( X )ಯ ಗುರ್ತನ್ನು ಮಾಡಬೇಕು; ಆಮೇಲೆ ತಾನುಮಾಡಿದ ಗುರ್ತು ಕಾಣಿಸಿದಂತೆ ಮತಪತ್ರಿಕೆಯನ್ನು ಮಡಚಬೇಕು, ಮತ್ತು ಹೀಗೆ ಮಡಿಚಿದ ಮತಪತ್ರಿಕೆ ಯನ್ನು ಮತಪೆಟ್ಟಿಗೆಯಲ್ಲಿ ಹಾಕಬೇಕು, ಮತ್ತು ಅಯೋಗ್ಯರೀತಿಯಿಂದ ತಡಮಾಡದೆ ಮತದಾನಮಾಡುವ ಕೋಣೆಯಿಂದ ಹೊರಗೆ ಬರಬೇಕು.

(೬) ದುರ್ಬಲತೆಯಿಂದ ಯಾವ ಮತದಾರನು ತನ್ನ ಮತವನ್ನು ಗೊತ್ತುಪಡಿಸಿದ ರೀತಿಯಲ್ಲಿ ಕೊಡಲು ಅಸಮರ್ಥನಿರುವನೋ ಅಂಥ ಮತ ದಾರನಿಗೆ ಪ್ರಿಸಾಯಿಡಿಂಗ ಆಫೀಸರನು ಅವಶ್ಯವಿದ್ದ ಸಹಾಯವನ್ನು ನೀಡ ಬೇಕು.

(೭) ೮ನೇ ನಿಯಮದನ್ವಯ, ಚುನಾವಣೆಯು ಮುಗಿಯುವ ತಾಸೆಂದು ಗೊತ್ತುಮಾಡಿದ ತಾಸಿನ ನಂತರ ಮತಪತ್ರವನ್ನು ಕೊಡಬಾರದು, ಆದರೆ ಚುನಾವಣೆಯು ಮುಗಿಯುವ ತಾಸಿನಮೊದಲೇ ಯಾವ ಮತದಾರ ನಿಗೆ ಮತಪತ್ರಿಕೆಯು ಕೊಡಲ್ಪಟ್ಟಿದೆಯೋ, ಅವನಿಗೆ ಮತದಾನಮಾಡಲು ಅಪ್ಪಣೆ ಕೊಡಬೇಕು.

**೨೩. ಪ್ರಿಸಾಯಿಡಿಂಗ ಮತ್ತು ಪೋಲಿಂಗ ಆಫೀಸರರ ಕರ್ತವ್ಯ ಗಳು.**

ಮತದಾನವು ಅತ್ಯಂತ ಗುಪ್ತರೀತಿಯಿಂದ ನಡೆದಿದೆ; ಈ ನಿಯಮಗಳ ನ್ವಯ ಮತಗಟ್ಟೆಗಳಲ್ಲಿ ಪ್ರವೇಶಮಾಡಲು ಯಾರಿಗೆ ಅಪ್ಪಣೆ ಕೊಡಬಹುದೋ ಅಂಥವರಿಗೆ ಮಾತ್ರ ಪ್ರವೇಶಮಾಡಲು ಅಪ್ಪಣೆಕೊಟ್ಟಿದೆ; ಯಾರು ಮತದಾನ ಮಾಡಿರುವರು; ಅಥವಾ ಯಾರ ವಿರುದ್ಧ ಇದ್ದ ಆಕ್ಷೇಪಗಳು ವಿಚಾರಿ ಸಲ್ಪಟ್ಟು ಅವು ನಿಜವೆಂದು ನಿರ್ಣಯಿಸಲ್ಪಟ್ಟಿರುವವೋ ಅಂಥವರು ಕೂಡಲೆ ಹೊರಗೆ ಹೋಗುವರು; ಇವೆಲ್ಲ ಸಂಗತಿಗಳನ್ನು ನೋಡುವದು ಪ್ರಿಸಾಯಿ ಡಿಂಗ ಆಫೀರರರ ಮತ್ತು ಅವರ ಸಹಾಯಕರ ಕರ್ತವ್ಯವಾಗಿದೆ. ಇದು ಅಲ್ಲದೆ, ಈ ನಿಯಮಗಳು ಮತ್ತು ಅವುಗಳನ್ವಯ ರಿಟರ್ನಿಂಗ ಆಫೀಸರನು ಕೊಟ್ಟ ವಿಶೇಷ ಆಜ್ಞೆಗಳು, ಸರ್ವರೀತಿಯಲ್ಲಿ, ನಿಷ್ಠುರವಾಗಿ ಪಾಲಿಸಲ್ಪಟ್ಟಿವೆ ಯೆಂಬುದನ್ನು ನೋಡುವದು ಸಹ ಅವರ ಕರ್ತವ್ಯವಾಗಿದೆ.

**೨೪. ರಿಟರ್ನಿಂಗ ಆಫೀಸರನು ಚುನಾವಣೆಯ ಕಾರ್ಯದ ಮೇಲ್ವಿ ಚಾರಣೆ ಮಾಡುವದು.**

ರಿಟರ್ನಿಂಗ ಆಫೀಸರನ ಸಾಮಾನ್ಯ ಮೇಲ್ವಿಚಾರಣೆಗೆ ಒಳಪಟ್ಟು ಚುನಾವಣೆಯ ಕಾರ್ಯವು ನಡೆಯಬೇಕು. ಯಾವುದೇ ಮತಗಟ್ಟೆಯ ಪ್ರಿಸಾಯಿಡಿಂಗ ಆಫೀಸರನು ಯಾವುದೇ ಸಂಶಯಾಸ್ಪದ ಸಂಗತಿಯಬಗ್ಗೆ ರಿಟರ್ನಿಂಗ ಆಫೀಸರನು ಮತಗಟ್ಟೆಯಲ್ಲಿದ್ದರೆ, ಅವನನ್ನು ವಿಚಾರಿಸ ಬಹುದು.

**೨೫. ಮತಗಟ್ಟೆಗಳಲ್ಲಿ ಕೆಲಸದ ಮೇಲಿದ್ದ ಅಧಿಕಾರಿಗಳು ಮತದಾನ ಮಾಡುವದು.**

ಪ್ರಿಸಾಯಿಡಿಂಗ ಆಫೀಸರನು, ಅಥವಾ ಪೋಲಿಂಗ ಆಫೀಸರನು ಅಥವಾ ಮತಗಟ್ಟೆಯಲ್ಲಿ ಕೆಲಸದಮೇಲಿದ್ದ ಯಾವನೇ ಮನುಷ್ಯನು ಯಾವ ಮತಗಟ್ಟೆಯಲ್ಲಿ ತನಗೆ ಮತಕೊಡಲು ಅಧಿಕಾರವಿಲ್ಲವೋ ಅಲ್ಲಿ ಕೆಲಸದ ಮೇಲಿದ್ದರೆ, ಯಾವ ಚುನಾವಣೆಯ ಸಂಬಂಧ ಇಂಥ ಅಧಿಕಾರಿಯು ಅಥವಾ ಮನುಷ್ಯನು ನೇಮಿಸಲ್ಪಟ್ಟಿರುವನೋ, ಆ ಚುನಾವಣೆಯಲ್ಲಿ ಅವ

ನಿಗೆ ಮತಕೊಡುವ ಅಧಿಕಾರವಿದ್ದರೆ, ಅವನು ಆ ಮತಗಟ್ಟೆಯಲ್ಲಿ ಮತದಾನ ಮಾಡಬಹುದು.

ಯಾವ ಮತಗಟ್ಟೆಯಲ್ಲಿ ಅವನು ಹಕ್ಕಿನಿಂದ ಮತದಾನ ಮಾಡಬಹುದಾಗಿತ್ತೋ ಆ ಮತಗಟ್ಟೆಯ ಹೆಸರನ್ನು ಮತಪತ್ರಿಕೆಯ ಸ್ಥಳಪ್ರತಿಯಮೇಲೆ, ಮತದಾರರ ಯಾದಿಯಲ್ಲಿದ್ದ ಅವನ ನಂಬರಿನ ಬದಲು, ನಮೂದ ಮಾಡಬೇಕು. ಇಂಥ ಜನರ ಮತಪತ್ರಿಕೆಗಳನ್ನು ಮೋಹರ ಮಾಡಿದ ಪಾಕೀಟಗಳಲ್ಲಿ ಇಡಬೇಕು, ಮತ್ತು ಆ ಪಾಕೀಟಗಳ ಮೇಲೆ ಅವುಗಳಿಗೆ ಸಂಬಂಧಪಟ್ಟ ಮತಗಟ್ಟೆಗಳ ಹೆಸರುಗಳನ್ನು ಬರೆಯಬೇಕು, ಮತ್ತು ಇಂಥ ಪಾಕೀಟುಗಳನ್ನು ೨೭ನೇ ನಿಯಮದಲ್ಲಿ ವಿವರಿಸಿದ ಇತರ ವಸ್ತುಗಳ ಸಂಗಡ ರಿಟರ್ನಿಂಗ ಆಫೀಸರನಿಗೆ ಒಪ್ಪಿಸಬೇಕು.

## ೨೬. ಕೊಡಮಾಡಿದ (Tendered ) ಮತಪತ್ರಿಕೆಗಳು.

ಯಾವನೊಬ್ಬನು, ಮತದಾರರ ಯಾದಿಯಲ್ಲಿ ನಮೂದ ಮಾಡಲ್ಪಟ್ಟ ಒಬ್ಬ ವಿಶಿಷ್ಟ ಮತದಾರನೆಂದು ಹೇಳುತ್ತಾ, ಇಂಥ ಮತದಾರನೆಂದು ಬೇರೊಬ್ಬನು ಮತದಾನ ಮಾಡಿದನಂತರ, ಮತಪತ್ರಿಕೆಯನ್ನು ಕೇಳಿದರೆ, ಅವನು ಪ್ರಿಸಾಯಿಡಿಂಗ ಆಫೀಸರನು ಕೇಳಬಹುದಾದ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಟ್ಟನಂತರ, ಅವನಿಗೆ ಮತಕೊಡುವ ಅಧಿಕಾರವಿದೆ. ಹೇಗಾದರೂ, ಮತದಾತನು ಅಥವಾ ಅವನು ಅಶಿಕ್ಷಿತನಿದ್ದರೆ, ಅವನ ನಲುವಾಗಿ ಪ್ರಿಸಾಯಿಡಿಂಗ ಆಫೀಸರನು, ಮತಪತ್ರಿಕೆಯ ಹಿಂದಿನ ಪ್ರೈಮೇಲೆ ಆ ಯಾವ ಉಮೇದವಾರರಿಗೆ ಮತಕೊಡುವ ಇಚ್ಛೆಇದೆಯೋ, ಆ ಉಮೇದವಾರರ ಹೆಸರುಗಳನ್ನು ಬರೆಯಬೇಕು. ಮತದಾರನು ಮತಪತ್ರಿಕೆಯನ್ನು ಪ್ರಿಸಾಯಿಡಿಂಗ ಆಫೀಸರನಿಗೆ ಒಪ್ಪಿಸಬೇಕು; ಪ್ರಿಸಾಯಿಡಿಂಗ ಆಫೀಸರನು, ಆ ಮತಪತ್ರಿಕೆಯಮೇಲೆ ಮತದಾರನ ಹೆಸರನ್ನು ಮತ್ತು ಮತದಾರರ ಯಾದಿಯಲ್ಲಿಯ ಅವನ ನಂಬರನ್ನು ಬರೆಯಬೇಕು ಮತ್ತು ಆ ಮತಪತ್ರಿಕೆಯನ್ನು ಒಂದು ಪ್ರತ್ಯೇಕ ಪಾಕೀಟಿನಲ್ಲಿ ಇಡಬೇಕು. ಇಂಥ ಮತಪತ್ರಿಕೆಗಳನ್ನು ರಿಟರ್ನಿಂಗ ಆಫೀಸರನು ಎಣಿಸಬಾರದು ಮತ್ತು ಅವುಗಳನ್ನು "ಕೊಡಮಾಡಿದ" ಮತಪತ್ರಿಕೆಗಳು ಎಂದು

ಹರಿಯಬೇಕು. ಈ ರೀತಿಯಿಂದ ಕೊಡಮಾಡಿದ ಮತಪತ್ರಿಕೆಗಳ ಒಂದು ಯಾದಿಯನ್ನು ಈ ನಿಯಮಗಳಿಗೆ ಜೋಡಿಸಿದ "ಬ" ನಮೂನೆಯಲ್ಲಿಡಬೇಕು.

**೨೭. ಮತಪೆಟ್ಟಿಗೆಗಳನ್ನು ಮೋಹರಮಾಡಿ ಬಂದ ಮಾಡುವದು.**

(೧) ಪ್ರಿಸಾಯಿಡಿಂಗ ಆಫೀಸರನು, ಮತದಾನವು ಮುಗಿದನಂತರ ಶಕ್ಯವಿದ್ದಷ್ಟು ಬೇಗನೆ, ಯಾವನೇ ಉಮೇದವಾರನು ಅಥವಾ ಉಮೇದವಾರನ ಪ್ರತಿನಿಧಿಯು ಹಾಜರಿದ್ದರೆ, ಅವನ ಸಮಕ್ಷಮದಲ್ಲಿ ಮತಪೆಟ್ಟಿಗೆಗಳ ತೂತನ್ನು ಮೋಹರಮಾಡಿ ಬಂದ ಮಾಡಬೇಕು, ಮತ್ತು ಈ ಕೆಳಗಿನವುಗಳ ಬಗ್ಗೆ ಬೇರೆ ಬೇರೆ ಗಂಟುಗಳನ್ನು ಮಾಡಬೇಕು ಮತ್ತು ಅವುಗಳಲ್ಲಿ ಪ್ರತಿಯೊಂದು ಗಂಟಿನಮೇಲೆ ಅದರಲ್ಲಿ ಏನಿದೆ ಎಂಬುದರ ವರ್ಣನೆಯನ್ನು ಬರೆದು ಅದರಮೇಲೆ ತನ್ನ ಸ್ವಂತ ಮೋಹರನ್ನು ಮಾಡಬೇಕು, ಮತ್ತು ತನ್ನ ಮೋಹರನ್ನು ಮಾಡಲು ಇಚ್ಛಿಸುವ ಯಾವನೇ ಉಮೇದವಾರನ ಅಥವಾ ಪ್ರತಿನಿಧಿಯ ಮೋಹರನ್ನು ಮಾಡಬೇಕು:—

(1) ಮತಗಟ್ಟೆಯಲ್ಲಿ, ಉಪಯೋಗದಲ್ಲಿದ್ದ, ಮುಚ್ಚಲ್ಪಟ್ಟ ಮತ್ತು ಜೊತೆಗೆ ಕೀಲಿಕೈ ಇದ್ದ ಪ್ರತಿಯೊಂದು ಮತಪೆಟ್ಟಿಗೆ;

(2) ಉಪಯೋಗಿಸಲ್ಪಡದ ಮತಪತ್ರಿಕೆಗಳ ಪುಸ್ತಕಗಳು;

(3) ಕೊಡಮಾಡಿದ ಮತಪತ್ರಿಕೆಗಳು;

(4) ಗುರ್ತುಮಾಡಿದ ಮತದಾರರ ಯಾದಿಗಳ ಪ್ರತಿಗಳು;

(5) ಉಪಯೋಗಮಾಡಲ್ಪಟ್ಟ ಮತಪತ್ರಿಕೆಗಳ ಸ್ಥಳಪ್ರತಿಗಳ ಪುಸ್ತಕಗಳು; ಮತ್ತು

(6) ಕೊಡಮಾಡಿದ ಮತಗಳ ಯಾದಿ.

(೨) ಪ್ರಿಸಾಯಿಡಿಂಗ ಆಫೀಸರನು ಆ ಗಂಟುಗಳನ್ನು ರಿಟರ್ನಿಂಗ ಆಫೀಸರನ ಕಡೆಗೆ ಅಥವಾ ಮತಗಳ ಎಣಿಕೆಯಾಗುವವರೆಗೆ ಮತ್ತು ೩೩ನೇ ನಿಯಮದನ್ವಯ ಸ್ಥಳಪ್ರತಿಗಳ ಪುಸ್ತಕಗಳು ಮತ್ತು ಉಪಯೋಗಿಸಲ್ಪಟ್ಟ ಪ್ರತಿಗಳ ಪುಸ್ತಕಗಳು ನಾಶಮಾಡಲ್ಪಡುವವರೆಗೆ, ಸದರ ಗಂಟುಗಳನ್ನು

ವಶಕ್ಕೆ (ತಾಬಾ) ತಕ್ಕೊಳ್ಳುವದರಬಗ್ಗೆ ರಿಟರ್ನಿಂಗ ಆಫೀಸರನು ನೇಮಿಸಿದ ಬೇರೊಬ್ಬ ಮನುಷ್ಯನ ಕಡೆಗೆ ಕಳಿಸಬೇಕು. ಮತ್ತು ಅವನು ಆ ಗಂಟುಗಳ ಸಂಗಡ ತನಗೆ ಒಪ್ಪಿಸಿಕೊಟ್ಟ ಮತಪತ್ರಿಕೆಗಳ ಸಂಖ್ಯೆಯನ್ನು ತೋರಿಸುವ ಮತ್ತು ಉಪಯೋಗಿಸಲ್ಪಟ್ಟ ಮತಪತ್ರಿಕೆಗಳು, ಕೊಡಮಾಡಿದ ಮತಪತ್ರಿಕೆಗಳು ಮತ್ತು ಉಪಯೋಗಿಸಲ್ಪಡದ ಮತಪತ್ರಿಕೆಗಳು ಎಂಬ ಕೋಷ್ಟಕದಲ್ಲಿ ಮತಪತ್ರಿಕೆಗಳ ಲೆಖ್ಖವನ್ನು ಕೊಡುವ ಪತ್ರಕವನ್ನು ಕಳಿಸಬೇಕು.

## ೨೮. ಮತಗಳ ಎಣಿಕೆ.

(೧) ಮತಗಳನ್ನು ಎಣಿಕೆಮಾಡುವದರ ಸಲುವಾಗಿ ೮ನೇ ನಿಯಮದನ್ವಯ ಗೊತ್ತುಮಾಡಲ್ಪಟ್ಟ ದಿವಸ ಮತ್ತು ವೇಳೆಗೆ ರಿಟರ್ನಿಂಗ ಆಫೀಸರನು ಮತಪೆಟ್ಟಿಗೆಗಳನ್ನು, ಒಂದೊಂದರಂತೆ ತೆರೆಯಬೇಕು, ಮತ್ತು ಹಾಜರಿರಬಹುದಾದಂಥ ಉಮೇದವಾರರ ಅಥವಾ ಅವರ ಚುನಾವಣೆಯ ಏಜಂಟರ ಸಮಕ್ಷಮ ಮತಗಳನ್ನು ಎಣಿಸಬೇಕು.

(೨) ನಿಚ್ಚಳವಾಗಿ ಕ್ರಮಬದ್ಧವಿದ್ದ ಮತಪತ್ರಿಕೆಗಳನ್ನು ಅಕ್ರಮ ಮತ್ತು ಸಂಶಯಾಸ್ಪದವಿದ್ದ ಮತಪತ್ರಿಕೆಗಳಿಂದ ವಿಂಗಡಿಸಬೇಕು. ಯಾವ ಮತಪತ್ರಿಕೆಯಮೇಲೆ ಮತದಾರನು ತನಗೆ ಕೊಡಲಿಕ್ಕೆ ಅಧಿಕಾರವಿದ್ದ ಮತಗಳಿಗಿಂತ ಅಧಿಕ ಮತಗಳನ್ನು ಕೊಟ್ಟಿದ್ದರೆ, ಅಥವಾ ಒಬ್ಬ ಉಮೇದವಾರನಿಗೆ ಒಂದಕ್ಕಿಂತ ಹೆಚ್ಚುಮತಗಳನ್ನು ಕೊಟ್ಟಿದ್ದರೆ, ಅಥವಾ ಮತಪತ್ರಿಕೆಯ ಮೇಲೆ ಗುರುತನ್ನು ಮಾಡಿರದಿದ್ದರೆ ಅಂಥ ಪ್ರತಿಯೊಂದು ಮತಪತ್ರಿಕೆಯು ರದ್ದಾಗುವದು. ಯಾವ ಮತಪತ್ರಿಕೆಯಮೇಲಿದ್ದ ಯಾವುದೇ ಬರೆಹ ಅಥವಾ ಗುರುತಿನಿಂದ ತನ್ನ ಗುರುತು ಸಿಗಬೇಕೆಂದು ಮತದಾರನು ಇಚ್ಛಿಸಿದನೆಂದು ರಿಟರ್ನಿಂಗ ಆಫೀಸರನ ಅಭಿಪ್ರಾಯವಾದಲ್ಲಿ ಅಂಥ ಮತಪತ್ರಿಕೆಯನ್ನು ಮತ್ತು ಅನಿಶ್ಚಯತೆಯಮೂಲಕ ರದ್ದಾದ ಯಾವುದೇ ಮತಪತ್ರಿಕೆಯನ್ನು ಅವನು ನಿರಾಕರಿಸಬಹುದು. ಅವನು ನಿರಾಕರಿಸಿದ ಮತಪತ್ರಿಕೆಗಳ ಮೇಲೆ, ಅವಶ್ಯವಿದ್ದಲ್ಲಿ ನಿರಾಕರಿಸಿದ ಕಾರಣಗಳನ್ನು ನಮೂದಮಾಡಿ "ನಿರಾಕರಿಸಲ್ಪಟ್ಟಿದೆ" ಎಂದು ಲೇಖಿ ಶರಾ ಬರೆಯಬೇಕು.

(೩) ಮತಗಳ ಎಣಿಕೆಯು ಮುಗಿದನಂತರ, ರಿಟರ್ನಿಂಗ ಆಫೀಸರನು ಕಾಯ್ದಿಟ್ಟ ಸ್ಥಳವು ಇದ್ದರೆ, ಅದನ್ನು ತುಂಬಲು ಅರ್ಹರಿದ್ದ ಉಮೇದವಾರರಲ್ಲಿ ಯಾವನು ಎಲ್ಲರಿಗಿಂತ ಅಧಿಕ ಮತಗಳನ್ನು ದೊರಕಿಸಿರುವನೋ, ಅವನು ಇಂಥ ಕಾಯ್ದಿಟ್ಟ ಸ್ಥಳವನ್ನು ತುಂಬಲು ಚುನಾಯಿಸಲ್ಪಟ್ಟನೆಂಬುದನ್ನು ೬ನೇ ನಿಯಮದ ಶರಾವುಗಳಿಗೊಳಪಟ್ಟು ಜಾಹೀರ ಮಾಡಬೇಕು. ಆಮೇಲೆ ರಿಟರ್ನಿಂಗ ಆಫೀಸರನು, ಕಾಯ್ದಿಡಲ್ಪಟ್ಟ ಸ್ಥಳಗಳಿದ್ದರೆ, ಅವುಗಳನ್ನು ತುಂಬಲು ಯಾರು ಚುನಾಯಿಸಲ್ಪಟ್ಟರೆಂದು ಜಾಹೀರ ಮಾಡಲ್ಪಟ್ಟಿರುವರೋ ಅವರನ್ನು ಬಿಟ್ಟು, ಉಳಿದ ಎಲ್ಲ ಉಮೇದವಾರರಲ್ಲಿ ಯಾವ ಉಮೇದವಾರನು ಅಥವಾ ಉಮೇದವಾರರು ಅತ್ಯಧಿಕ ಮತಗಳನ್ನು ದೊರಕಿಸಿರುವರೋ ಅವನು (ರು) ಸಾಮಾನ್ಯ ಸ್ಥಳಗಳನ್ನು ತುಂಬಲು ಚುನಾಯಿಸಲ್ಪಟ್ಟನೆಂ(ರೆಂ)ದು ಜಾಹೀರ ಮಾಡಬೇಕು.

(೪) ಯಾರಾದರಿಬ್ಬರು ಅಥವಾ ಅಧಿಕ ಉಮೇದವಾರರು ದೊರಕಿಸಿದ ಮತಗಳ ಸಂಖ್ಯೆಯು ಸರಿಯಿದ್ದಾಗ್ಗೆ, ಚುನಾಯಿಸಲ್ಪಟ್ಟನೆಂದು ಜಾಹೀರ ಮಾಡಲ್ಪಡುವ ಉಮೇದವಾರನನ್ನು, ರಿಟರ್ನಿಂಗ ಆಫೀಸರನ ಸಮಕ್ಷಮ ಮತ್ತು ಅವನು ಗೊತ್ತುಮಾಡುವ ರೀತಿಯಲ್ಲಿ ಚೀಟಿಹಾಕಿ ಗೊತ್ತುಮಾಡಬೇಕು.

## ೨೯. ಚುನಾವಣೆಯ ಪರಿಣಾಮವನ್ನು ಪ್ರಕಟಿಸುವದು.

(ಅ) ರಿಟರ್ನಿಂಗ ಆಫೀಸರನು ಚುನಾಯಿಸಲ್ಪಟ್ಟ ಉಮೇದವಾರರ ಹೆಸರುಗಳನ್ನು ಗ್ರಾಮದ ಚಾವಡಿಯಲ್ಲಿ ಅಥವಾ ಗ್ರಾಮಪಂಚಾಯತಿಯ ಕಚೇರಿಯಲ್ಲಿ ಅಥವಾ ಅದರಬಗ್ಗೆ ಅವನು ಗೊತ್ತುಮಾಡಿದ ಇತರ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಹಚ್ಚಬೇಕು. ಮತ್ತು ಇಂಥ ಹೆಸರನ್ನು ಅಥವಾ ಹೆಸರುಗಳನ್ನು ಕೂಡಲೆ ಕಲೆಕ್ಟರನಿಗೆ ತಿಳಿಸಬೇಕು.

(ಬ) ಕಲೆಕ್ಟರನು ಚುನಾವಣೆಯ ಪರಿಣಾಮವನ್ನು ತನ್ನ ಕಚೇರಿಯಲ್ಲಿ, ಗ್ರಾಮದ ಚಾವಡಿಯಲ್ಲಿ ಮತ್ತು ಗ್ರಾಮಪಂಚಾಯತಿಯ ಕಚೇರಿಯಲ್ಲಿ ಹಚ್ಚಿಸಿ ಪ್ರಸಿದ್ಧ ಮಾಡಬೇಕು.

**೩೦. ಕಾರ್ಯಕ್ರಮಗಳನ್ನು ಬರೆದಿಡುವದು.**

ರಿಟರ್ನಿಂಗ ಆಫೀಸರನು ಪ್ರತಿಯೊಂದು ಚುನಾವಣೆಯ ಕಾರ್ಯಕ್ರಮವನ್ನು ಬರೆದಿಡಬೇಕು.

**೩೧. ಮತಪತ್ರಿಕೆಗಳ**

ಮತಳಗನ್ನು ಎಣಿಸುವ ಕಾರ್ಯವು ಮುಗಿದನಂತರ, ಮತಪತ್ರಿಕೆಗಳು ಯಾವ ಪೆಟ್ಟಿಗೆಗಳಿಂದ ತೆಗೆಯಲ್ಪಟ್ಟಿದ್ದವೋ, ಅವೇ ಪೆಟ್ಟಿಗೆಗಳಲ್ಲಿ ಪುನಃ ಇಡಲ್ಪಡಬೇಕು. ಆಮೇಲೆ, ರಿಟರ್ನಿಂಗ ಆಫೀಸರನು ಮತಪೆಟ್ಟಿಗೆಗಳಿಗೆ ಕೀಲಿಹಾಕಿ ಮೊಹರಮಾಡಿ ಅವುಗಳನ್ನು ತನ್ನ ರಕ್ಷಣೆ (ತಾಬಾ) ಯಲ್ಲಿಟ್ಟು ಕೊಳ್ಳಬೇಕು.

**೩೨. ಚುನಾವಣೆಯ ಕಾಗದಪತ್ರಗಳನ್ನು ಹಾಜರ ಮಾಡುವದು ಮತ್ತು ಅವುಗಳನ್ನು ಪರಿಶೋಧಿಸುವದು.**

ರಿಟರ್ನಿಂಗ ಆಫೀಸರನ ರಕ್ಷಣೆಯಲ್ಲಿಪ್ಪ ಮತಪತ್ರಿಕೆಗಳ ಗಂಟುಗಳನ್ನು—ಮತಪತ್ರಿಕೆಗಳು ಎಣಿಸಲ್ಪಟ್ಟಿದ್ದವು ಇರಲಿ, ನಿರಾಕರಿಸಲ್ಪಟ್ಟಿದ್ದವು ಇರಲಿ ಅಥವಾ ಕೊಡಮಾಡಲ್ಪಟ್ಟದ್ದವು ಇರಲಿ–ಮತ್ತು ಅವುಗಳ ಸ್ಥಳಪ್ರತಿಗಳ ಗಂಟುಗಳನ್ನು, ಕಲೆಕ್ಟರನ ಆಜ್ಞೆ ಇಲ್ಲದೆ ತೆರೆಯಬಾರದು ಮತ್ತು ಅವುಗಳಲ್ಲಿಯ ವಿಷಯಗಳನ್ನು ಪರಿಶೋಧಿಸಬಾರದು ಅಥವಾ ಹಾಜರ ಮಾಡಬಾರದು.

**೩೨ ಅ. ಕೊಡಮಾಡಿದ ಮತಪತ್ರಿಕೆಗಳ ಪರಿಶೀಲನೆ.**

ಯಾವನೇ ಉಮೇದವಾರನ ಚುನಾವಣೆಯು ಅಕ್ರಮವಾಗಿದೆಯೋ ಹೇಗೆ ಎಂಬುದನ್ನು ನಿರ್ಧರಿಸಲು, ಕಲೆಕ್ಟರನು ಚುನಾವಣೆಯ ಕಾಲದಲ್ಲಿ ಕೊಡಮಾಡಿದ ಮತಪತ್ರಿಕೆಗಳ ಗಣನೆ ಮಾಡಬೇಕು.

**೩೩. ಮತಪತ್ರಿಕೆಗಳನ್ನು ನಾಶಮಾಡುವದು.**

ಚುನಾವಣೆಯ ಪರಿಣಾಮವು ಪ್ರಸಿದ್ಧವಾದ ತಾರೀಖಿನಿಂದ ಒಂದು ತಿಂಗಳು ಗತಿಸಿದಮೇಲೆ, ರಿಟರ್ನಿಂಗ ಆಫೀಸರನು, ಕಲೆಕ್ಟರನ ಪೂರ್ವ ಮಂಜೂರಿಯಿಂದ ಪಂಚಾಯತವು ನೇಮಿಸಬಹುದಾದ ಪಂಚಾಯತಿಯ

ಸಭಾಸದರ ಸಮಕ್ಷಮದಲ್ಲಿ, ಮತಪೆಟ್ಟಿಗೆಗಳಲ್ಲಿದ್ದ ಮತ್ತು ಮೋಹರಮಾಡಿದ ಗಂಟುಗಳಲ್ಲಿದ್ದ ಮತಪತ್ರಿಕೆಗಳನ್ನು ನಾಶಮಾಡಬೇಕು.

**೩೪. ಅನೇಕ ಮತದಾರ ಕ್ಷೇತ್ರಗಳಿಂದ ಚುನಾವಣೆ.**

ಒಂದಕ್ಕಿಂತ ಹೆಚ್ಚು ಸ್ಥಳಗಳಿಗೆ, ಚುನಾಯಿಸಲ್ಪಟ್ಟ ಯಾವನೇ ಮನುಷ್ಯನು ಚುನಾವಣೆಯ ಪರಿಣಾಮವು ಪ್ರಸಿದ್ಧಿಸಲ್ಪಟ್ಟ ತಾರೀಖಿನಿಂದ, ಅಥವಾ ಬೇರೆ ಬೇರೆ ದಿವಸ ಇಂಥ ಪರಿಣಾಮವು, ಪ್ರಸಿದ್ಧಿಸಲ್ಪಟ್ಟಿದ್ದರೆ, ಇಂಥ ತಾರೀಖುಗಳಲ್ಲಿಯ ಕೊನೆಯ ತಾರೀಖಿನಿಂದ ೭ ದಿವಸಗಳೊಳಗಾಗಿ, ಇಂಥ ಸ್ಥಳಗಳಲ್ಲಿ ಒಂದನ್ನು ಬಿಟ್ಟು ಉಳಿದೆಲ್ಲ ಸ್ಥಳಗಳಿಗೆ ತನ್ನ ಸಹಿ ಸಹಿತ ವಾಗಿ ಲೇಖಿ ನೋಟೀಸನ್ನು ಕೊಟ್ಟು ಮತ್ತು ಅದನ್ನು ರಿಟರ್ನಿಂಗ ಆಫೀಸರ ನಿಗೆ ಒಪ್ಪಿಸಿ ರಾಜೀನಾಮೆ ಕೊಡಬೇಕು. ಇಂಥ ರಾಜೀನಾಮೆಕೊಡಲು ತಪ್ಪಿದರೆ, ಪಂಚಾಯತಿಯಲ್ಲಿದ್ದ ಇಂಥ ಮನುಷ್ಯನ ಎಲ್ಲ ಸ್ಥಳಗಳು ಬರಿದಾಗುವವು.

**೩೫. ಆಕಸ್ಮಿಕವಾಗಿ ಸ್ಥಳಗಳು ಬರಿದಾಗುವಿಕೆ.**

ಪಂಚಾಯತಿಯ ಸಭಾಸದನ ಸ್ಥಳವು ಬರಿದಾದ ಸಂಬಂಧದಲ್ಲಿ ೨೩ನೇ ಕಲಮಿನ ೧ನೇ ಉಪಕಲಮಿನನ್ವಯ ನೋಟೀಸು ಮುಟ್ಟಿದ ಮೇಲೆ, ಅಥವಾ ೯ನೇ ಕಲಮಿನನ್ವಯ ಚುನಾವಣೆಯು ಅಕ್ರಮವೆಂದು ಪ್ರಸಿದ್ಧಮಾಡಲ್ಪ ಟ್ಟಾಗ್ಗೆ, ಇಂಥ ಬರಿದಾದ ಸ್ಥಳವನ್ನು ತುಂಬಲು, ಅನುಕೂಲವಿದ್ದಷ್ಟು ಬೇಗನೆ, ಉಪಚುನಾವಣೆಯು ಜರುಗಬೇಕು, ಮತ್ತು ೪ನೇ ಮತ್ತು ೫ನೇ ನಿಯಮಗಳನ್ನು ಹೊರ್ತುಪಡಿಸಿ, ಈ ನಿಯಮಗಳು ಅವಶ್ಯವಿದ್ದ ಬದಲಾವಣೆ ಗಳೊಂದಿಗೆ ಇಂಥ ಉಪಚುನಾವಣೆಗೆ ಅನ್ವಯಿಸುವವು.

# ನಮೂನೆ "ಅ"

(೧೭ನೇ ನಿಯಮವನ್ನು ನೋಡಿರಿ).

ಸ್ಥಳಪ್ರತಿ.

ಮತಪತ್ರಿಕೆಯ ನಂಬರು.

ಮತದಾರರ ಯಾದಿಯಲ್ಲಿದ್ದ ಮತದಾರನ ನಂಬರು.

ಮತದಾರನ ಸಹಿ ಅಥವಾ ಮುದ್ರೆ ...

ಪ್ರತಿ
ಮತಪತ್ರಿಕೆಯ ನಂಬರು.

| ಅನುಕ್ರಮ ನಂಬರು. | ಉಮೇದವಾರನ ಹೆಸರು. | ಉಮೇದವಾರನ ಚಿನ್ಹ. | ಮತದಾರನ ಗುರುತು. |
|---|---|---|---|
| ೧ | | | |
| ೨ | | | |
| ೩ | | | |
| ೪ | | | |
| ೫ ಇತ್ಯಾದಿ. | | | |

ನಿಮ್ಮ ಮತ (ಗಳನ್ನು) ಕೊಡುವಮೊದಲು ಇದನ್ನು ಲಕ್ಷ್ಯಪೂರ್ವಕ ಓದಿರಿ.

(೧) ನಿಮಗೆ ಮತ (ಗಳು) ಅದೆ (ವೆ)

(೨) ಒಂದು ಕತ್ತರಿ ಗುರುತು ಅಂದರೆ ಒಂದು ಮತ.

(೩) ಯಾವನೇ ಉಮೇದವಾರನ ಹೆಸರಿನ ಎದುರು ಒಂದಕ್ಕಿಂತ ಅಧಿಕ ಕತ್ತರಿ ಗುರುತುಗಳನ್ನು ಮಾಡಬೇಡಿರಿ.

(೪) ಒಟ್ಟು ಗುರುತು (ಗಳಿ) ಗಿಂತ ಹೆಚ್ಚು ಗುರುತುಗಳನ್ನು ಮಾಡಬೇಡಿರಿ..

# ನಮೂನೆ "ಬ"

ಕೊಡಮಾಡಿದ ಮತಗಳ ಯಾದಿ.

**(೨೬ನೇ ನಿಯಮವನ್ನು ನೋಡಿರಿ).**

.......................... ದ ಗ್ರಾಮಪಂಚಾಯತ.

.......................... ಮತಗಟ್ಟೆ.

| ವಾರ್ಡಿನ ಹೆಸರು | ಮತದಾರನ ಹೆಸರು | ಮತದಾರನ ಯಾದಿಯಲ್ಲಿಯ ನಂಬರು | ನೋಂದಾಯಿಸಿದ ಮತಗಳ ಸಂಖ್ಯೆ |
|---|---|---|---|
| | | | |

# ನಮೂನೆ "ಕ"

ನಾಮಪತ್ರದ ನಮೂನೆ.

(೯ನೇ ನಿಯಮವನ್ನು ನೋಡಿರಿ).

ವಾರ್ಡಿನ ನಂಬರು...............

ಉಮೇದವಾರನ ಸಂಪೂರ್ಣ ಹೆಸರು.......... ......................

ವಯಸ್ಸು...............

ವಿಳಾಸ.........................................................

ಉಮೇದವಾರನ ಜಾತಿ..................................

(ಯಾವುದೇ ವಾರ್ಡಿನಲ್ಲಿ ಸ್ತ್ರೀಯರು, ಮುಸಲ್ಮಾನರು, ಹರಿಜನರು ಮತ್ತು ಹಿಂದುಳಿದ ಜಾತಿಯವರು ಇವರಿಗಾಗಿ ಸ್ಥಳವು ಕಾಯ್ದಿಡಲ್ಪಟ್ಟಿದ್ದರೆ, ಕಾಯ್ದಿಡಲ್ಪಟ್ಟ ಸ್ಥಳ ಅಥವಾ ಸ್ಥಳಗಳಿಗೆ ಸಂಬಂಧಪಟ್ಟ ಜಾತಿಗೆ ಅಥವಾ ಜಾತಿಗಳಿಗೆ ಸೇರಿದವನೋ ಹೇಗೆ ಎಂಬುದನ್ನು ಬರೆಯಬೇಕು. ಹರಿಜನ ಅಥವಾ ಹಿಂದುಳಿದ ಜಾತಿಯವನಿದ್ದರೆ, ಜಾತಿಯನ್ನು ಬರೆಯಬೇಕು).

ಉಮೇದವಾರನು ಯಾವ ವಾರ್ಡಿನಲ್ಲಿ ಮತಕೊಡಲು ಹಕ್ಕುಳ್ಳವನಿರುವನೋ ಆ ವಾರ್ಡಿನ ಹೆಸರು ಮತ್ತು ಮತದಾರರ ಯಾದಿಯಲ್ಲಿಯ ಅವನ ನಂಬರು.

ನಾನು ಚುನಾಯಿಸಲ್ಪಟ್ಟರೆ, ಸಭಾಸದನೆಂದು ಕೆಲಸಮಾಡಲು ನನ್ನ ಸಮ್ಮತಿ ಇದೆಯೆಂದು ಈ ಮೂಲಕ ಜಾಹೀರ ಮಾಡುತ್ತೇನೆ.

ತಾರೀಖು

ಅನುಕ್ರಮ ನಂಬರು ಉಮೇದವಾರನ ಸಹಿ.

.................ರಿಟರ್ನಿಂಗ ಆಫೀಸರನಿಗೆ ನಾಮಪತ್ರವನ್ನು ಸಲ್ಲಿಸಿದ ತಾರೀಖು ಮತ್ತು ವೇಳೆ }

# ೧೯೪೪ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತಗಳ ಸೆಕ್ರೆಟರಿಗಳ (ನೌಕರಿಯ ಕರಾರುಗಳ) ಸಂಬಂಧದ ನಿಯಮಗಳು.

(ಹೆಲ್ಥ ಮತ್ತು ಲೋಕಲ್ ಗವ್ಹರ್ನಮೆಂಟ ಡಿಪಾರ್ಟಮೆಂಟಿನ ನಂ ಎಸ್ ೧೭೪ (೧೦) ತಾ ೨೪ನೇ ನವ್ಹೆಂಬರ ೧೯೪೪ನೇ ಇಸ್ವಿಯ ಪ್ರಕಟನೆ).

೧೯೩೩ನೇ ಇಸ್ವಿಯ ಮುಂಬಯಿ ಗ್ರಾಮಪಂಚಾಯತಗಳ ಕಾನೂನಿನ (೧೯೩೩ನೇ ಇಸ್ವಿಯ ಮುಂಬಯಿ ಕಾನೂನು ನಂಬರು ೬) ೧೦೪ನೇ ಕಲಮಿನ (ಈ ೧) ರಕಮಿನನ್ವಯ ದೊರೆತ ಅಧಿಕಾರವನ್ನು ಉಪಯೋಗಿಸಿ ಮತ್ತು ಜನರಲ್ ಡಿಪಾರ್ಟಮೆಂಟಿನ ನಂ ಎಸ್ ೧೭೪/೧೦ ತಾರೀಖು ೧೨ನೇ ಮಾರ್ಚ ೧೯೪೦ ಮತ್ತು ೩೧ನೇ ಜುಲೈ ೧೯೪೨ ಮತ್ತು ಎಸ್ ೧೭೪/೧೦ (ಅ) ತಾರೀಖು ೪ನೇ ನವ್ಹೆಂಬರ ೧೯೪೧ನೇ ಇಸ್ವಿಯ ಪ್ರಕಟನೆಗಳನ್ನು ರದ್ದುಪಡಿಸಿ ಮುಂಬಯಿ ಸರಕಾರದವರು ಈ ಕೆಳಗಿನ ನಿಯಮಗಳನ್ನು ಮಾಡಿರುತ್ತಾರೆ:—

೧. ಈ ನಿಯಮಗಳನ್ನು ೧೯೪೪ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತಗಳ ಸೆಕ್ರೆಟರಿಗಳ (ನೌಕರಿಯ ಕರಾರುಗಳ) ಸಂಬಂಧದ ನಿಯಮಗಳೆಂದು ಕರೆಯಬಹುದು.

೨. ಈ ನಿಯಮಗಳಲ್ಲಿ—

(ಅ) "ಆಕ್ಟ" ಅಂದರೆ ೧೯೩೩ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತಗಳ ವಿಷಯದ ಕಾನೂನು ಎಂದರ್ಥವಾಗುತ್ತದೆ;

(ಬ) "ಮೊದಲನೇ ವರ್ಗದ ಪಂಚಾಯತವು" ಅಂದರೆ ೩೦೦೦ ರೂಪಾಯಿ ಅಥವಾ ಅಧಿಕ ವಾರ್ಷಿಕ ಉತ್ಪನ್ನುಳ್ಳ ಪಂಚಾಯತವು ಎಂದರ್ಥ;

(ಕ) "೨ನೇ ವರ್ಗದ ಪಂಚಾಯತವು" ಅಂದರೆ ೧೫೦೦ ರೂಪಾಯಿ ಅಥವಾ ಅದಕ್ಕಿಂತ ಹೆಚ್ಚು ಆಂದರೆ ೩೦೦೦ ರೂಪಾಯಿಗಳಿಂತ ಕಡಿಮೆ ವಾರ್ಷಿಕ ಉತ್ಪನ್ನುಳ್ಳ ಪಂಚಾಯತವು ಎಂದರ್ಥ;

(ಡ) "೩ನೇ ವರ್ಗದ ಪಂಚಾಯತವು" ಅಂದರೆ ೧೫೦೦ ರೂಪಾಯಿಗಳಿಗಿಂತ ಕಡಿಮೆ ವಾರ್ಷಿಕ ಉತ್ಪನ್ನುಳ್ಳ ಪಂಚಾಯತವು ಎಂದರ್ಥ;

(ಈ) "ಸೆಕ್ರೆಟರಿ" ಅಂದರೆ ಪಂಚಾಯತಿಯ ಸೆಕ್ರೆಟರಿ ಎಂದರ್ಥವು.

**ಟಿಪ್ಪಣಿ ೧.** ಪಂಚಾಯತಿಯ ವಾರ್ಷಿಕ ಉತ್ಪನ್ನಿನ ಲೆಕ್ಕ ಮಾಡುವಾಗ್ಗೆ, ಈ ಕಾನೂನಿನ ೩೩ನೇ ಕಲಮಿನನ್ವಯ ಸೆಕ್ರೆಟರಿಯ ಪಗಾರ ಮತ್ತು ಭತ್ತೆಗಳ ಬಗ್ಗೆ ಸರಕಾರದವರು ಕೊಟ್ಟ ಗ್ರ್ಯಾಂಟನ್ನು ಲೆಕ್ಕದಲ್ಲಿ ಸೇರಿಸಬಾರದು.

**ಟಿಪ್ಪಣಿ ೨.** ಹೊಸ ಪಂಚಾಯತಗಳ ಸಂಬಂಧದಲ್ಲಿ ಜಿಲ್ಹೆಯ ಕಲೆಕ್ಟರನು (ಪಂಚಾಯತದ) ವರ್ಗವನ್ನು ಗೊತ್ತು ಮಾಡಬೇಕು; ಮತ್ತು ಯಾವಾಗ್ಗೆ ಒಂದು ಸಂಪೂರ್ಣ ಹಣಕಾಸಿನ ವರ್ಷದ ಪ್ರತ್ಯೇಕ ಆದಾಯವು ಗೊತ್ತಾಗುವದೋ ಆಗ್ಗೆ ಅವನು ಅದರಬಗ್ಗೆ ಪುನರವಲೋಕನೆ ಮಾಡಬೇಕು. ಇತರ ಪಂಚಾಯತಗಳ ಸಂಬಂಧದಲ್ಲಿ ಅತಿ ಸಮೀಪದ ಹಿಂದಿನ ಸಂಪೂರ್ಣ ಹಣಕಾಸಿನ ವರ್ಷದಲ್ಲಿ ಬಂದ ಆದಾಯ, ಅಧಿಕ, ಸಾಧಾರಣ ಭೂಮಿಯ ಮಹಸೂಲಿನಲ್ಲಿ ೧೦೦ಕ್ಕೆ ೧೫ ರಷ್ಟು ಹಣಕ್ಕೆ ಸರಿಯಾಗುವ ಸರಕಾರಿ ಗ್ರ್ಯಾಂಟು ಮತ್ತು ಜಿಲ್ಹಾ ಲೋಕಲ್ ಬೋರ್ಡಿನಿಂದ ಅವು ಗ್ರಾಮದ ಗಡಿಗಳಲ್ಲಿ ಮೊದಲು ಪಡೆಯುತ್ತಿದ್ದ ಲೋಕಲ್ ಫಂಡಿನ ಹಣ ಇವುಗಳಲ್ಲಿ ಯಾವುದಾದರೂ ಅಂದಾಜುಮಾಡಲ್ಪಟ್ಟ ವ್ಯತ್ಯಾಸ ಇದ್ದರೆ, ಅದರಮೇಲಿಂದ (ಪಂಚಾಯತಿಯ) ವರ್ಗವನ್ನು ಗೊತ್ತುಮಾಡಬೇಕು.

## ಅರ್ಹತೆಗಳು.

೩. ಯಾವನೊಬ್ಬನು—

(ಅ) ಕನಿಷ್ಟ ಹಾಯಸ್ಕೂಲ ೬ನೇ ಇಯತ್ತೆಯ ಪರೀಕ್ಷೆಯನ್ನು ಅಥವಾ ಮ್ಯಾಟ್ರಿಕ್ಯುಲೇಶನ ಪರೀಕ್ಷೆಯ ಹಿಂದಿನ ಪರೀಕ್ಷೆಗೆ ಸರಿಸಮಾನ ವಾದ ಪರೀಕ್ಷೆಯನ್ನು ಪಾಸಾಗದ ವಿನಃ ಅವನನ್ನು ಮೊದಲನೇ ವರ್ಗದ ಪಂಚಾಯತಿಯ ಸೆಕ್ರೆಟರಿಯ ಸ್ಥಳಕ್ಕೆ ನೇಮಿಸಬಾರದು;

(ಬ) ಕನಿಷ್ಟ ಪ್ರಾಯಮರಿ ಸ್ಕೂಲ ಸರ್ಟಿಫಿಕೇಟ ಪರೀಕ್ಷೆಯನು ಪಾಸಾಗದ ವಿನಃ ಅವನನ್ನು ೨ನೇ ಅಥವಾ ೩ನೇ ವರ್ಗದ ಪಂಚಾಯತಿಯ್ನು ಸೆಕ್ರೆಟರಿಯ ಸ್ಥಳಕ್ಕೆ ನೇಮಿಸಬಾರದು.

೪. ನೇಮಣೂಕಿಯ ದಿವಸ ಯಾವನೊಬ್ಬನಿಗೆ ೨೫ ವರ್ಷ ವಯಸ್ಸಾ ಗಿದ್ದರೆ ಅಥವಾ ೧೮ ವರ್ಷ ವಯಸ್ಸಾಗಿರದಿದ್ದರೆ, ಅವನು ಸೆಕ್ರೆಟರಿಯ ಸ್ಥಳಕ್ಕೆ ನೇಮಿಸಲ್ಪಡಲು ಅರ್ಹನಾಗಲಾರನು.

ಆದರೆ ಗೊತ್ತುಪಡಿಸುವದೇನಂದರೆ, ನೇಮಣೂಕಿಯ ದಿವಸ ಯಾವ ನೊಬ್ಬನು ೨೫ ವರ್ಷ ವಯಸ್ಸಿನವನಾಗಿದ್ದರೂ, ಪಂಚಾಯತಿಯು ಲೇಖಿ ಕಾರಣಗಳನ್ನು ಕೊಟ್ಟು ಅವನನ್ನು ಸೆಕ್ರೆಟರಿಯೆಂದು ನೇಮಿಸಬಹುದು.

೫. ಸೆಕ್ರೆಟರಿಯ ನೇಮಣೂಕಿಯನ್ನು ಮಾಡುವಾಗ್ಗೆ, ಗ್ರಾಮ ಸುಧಾರಣೆಯಬಗ್ಗೆ ಶಿಕ್ಷಣ ಪಡೆದವನಿಗಿಂತ ಅಂಥ ಶಿಕ್ಷಣವನ್ನು ಪಡೆದವನಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡಬೇಕು.

## ಶಿಕ್ಷಣ.

೬. ಸೆಕ್ರೆಟರಿಯ ಸ್ಥಳಕ್ಕೆ ಉಮೇದವಾರನೆಂದು ಆರಿಸಲ್ಪಟ್ಟ ಪ್ರತ್ಯೇಕ ಮನುಷ್ಯನು ಜಿಲ್ಹಾ ಲೋಕಲ್ ಬೋರ್ಡಿನ ಕಚೇರಿಯಲ್ಲಿ ಎರಡು ತಿಂಗಳು ಅಥವಾ ಪ್ರಾಂತಿಕ ಸರಕಾರದವರು ಆಜ್ಞೆಮಾಡಬಹುದಾದಂಥ ಅವಧಿಯವರೆಗೆ ಶಿಕ್ಷಣ ಪಡೆಯಬೇಕು.

# ಉಮೇದವಾರಿಕೆ.

೭. ಯಾವ ಉಮೇದವಾರನು ಜಿಲ್ಹಾ ಲೋಕಲ್ ಬೋರ್ಡಿನ ಚೀಫ ಆಫೀಸರನಿಗೆ ಅಥವಾ ಸೆಕ್ರೆಟರಿಗೆ ತೃಪ್ತಿಯಾಗುವಂತೆ ತನ್ನ ಶಿಕ್ಷಣ ವನ್ನು ಪೂರ್ತಿಗೊಳಿಸಿರುವನೋ ಅವನನ್ನು ಎರಡು ವರ್ಷಗಳವರೆಗೆ ಉಮೇದ ವಾರ (ಪ್ರೊಬೆಶನರ) ನೆಂದು ನೇಮಿಸಬೇಕು.

೮. ತನ್ನ ಉಮೇದವಾರಿಕೆಯ ಅವಧಿಯು ಮುಗಿಯುವ ಪೂರ್ವ ದಲ್ಲಿ ಪ್ರತಿಯೊಬ್ಬ ಉಮೇದವಾರನು, ಕಾಲಕಾಲಕ್ಕೆ ಪ್ರಾಂತಿಕ ಸರಕಾರ ದವರು ಗೊತ್ತುಮಾಡಬಹುದಾದಂಥ ಡಿಪಾರ್ಟಮೆಂಟಲ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಬೇಕು. ಇಂಥ ಪರೀಕ್ಷೆಯಲ್ಲಿ ತೇರ್ಗಡೆ ಹೊಂದದಿದ್ದರೆ, ಸಾಮಾನ್ಯವಾಗಿ ನೇಮಣೂಕಿಯನ್ನು ಕಳಕೊಳ್ಳಬೇಕಾಗುವದು, ಆದರೆ ಅಪವಾದಾತ್ಮಕ ಪರಿಸ್ಥಿತಿಗಳಲ್ಲಿ, ಪಂಚಾಯತವು ಲೇಖಿ ಕಾರಣಗಳನ್ನು ಕೊಟ್ಟು, ಉಮೇದವಾರನಿಗೆ ಆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವದಕ್ಕೆ ಮತ್ತೊಂದು ಅವಕಾಶವನ್ನು ಕೊಡಬೇಕು ಮತ್ತು ಆ ಕಾರಣಕ್ಕಾಗಿ ಆ ಉಮೇದವಾರನ ಉಮೇದವಾರಿಕೆಯ ಅವಧಿಯನ್ನು ಒಂದು ವರ್ಷ ಮೀರ ದಂತೆ, ಹೆಚ್ಚಿಸಬೇಕು.

೯. ಡಿಪಾರ್ಟಮೆಂಟಲ ಪರೀಕ್ಷೆಯು ಮುಗಿದನಂತರ ಶಕ್ಯವಿದ್ದಷ್ಟು ಬೇಗನೆ, ಕಲೆಕ್ಟರನು ಪರೀಕ್ಷೆಯ ಪರಿಣಾಮವನ್ನು ಸರಕಾರೀ ಗ್ಯಾಝೇಟಿ ನಲ್ಲಿ, ತೇರ್ಗಡೆಹೊಂದಿದ ಉಮೇದವಾರರ ಹೆಸರುಗಳನ್ನು ಗುಣಾನುಕ್ರಮ ವಾಗಿ ಕೊಟ್ಟು ಪ್ರಸಿದ್ಧಮಾಡಬೇಕು.

# ಅಧಿಕಾರಗಳು ಮತ್ತು ಕರ್ತವ್ಯಗಳು.

೧೦. ಸೆಕ್ರೆಟರಿಯು, ಪಂಚಾಯತವು ಅವನಿಗೆ ಒಪ್ಪಿಸಿ ಕೊಡಬಹು ದಾದಂಥ ಎಲ್ಲ ಆಡಳಿತೆಯ ಮತ್ತು ಇತರ ಕೆಲಸಗಳನ್ನು ಮಾಡಬೇಕು. ಗ್ರಾಮ ಸುಧಾರಣೆಯ ಸಂಬಂಧ ಪ್ರಾಂತಿಕ ಸರಕಾರದವರು ಆಜ್ಞೆಮಾಡ ಬಹುದಾದಂಥ ಇತರ ಬೇರೆ ಕೆಲಸಗಳನ್ನು ಸಹ ಅವನು ಮಾಡಬೇಕು.

೧೧. ಸೆಕ್ರೆಟರಿಯು ಪಂಚಾಯತಿಯ ಎಲ್ಲ ಕಾರ್ಯಕಾರೀ ಆಜ್ಞೆಗಳನ್ನು ಜಾರಿಯಲ್ಲಿ ತರಬೇಕು.

೧೨. ಸೆಕ್ರೆಟರಿಯು ಪಂಚಾಯತಿಯ ಸೇವಕರ ಮೇಲ್ವಿಚಾರಣೆ, ಮಾರ್ಗದರ್ಶನ ಮತ್ತು ನಿಯಂತ್ರಣಗಳಿಗೆ ಹೊಣೆಗಾರನಾಗುವನು.

೧೩. ಸೆಕ್ರೆಟರಿಯು, ಈ ಕಾನೂನಿನ ಠರಾವುಗಳಿಗೆ ಮತ್ತು ಅದರ ನಿಯಮಗಳಿಗೆ ಮತ್ತು ಉಪನಿಯಮಗಳಿಗೆ ಒಳಪಟ್ಟು, ಪೇಟೆಗಳಿಗೆ (ಮಾರ್ಕೆಟ) ಮತ್ತು ವಧಾಲಯಗಳಿಗೆ ಸಂಬಂಧಿಸಿದ ಲಾಯಸೆನ್ಸಗಳನ್ನು ಹೊರ್ತುಪಡಿಸಿ, ಈ ಕಾನೂನಿನನ್ವಯ ಪಂಚಾಯತವು ಕೊಡಬಹುದಾದ ಎಲ್ಲ ಲಾಯಸೆನ್ಸ ಮತ್ತು ಪರವಿಟ್ಟುಗಳನ್ನು ತನ್ನ ಸಹಿಯೊಂದಿಗೆ ಕೊಡಬೇಕು.

೧೪. ಸೆಕ್ರೆಟರಿಯು ಪಂಚಾಯತಿಯ ಕರಗಳ ಮತ್ತು ಇತರ ಬರತಕ್ಕ ಹಣಗಳ ಶೀಘ್ರ ವಸೂಲಿಯಬಗ್ಗೆ ಹೊಣೆಗಾರನಾಗುವನು.

೧೫. ಸೆಕ್ರೆಟರಿಯು, ಆಡಿಟರ, ಜಿಲ್ಹಾ ಲೋಕಲ್ ಬೋರ್ಡು ಅಥವಾ ಕಲೆಕ್ಟರನು ತೋರಿಸಿಕೊಟ್ಟ ಯಾವುದೇ ಅಕ್ರಮತೆ (ಅವ್ಯವಸ್ಥೆ) ಯನ್ನು ನಿವಾರಿಸಲು ಕೂಡಲೆ ಉಪಾಯಗಳನ್ನು ಕೈಕೊಳ್ಳಬೇಕು.

೧೬. ಸೆಕ್ರೆಟರಿಯು, ಮೋಸ, ದುರುಪಯೋಗ, ಪಂಚಾಯತಿಯ ಹಣದ ಅಥವಾ ಆಸ್ತಿಯ ಕಳವು ಅಥವಾ ಹಾನಿಗಳ ಸಂಬಂಧದ ಎಲ್ಲ ವಿಷಯಗಳನ್ನು ಕೂಡಲೇ ಸರಪಂಚನಿಗೆ ವರದಿ ಮಾಡಬೇಕು. ಅವನು ಇಂಥ ವರದಿಯ ಪ್ರತಿಗಳನ್ನು ಜಿಲ್ಹಾ ಲೋಕಲ್ ಬೋರ್ಡ ಅಧ್ಯಕ್ಷನಿಗೆ ಮತ್ತು ಕಲೆಕ್ಟರನಿಗೆ ಸಹ ಕಳಿಸಬೇಕು.

## ಪಗಾರ

೧೭. (೧) ಮೊದಲನೇ ವರ್ಗದ ಪಂಚಾಯತಿಯ ಸೆಕ್ರೆಟರಿಯ ಸ್ಥಳಕ್ಕೆ ಉಮೇದವಾರನೆಂದು ಆರಿಸಲ್ಪಟ್ಟ ಪ್ರತಿಯೊಬ್ಬ ಮನುಷ್ಯನಿಗೆ ಅವನ ಶಿಕ್ಷಣದ ಅವಧಿಯಲ್ಲಿ, ಮತ್ತು ಪ್ರತಿಯೊಬ್ಬ ಪ್ರೊಬೆಶನರನಿಗೆ ಅವನ ಪ್ರೊಬೆಶನ (ಉಮೇದವಾರಿಕೆ)ದ ಅವಧಿಯಲ್ಲಿ ತಿಂಗಳಿಗೆ ೪೦ ರೂಪಾಯಿ ಪಗಾರ ಸಿಗು

ವದು. ಇಂಥ ಪಂಚಾಯತಿಯ ಸೆಕ್ರೆಟರಿಯೆಂದು ಅವನು ಕಾಯಂ ಮಾಡಲ್ಪಟ್ಟಮೇಲೆ ಅವನಿಗೆ ರೂ ೪೨-೨-೮೦ ಈ ಪ್ರಮಾಣದಲ್ಲಿ ಪಗಾರ ಸಿಗುವದು. ವರ್ಷಕ್ಕೆ ೧೫ ಸಾವಿರ ರೂಪಾಯಿಗಳಿಗಿಂತ ಅಧಿಕ ಉತ್ಪನ್ನುಳ್ಳ ಪಂಚಾಯತಿಯು, ಪ್ರಾಂತಿಕ ಸರಕಾರದ ಪೂರ್ವ ಮಂಜೂರಿಪಡೆದು ತನ್ನ ಸೆಕ್ರೆಟರಿಗಾಗಿ ಹೆಚ್ಚಿನ ಪಗಾರದ ಪ್ರಮಾಣವನ್ನು ಮಂಜೂರ ಮಾಡ ಬಹುದು.

(೨) ೨ನೇ ವರ್ಗದ ಪಂಚಾಯತಿಯ ಸೆಕ್ರೆಟರಿಯ ಸ್ಥಳಕ್ಕೆ ಉಮೇದ ವಾರನೆಂದು ಆರಿಸಲ್ಪಟ್ಟ ಪ್ರತಿಯೊಬ್ಬ ಮನುಷ್ಯನಿಗೆ, ಅವನ ಶಿಕ್ಷಣದ ಅವಧಿಯಲ್ಲಿ ಮತ್ತು ಪ್ರತಿಯೊಬ್ಬ ಪ್ರೊಬೆಶನರನಿಗೆ, ಅವನ ಪ್ರೊಬೆಶನದ ಅವಧಿಯಲ್ಲಿ ತಿಂಗಳಿಗೆ ೩೦ ರೂಪಾಯಿ ಪಗಾರ ಸಿಗುವದು. ಇಂಥ ಪಂಚಾಯತಿಯ ಸೆಕ್ರೆಟರಿಯೆಂದು ಅವನು ಕಾಯಂ ಮಾಡಲ್ಪಟ್ಟಮೇಲೆ ಅವನಿಗೆ ರೂ ೩೧-೧-೫೦ ಈ ಪ್ರಮಾಣದಲ್ಲಿ ಪಗಾರ ಸಿಗುವದು.

(೩) ೩ನೇ ವರ್ಗದ ಪಂಚಾಯತಿಯ ಸೆಕ್ರೆಟರಿಯ ಸ್ಥಳಕ್ಕೆ ಉಮೇದ ವಾರನೆಂದು ಆರಿಸಲ್ಪಟ್ಟ ಪ್ರತಿಯೊಬ್ಬನಿಗೆ ಅವನ ಶಿಕ್ಷಣದ ಅವಧಿಯಲ್ಲಿ ಮತ್ತು ಪ್ರತಿಯೊಬ್ಬ ಪ್ರೊಬೆಶನರನಿಗೆ ಅವನ ಪ್ರೊಬೆಶನದ ಅವಧಿಯಲ್ಲಿ, ಪಂಚಾಯತವು ಗೊತ್ತುಮಾಡಬಹುದಾದ ಪ್ರಕಾರ, ತಿಂಗಳಿಗೆ ೨೦ ಅಥವಾ ೩೦ ರೂಪಾಯಿ ಪಗಾರ ಸಿಗುವದು. ಇಂಥ ಪಂಚಾಯತಿಯ ಸೆಕ್ರೆಟರಿ ಯೆಂದು ಅವನು ಕಾಯಂ ಮಾಡಲ್ಪಟ್ಟ ಮೇಲೆ ಅವನಿಗೆ ಪ್ರಸಂಗಾನುಸಾರ ರೂ ೨೧-೧-೪೦ ಅಥವಾ ರೂ ೩೧-೧-೫೦ ಈ ಪ್ರಮಾಣದಲ್ಲಿ ಪಗಾರ ಸಿಗುವದು.

(೪) ಪ್ರತ್ಯೇಕ ವಿಷಯದಲ್ಲಿ, ಆರಿಸಲ್ಪಟ್ಟ ಉಮೇದವಾರನು ತನ್ನ ಶಿಕ್ಷಣದ ಅವಧಿಯಲ್ಲಿ, ಪ್ರೊಬೆಶನರನು ತನ್ನ ಪ್ರೊಬೆಶನದ ಅವಧಿಯಲ್ಲಿ ಮತ್ತು ಕಾಯಂ ಮಾಡಲ್ಪಟ್ಟ ಸೆಕ್ರೆಟರಿಯು, ಜಿಲ್ಹಾ ಲೋಕಲ್ ಬೋರ್ಡು ತನ್ನ ನೌಕರರಿಗಾಗಿ ಮಾಡಿದ ನಿಯಮಗಳನ್ವಯ ಗೊತ್ತುಮಾಡಲ್ಪಟ್ಟ ದರ ಗಳಂತೆ ಇಂಥ ಭತ್ತೆಗಳನ್ನು ಪಡೆಯಲು ಬಾಧ್ಯಸ್ಥರಾಗುವದು.

# ನೌಕರಿಯು ಇತರ ಕರಾರುಗಳು.

೧೮. ಸೆಕ್ರೆಟರಿಯು ತನ್ನ ಎಲ್ಲ ವೇಳೆ ಮತ್ತು ಲಕ್ಷವನ್ನು ತನ್ನ ಕಚೇರಿಯ ಕೆಲಸಗಳಿಗಾಗಿ ಮೀಸಲಾಗಿಡಬೇಕು; ಮತ್ತು ತನ್ನ ಕಚೇರಿಯ ಕೆಲಸಗಳನ್ನು ಬಿಟ್ಟು ನೌಕರಿಯಲ್ಲಿದ್ದಾಗ್ಗೆ ಅಥವಾ ರಜೆಯಮೇಲಿದ್ದಾಗ್ಗೆ, ಪಂಚಾಯತಿಯ ಪೂರ್ವ ಮಂಜೂರಿಯಿಲ್ಲದೆ ಎರಡನೇ ಯಾವುದೇ ವ್ಯಾಪಾರವನ್ನು ಅಥವಾ ನೌಕರಿಯನ್ನು ಮಾಡಬಾರದು.

ಆದರೆ ಗೊತ್ತುಪಡಿಸುವದೇನಂದರೆ, ಸೆಕ್ರೆಟರಿಯು ಪಂಚಾಯತಿಯ ಪೂರ್ವ ಮಂಜೂರಿಯಿಂದ ತನ್ನ ಬಿಡುವಿನ ವೇಳೆಯಲ್ಲಿ **ಗ್ರಾಮದಳದಂಥ** ಎರಡನೇ ಕೆಲಸದಲ್ಲಿ ತೊಡಗಬಹುದು ಮತ್ತು ಅಂಥ ಕೆಲಸಕ್ಕಾಗಿ ವೇತನವನ್ನು ಪಡೆಯಬಹುದು.

೧೯. ಸೆಕ್ರೆಟರಿಯು ತನ್ನ ನೇಮಣೂಕಿಯ ಸ್ಥಳದಲ್ಲಿ ವಾಸವಾಗಿರಬೇಕು. ಗ್ರೂಪ ಸೆಕ್ರೆಟರಿಯು ತನ್ನ ಗ್ರೂಪಿನ ಗ್ರಾಮಗಳಪೈಕಿ ಒಂದು ಗ್ರಾಮದಲ್ಲಿ ವಾಸವಾಗಿರಬೇಕು.

೨೦. ಪ್ರತಿಯೊಬ್ಬ ಸೆಕ್ರೆಟರಿಯು ಮೊದಲನೇ ವರ್ಗದ ಪಂಚಾಯತಿಯ ಸಂಬಂಧದಲ್ಲಿ ೩೦೦ ರೂಪಾಯಿಗಳ ಮತ್ತು ಎರಡನೇ ಇಲ್ಲವೆ ಮೂರನೇ ವರ್ಗದ ಪಂಚಾಯತಿಯ ಸಂಬಂಧದಲ್ಲಿ ೨೦೦ ರೂಪಾಯಿಗಳ ಒಂದು ಜಾಮೀನಪತ್ರವನ್ನು ಬರಕೊಡಬೇಕು; ಇದಲ್ಲದೆ, ಅವನು ಪ್ರತ್ಯೇಕ ವಿಷಯದಲ್ಲಿ ಅದರಷ್ಟೇ ಹಣದ ಒಂದು ಜಾಮೀನು ಕೊಡಬೇಕು. "ಡಿವ್ಹೊಲುಶನ" ನಿಯಮಗಳ ೩೭ನೇ ನಿಯಮದ (ಈ) ರಕಮಿನನ್ವಯ ಮಾಡಲ್ಪಟ್ಟ "ಫಾಯನಾನ್ಸಿಯಲ್" ನಿಯಮಗಳಲ್ಲಿ ಸರಕಾರಿ ನೌಕರರಿಗಾಗಿ ಗೊತ್ತುಮಾಡಿದ ನಮೂನೆಗಳಲ್ಲಿಯ ಒಂದು ನಮೂನೆಯಲ್ಲಿ ಪಂಚಾಯತಿಯ ಹೆಸರಿನಲ್ಲಿ ಆ ಜಾಮೀನಪತ್ರ ಬರೆಯಲ್ಪಡಬೇಕು.

೨೧. ಸೆಕ್ರೆಟರಿಯ ರಜೆಯು, "ಬಾಂಬೆ ಸಿವ್ಹಿಲ ಸರ್ವಿಸಿಸ್ ರೂಲ ಮ್ಯಾನುಅಲ್" ೨ನೇ ಭಾಗ ಇದರಲ್ಲಿಯ ಸುಧಾರಿಸಲ್ಪಟ್ಟ ರಜೆಯ ನಿಯಮ ಗಳಿಗನುಸರಿಸಿ, ನಿಯಮನಗೊಳಿಸಲ್ಪಡಬೇಕು; ಮತ್ತು ಈ ಉದ್ದೇಶಕ್ಕಾಗಿ ಅವನು ವರಿಷ್ಠ ನೌಕರನ ದರ್ಜೆಯವನೆಂದು ತಿಳಿಯಬೇಕು. ಜಿಲ್ಹಾ ಲೋಕಲ್ ಬೋರ್ಡಿನ ನೌಕರರಂತೆ ಅವನಿಗೆ ಸಹ ಅವೇ ಕರಾರುಗಳ ಮೇಲೆ ಅಷ್ಟೇ ಅವಧಿಯ ನೈಮಿತ್ತಿಕ ( Casual ) ರಜೆಯು ಸಿಗಬಹುದು. ನೈಮಿತ್ತಿಕ ರಜೆಯು ಸರಪಂಚನಿಂದ ಕೊಡಲ್ಪಡುವದು, ಮತ್ತು ಪಂಚಾ ಯತಿಯಿಂದ ಇಡಲ್ಪಟ್ಟ "ಸರ್ವಿಸ ಬುಕ್ಕಿ"ನಲ್ಲಿ ಆ ರಜೆಯು ನಮೂದ ಮಾಡಲ್ಪಡಬೇಕು.

೨೨. ಸೆಕ್ರೆಟರಿಯು, ತನಗೆ ೫೫ ವರ್ಷ ವಯಸ್ಸಾಗುವ ತಾರೀಖಿನ ದಿವಸ ಸೇವಾನಿವೃತ್ತನಾಗಬೇಕಾಗುವದು. ಅವನು ಕಡ್ಡಾಯವಾಗಿ ಸೇವಾನಿವೃತ್ತನಾದ ತಾರೀಖಿನ ನಂತರ, ಜಿಲ್ಹಾ ಕಲೆಕ್ಟರನ ಪೂರ್ವ ಮಂಜೂರಿಯಿಂದ, ಸಾರ್ವಜನಿಕ ಕಾರಣಗಳಿಗಾಗಿ ಅವನನ್ನು ಪುನಃ ನೌಕ ರಿಯ ಮೇಲೆ ಇಡಬಹುದು. ಆ ಕಾರಣಗಳನ್ನು ಬರೆದಿಡಬೇಕು. ಸೆಕ್ರೆ ಟರಿಯು ಸೇವಾನಿವೃತ್ತನಾಗಬೇಕಾದ ವಯಸ್ಸನ್ನು ಸಮೀಪಿಸುವ ಕಾಲಕ್ಕೆ ಮತ್ತು ನೌಕರಿಯ ಪ್ರತ್ಯೇಕ ವಿಸ್ತರಣೆ (ಬೆಳೆಸಡಲ್ಪಟ್ಟ ಅವಧಿ)ಯು ಮುಗಿ ಯುವ ಮೊದಲು ಪ್ರತಿಯೊಬ್ಬ ಸೆಕ್ರೆಟರಿಯ ಪ್ರಕರ್ಣವನ್ನು ನೋಡಬೇಕು. ಮೊದಲನೇ ವಿಸ್ತರಣೆಯನ್ನು ಸಾಮಾನ್ಯವಾಗಿ ಹಣಕಾಸಿನ ವರ್ಷದ ಕೊನೆಯ ವರೆಗೆ ಮಾಡಿ, ಒಂದೇ ವೇಳೆಗೆ ಒಂದು ವರ್ಷಕ್ಕಿಂತ ಅಧಿಕ ಅವಧಿಯ ವಿಸ್ತರಣೆಗಳನ್ನು ಮಾಡಬಾರದು. ನೌಕರಿಯ ವಿಸ್ತರಣೆಗಳನ್ನು ಮಾಡ ಬೇಕೆಂದು ಸೂಚನೆ ಮಾಡಲ್ಪಟ್ಟ ಪ್ರಸಂಗಗಳಲ್ಲಿ ಗ್ರಾಮಪಂಚಾಯತಗಳು, ಮಂಜೂರಿಯ ಅಥವಾ ಹೊಸ ಮಂಜೂರಿಯ ಅವಶ್ಯಕತೆಯುಂಟಾಗುವ ಪೂರ್ವದಲ್ಲಿ ಕನಿಷ್ಠ ೨ ತಿಂಗಳು ಮೊದಲು ಜಿಲ್ಹೆಯ ಕಲೆಕ್ಟರನಿಗೆ ವರದಿ ಮಾಡಬೇಕು.

೨೩. ಪಂಚಾಯತಿಯ ಸೆಕ್ರೆಟರಿಯ ಸೇವೆಗಳನ್ನು (ಸೆಕ್ರೆಟರಿಯನ್ನು) ಅವನ ಮತ್ತು ಅದೇ ಅಥವಾ ಹೆಚ್ಚಿನ ವರ್ಗದ ೨ನೇ ಪಂಚಾಯತಿಯ ಸಮ್ಮತಿಯಿಂದ ಆ ಎರಡನೇ ಪಂಚಾಯತಿಗೆ ವರ್ಗಾಯಿಸಬಹುದು.

೨೪. ಕಾಲಕಾಲಕ್ಕೆ ಅಮಲಿನಲ್ಲಿಷ್ಟ ಯಾವುದೇ ಕಾನೂನಿನ ಠರಾವು ಗಳಿಗೆ ವಿರೋಧವಾಗದಂತೆ ಯೋಗ್ಯ ಮತ್ತು ಸಾಕಷ್ಟು ಕಾರಣಗಳಿಗಾಗಿ ಪಂಚಾಯತವು ಸೆಕ್ರೆಟರಿಗೆ ಈ ಕೆಳಗಿನ ಶಿಕ್ಷೆಗಳನ್ನು ವಿಧಿಸಬಹುದು:—

(೧) ದೂಷಣೆ (ವಾಗ್ದಂಡನೆ).

(೨) ಪಗಾರ ಹೆಚ್ಚಾಗುವದನ್ನು ತಡೆಹಿಡಿಯುವದು.

(೩) ೧೭ನೇ ನಿಯಮದನ್ವಯ ಗೊತ್ತುಮಾಡಿದ ವೇಳೆಯ ಪ್ರಮಾಣ ದಲ್ಲಿ, ಕೆಳದರ್ಜೆಗೆ ತರುವದು.

(೪) ತಾತ್ಸಾರದಿಂದ ಅಥವಾ ಆಜ್ಞೆಗಳ ಉಲ್ಲಂಘನೆಯಿಂದ ಪಂಚಾ ಯತಿಗೆ ಆದ ಎಲ್ಲ ಆರ್ಥಿಕ ಹಾನಿಯನ್ನು ಅಥವಾ ಅದರ ಭಾಗವನ್ನು ಅವನ ಪಗಾರದಿಂದ ವಸೂಲ ಮಾಡುವದು.

(೫) ದಂಡ.

(೬) ಸಸ್ಪೆಂಡ ಮಾಡುವದು.

(೭) ಮುಂದಿನ, ಪುನರ್ನೇಮಣೂಕಿಗೆ ಅನರ್ಹತೆಯನ್ನುಂಟು ಮಾಡದೆ ಕೆಲಸದಿಂದ ದೂರುಮಾಡುವದು ( Removal )

(೮) ಮುಂದಿನ, ಪುನರ್ನೇಮಣೂಕಿಗೆ ಸಾಧಾರಣವಾಗಿ ಅನರ್ಹತೆ ಯನ್ನುಂಟು ಮಾಡುವಂತೆ ಕೆಲಸದಿಂದ ತೆಗೆದು ಹಾಕುವದು (Dismissal)

ಆದರೆ ಗೊತ್ತುಪಡಿಸುವದೇನಂದರೆ, ಪಂಚಾಯತಿಯ ಒಟ್ಟು ಸಭಾಸದ ರಲ್ಲಿ ಕನಿಷ್ಟ ⅔ ಸಭಾಸದರ ಮತಗಳಿಲ್ಲದೆ ಮತ್ತು ಜಿಲ್ಲಾ ಕಲೆಕ್ಟರನ ಪೂರ್ವ ಸಮ್ಮತಿ ಇಲ್ಲದೆ ಸೆಕ್ರೆಟರಿಯನ್ನು ಕೆಲಸದಿಂದ ದೂರು ಮಾಡಬಾರದು ಅಥವಾ ತೆಗೆದು ಹಾಕಬಾರದು.

**ವಿವರಣೆ:—** ಪ್ರೊಬೆಶನದಮೇಲೆ ನೇಮಿಸಲ್ಪಟ್ಟ ಮನುಷ್ಯನನ್ನು ಪ್ರೊಬೆಶನದ ಅವಧಿಯಲ್ಲಿ ಅಥವಾ ಪ್ರೊಬೆಶನದ ಅವಧಿಯ ಕೊನೆಗೆ ಕೆಲಸ ದಿಂದ ಬಿಡುಗಡೆ ( Discharge ) ಮಾಡಿದರೆ, ಅದು ಈ ನಿಯಮದ ಅರ್ಥದಲ್ಲಿ ಕೆಲಸದಿಂದ ದೂರು ಮಾಡಲ್ಪಟ್ಟಿದೆ ಎಂದಾಗುವದಿಲ್ಲ.

೨೫. ಯಾವನೊಬ್ಬ ಸೆಕ್ರೆಟರಿಗೆ—

(1) (ಅ) ಅವನ ವಿರುದ್ಧ ಮಾಡಲಾದ ಆರೋಪ ಅಥವಾ ಆರೋಪಗಳ;

(ಬ) ಪ್ರತ್ಯೇಕ ಆರೋಪದಬಗ್ಗೆ ಇದ್ದ ಕಾರಣಗಳ;

(ಕ) ಆ ಪ್ರಕರ್ಣದಬಗ್ಗೆ ಆಜ್ಞೆಗಳನ್ನು ಮಾಡುವಾಗ್ಗೆ ಯಾವ ಪರಿಸ್ಥಿತಿಗಳನ್ನು ವಿಚಾರಮಾಡಬೇಕೆಂದು ಸೂಚಿಸಲ್ಪಟ್ಟಿದೆಯೋ ಅಂಥ ಎರಡನೇ ಪರಿಸ್ಥಿತಿಗಳ;

ಬಗ್ಗೆ ಲೇಖಿ ಸೂಚನೆಯನ್ನು ಕೊಡದವಿನಃ; ಮತ್ತು

(2) (ಅ) ಅವನ ವಿರುದ್ಧ ಇದ್ದ ಸಾಕ್ಷಿದಾರನನ್ನು ಉಲಟ ಸವಾಲಮಾಡಲು;

(ಬ) ವ್ಯಕ್ತಿಶಃ ಅವನ ಹೇಳಿಕೆಯನ್ನು ಕೇಳಲು

(ಕ) ಅವನಿಗೆ ಆಸ್ಪದ ಕೊಡದವಿನಃ ಅವನನ್ನು ಕೆಲಸದಿಂದ ದೂರು ಮಾಡಬಾರದು ಅಥವಾ ತೆಗೆದು ಹಾಕಬಾರದು.

ಆದರೆ ಗೊತ್ತುಪಡಿಸುವದೇನಂದರೆ, ಫೌಜದಾರಿ ಕೋರ್ಟಿನಲ್ಲಿ ಅವನ ಮೇಲಿನ ಆರೋಪವನ್ನು ಸಿದ್ಧಪಡಿಸಲು ಕಾರಣೀಭೂತವಾಗುವ ವಸ್ತುಸ್ಥಿತಿಗಳ ಮೇಲಿಂದ ಕ್ರಮತೆಗೆದುಕೊಳ್ಳುವದಿದ್ದಾಗ್ಗೆ, ಈ ನಿಯಮದ ಠರಾವುಗಳ ಅನ್ವಯಿಸುವದಿಲ್ಲ.

# ೧೯೩೪ನೇ ಇಸ್ವಿಯ ಗ್ರಾಮಪಂಚಾಯತಗಳ ಮುಂಗಡಪತ್ರ ಮತ್ತು ಲೆಕ್ಕಗಳ ಸಂಬಂಧದ ನಿಯಮಗಳು.

(ಜನರಲ್ ಡಿಪಾರ್ಟಮೆಂಟ ನಂಬರು ಎಸ್ ೧೭೪/೬ ತಾರೀಖು ೨ನೇ ಜನೆವರಿ ೧೯೩೫)

(ಜನರಲ್ ಡಿಪಾರ್ಟಮೆಂಟಿನ ನಂಬರುಗಳು, ಎಸ್ ೧೭೪/೬-ಅ ತಾರೀಖು ೨೮ನೇ ಜೂನ ೧೯೩೫, ಎಸ್ ೧೭೪/೬-ಬ ತಾರೀಖು ೨೮ನೇ ಜೂನ ೧೯೩೫, ಎಸ್ ೨೧೦೩/೩೩ ತಾರೀಖು ೧೪ನೇ ಎಪ್ರಿಲ್ ೧೯೩೮, ಎಸ್ ೧೭೪/೬ ತಾರೀಖು ೧೯ನೇ ಸಪ್ಟೆಂಬರ ೧೯೪೧ ಮತ್ತು ಎಸ್ ೧೭೪/೬ ತಾರೀಖು ೧ನೇ ಸಪ್ಟೆಂಬರ ೧೯೪೨ ಇವುಗಳಿಂದ ತಿದ್ದುಪಡೆಯಾದದ್ದು )

೧೯೩೩ನೇ ಇಸ್ವಿಯ ಮುಂಬಯಿ ಗ್ರಾಮಪಂಚಾಯತಗಳ ಕಾನೂನಿನ (೧೯೩೩ನೇ ಇಸ್ವಿಯ ಮುಂಬಯಿ ಕಾನೂನು ನಂಬರು ೬) ೧೦೮ನೇ ಕಲಮಿನ ೧ನೇ ಉಪಕಲಮಿನ (ಫ) ರಕಮಿನನ್ವಯ ದೊರೆತ ಅಧಿಕಾರವನ್ನು ಉಪಯೋಗಿಸಿ, ಮುಂಬಯಿ ಸರಕಾರದವರು ಈ ಕೆಳಗಿನ ನಿಯಮಗಳನ್ನು ಮಾಡಿರುತ್ತಾರೆ:—

೧. ಈ ನಿಯಮಗಳಿಗೆ ೧೯೩೪ನೇ ಇಸ್ವಿಯ ಗ್ರಾಮಪಂಚಾಯತಗಳ ಮುಂಗಡಪತ್ರ ಮತ್ತು ಲೆಕ್ಕಗಳ ಸಂಬಂಧದ ನಿಯಮಗಳೆಂದು ಕರೆಯಬೇಕು.

೨. ಈ ನಿಯಮಗಳಲ್ಲಿ ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವುದೇ ಬಾಧೆ ಬರದಿದ್ದರೆ—

(೧) "ಆಕ್ಟ" ಅಂದರೆ, ೧೯೩೩ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತಗಳ ಆಕ್ಟ.

(೨) "ಸರಕಾರಿ ವರ್ಷ" ಅಂದರೆ, ಎಪ್ರಿಲ ತಿಂಗಳ ಮೊದಲನೇ ತಾರೀಖಿನ ದಿವಸ ಪ್ರಾರಂಭವಾಗುವ ವರ್ಷ.

(೩) "ನಮೂನೆ" ಅಂದರೆ, ಈ ನಿಯಮಗಳಿಗೆ ಜೋಡಿಸಲ್ಪಟ್ಟ ನಮೂನೆ.

(೪) "ಕಲಮು" ಅಂದರೆ, ಸದರಿ ಆಕ್ಟಿನ ಕಲಮು.

(೫) "ಗ್ರಾಮದ ಚಾವಡಿ" ಎಂಬ ಸಂಜ್ಞೆಯಲ್ಲಿ ೧೮೭೯ನೇ ಇಸ್ವಿಯ ಮುಂಬಯಿ ಭೂಮಿಯ ಮಹಸೂಲಿನ ಕಾನೂನಿನನ್ವಯ ಚಾವಡಿಯೆಂದು ತಿಳಿಯಲ್ಪಟ್ಟ ಸ್ಥಳದ ಸಮಾವೇಶವಾಗುತ್ತದೆ.

(೬) ಈ ನಿಯಮಗಳಲ್ಲಿ ವ್ಯಾಖ್ಯಾಯಿಸಲ್ಪಡದ ಆದರೆ ಸದರ ಆಕ್ಟಿನಲ್ಲಿ ವ್ಯಾಖ್ಯಾಯಿಸಲ್ಪಟ್ಟ ಶಬ್ದಗಳಿಗೆ ಮತ್ತು ಸಂಜ್ಞೆಗಳಿಗೆ ಸದರೀ ಆಕ್ಟಿನಲ್ಲಿಯ ಅರ್ಥವೇ ಇರುವದು.

೩. ಪಂಚಾಯತವು, ೩೬ನೇ ಕಲಮಿನ ೧ನೇ ಉಪಕಲಮಿನನ್ವಯ, ಪ್ರತಿವರ್ಷ ಅಕ್ಟೋಬರ ೧೦ನೇ ತಾರೀಖಿನೊಳಗಾಗಿ ಅಥವಾ ಆ ದಿವಸ, ಮುಂಗಡಪತ್ರಿಕೆಯನ್ನು ಸಾದರ ಪಡಿಸಬೇಕು; ಮತ್ತು ಮುಂಗಡಪತ್ರಿಕೆಯು ನಮೂನೆ ೧ರಲ್ಲಿ ಇರಬೇಕು.

೩ ಅ. ಮುಂಗಡಪತ್ರಿಕೆಗಳಲ್ಲಿಯ ಫಂಡುಗಳ ಪುನರ್ವಿನಿಯೋಗದ ಪತ್ರಕವನ್ನು ನಮೂನೆ ೨೩ರಲ್ಲಿ ತಯಾರಿಸಬೇಕು ಮತ್ತು ಅದನ್ನು ಜಿಲ್ಹಾ ಲೋಕಲ್ ಬೋರ್ಡಿಗೆ ಸಾದರ ಪಡಿಸಬೇಕು.

೪. ಪಂಚಾಯತವು ೪ರಿಂದ ೨೩ರ ವರೆಗಿನ ನಮೂನೆಗಳಲ್ಲಿ ತನ್ನ ಲೆಕ್ಕವನ್ನಿಡಬೇಕು, ಮತ್ತು ಜಿಲ್ಹಾ ಲೋಕಲ್ ಬೋರ್ಡಿಗೆ ಪ್ರತಿವರ್ಷ ಜೂನ ತಿಂಗಳ ೧ನೇ ತಾರೀಖಿನೊಳಗೆ ಅಥವಾ ಆ ದಿವಸ ೨ನೇ ಮತ್ತು ೩ನೇ ನಮೂನೆಗಳಲ್ಲಿ ಆದಾಯ ಮತ್ತು ವೆಚ್ಚದ ಪತ್ರಕಗಳನ್ನು ಸಾದರ ಪಡಿಸಬೇಕು..

೫. ಜಿಲ್ಹಾ ಲೋಕಲ್ ಬೋರ್ಡಿನ ಅಭಿಪ್ರಾಯದಲ್ಲಿ, ಯಾವುದೇ ಪಂಚಾಯತದ ಸ್ಥಾನಿಕ ಪರಿಸ್ಥಿತಿಗಳ ದೃಷ್ಟಿಯಿಂದ, ೪ರಿಂದ ೨೩ರ ವರೆಗಿನ

ನಮೂನೆಗಳ ಪೈಕಿ ಯಾವುದೊಂದು ನಮೂನೆಯಲ್ಲಿ ಪಂಚಾಯತವು ಲೆಕ್ಕಗಳನ್ನು ಇಡಬೇಕೆಂದು ಕೇಳುವದು ಅವಶ್ಯವಿಲ್ಲದಿದ್ದರೆ, ಜಿಲ್ಹಾ ಲೋಕಲ್ ಬೋರ್ಡು, ಕಲೆಕ್ಟರನ ಪೂರ್ವ ಮಂಜೂರಿಯಿಂದ, ೪ನೇ ನಿಯಮದಲ್ಲಿ ಏನೇ ಇದ್ದರೂ ಅಂಥ ಪಂಚಾಯತನ್ನು ಸದರಿ ನಮೂನೆಗಳ ಪೈಕಿ ಯಾವದಾದರೂ ನಮೂನೆಯಲ್ಲಿ ಲೆಕ್ಕಗಳನ್ನು ಇಡುವದರಿಂದ ಮುಕ್ತ ಮಾಡಬಹುದು.

೬ (೧) ಸರಕಾರಿ ವರ್ಷವು ಮುಗಿದನಂತರ ಎರಡು ತಿಂಗಳೊಳಗೆ, ೩೬ನೇ ಕಲಮಿನ ೪ನೇ ಉಪಕಲಮಿನನ್ವಯ, ಗ್ರಾಮದ ಪ್ರೌಢ ರಹವಾಸಿಗಳ ಸಭೆಯನ್ನು ಗ್ರಾಮದ ಚಾವಡಿಯಲ್ಲಿ ಅಥವಾ ಆ ಗ್ರಾಮದಲ್ಲಿ ಚಾವಡಿಯು ಇಲ್ಲದಿದ್ದರೆ, ಸರಪಂಚನ ಅಭಿಪ್ರಾಯದಲ್ಲಿ, ಗ್ರಾಮದ ರಹವಾಸಿಗಳಿಗೆ ಸಗುಮವಿದ್ದ, ಗ್ರಾಮದಲ್ಲಿಯ ಇತರ ಯಾವುದೇ ಸ್ಥಳದಲ್ಲಿ, ಸರಪಂಚನಿಂದ ಗೊತ್ತುಮಾಡಲ್ಪಟ್ಟ ತಾರೀಖಿನ ದಿವಸ, ಕರೆಯಬೇಕು.

(೨) ಸಭೆಯ ತಾರೀಖಿನ ಪೂರ್ಣ ಮೂರು ದಿನಗಳ ಮೊದಲು ಸಭೆ ಸೇರುವ ವೇಳೆಯನ್ನು ಮತ್ತು ಸ್ಥಳವನ್ನು ಮತ್ತು ಅಲ್ಲಿ ನಡೆಯುವ ಕಾರ್ಯಕ್ರಮವನ್ನು ವಿವರವಾಗಿ ಹೇಳುವ ಲೇಖಿ ನೋಟೀಸು ಸಭೆಯ ಸ್ಥಳದಲ್ಲಿ ಹಚ್ಚಲ್ಪಡಬೇಕು ಮತ್ತು ಅದರಬಗ್ಗೆ ಗ್ರಾಮದಲ್ಲಿ ಡಂಗುರಸಾರಿ ತಿಳಿಸಬೇಕು.

(೩) ಸರಪಂಚನು ಮತ್ತು ಸರಪಂಚನು ಹಾಜರ ಇಲ್ಲದಿದ್ದಲ್ಲಿ ಉಪಸರಪಂಚನು ಸಭೆಯ ಅಧ್ಯಕ್ಷನಾಗುವನು. ಸರಪಂಚನು ಮತ್ತು ಉಪಸರಪಂಚನು ಇಬ್ಬರೂ ಗೈರಹಾಜರಿದ್ದಲ್ಲಿ, ಹಾಜರಿದ್ದ ಸಭಾಸದರು ತಮ್ಮ ಪೈಕಿ ಒಬ್ಬನನ್ನು ಸದರ ಸಭೆಯ ಅಧ್ಯಕ್ಷನನ್ನಾಗಿ ಆರಿಸಬೇಕು.

# ನಮೂನೆ ೧

ಸನ್  ವರ್ಷದ ಬಗ್ಗೆ  ಜಿಲ್ಲೆಯ  ತಾಲೂಕಿನ

ಗ್ರಾಮಪಂಚಾಯತದ ಮುಂಗಡಪತ್ರಿಕೆಯು

| ಆದಾಯ | ವೆಚ್ಚ |
|---|---|
| ಸನ್ ೧೯ ಇಸ್ವಿಯ ಎಪ್ರಿಲ ೧ನೇ ತಾರೀಖಿಗೆ ಪ್ರಾರಂಭದ ಶಿಲ್ಕು | ೧. ಸಾಮಾನ್ಯ ಆಡಳಿತೆ |
| ೧. ೧೯೧೧ನೇ ಇಸ್ವಿಯ ಮುಂಬೈ ಡಿಸ್ಟ್ರಿಕ್ಟ ಮುನಸಿಪಲ್ ಕಾನೂನಿನ ೧೯೧ನೇ ಕಲಮಿನನ್ವಯ ಪ್ರಾಂತಿಕ ಸರಕಾರದವರು ಗ್ರಾಮದ ಫಂಡಿಗೆ ನೇಮಿಸಿ ಕೊಟ್ಟ (ಹಂಚಿ ಕೊಟ್ಟ) ರಕಮು. | (i) ನೌಕರ ವರ್ಗದ ಪಗಾರ<br>(ಅ) ಸೆಕ್ರೆಟರಿ<br>(ಬ) ಇತರ ನೌಕರ ವರ್ಗ<br>(ii) ಪ್ರವಾಸದ ಭತ್ತೆ<br>(ಅ) ನೌಕರ ವರ್ಗದ ಭತ್ತೆ;<br>(ಬ) ಗ್ರಾಮಪಂಚಾಯತ ಸಭಾ<br>(iii) ಕಚೇರಿಯ ಸಾದಿಲವಾರಗಳು |
| ೨. ೮೯ನೇ ಕಲಮಿನನ್ವಯ ಹೇರಲ್ಪಟ್ಟ ಕರಗಳಿಂದ ಅಥವಾ ಫೀಗಳಿಂದ ಉತ್ಪನ್ನ–<br>(೧) ಮನೆಗಳ ಮತ್ತು ಭೂಮಿಗಳ ಒಡೆಯರ ಅಥವಾ ಭೋಗವಟೆ ಮಾಡುವವರ ಮೇಲಿನ ಕರ.<br>(೨) ಯಾತ್ರಿಕರ ಮೇಲಿನ ಕರ<br>(೩) ಜಾತ್ರೆಗಳ ಮತ್ತು ಉತ್ಸವಗಳ ಮೇಲಿನ ಕರ<br>(೪) ಸಾಮಾನುಗಳ ಮಾರಾಟದ ಮೇಲಿನ ಕರ<br>(೫) 'ಆಕ್ಕಾಯ' | ೨. ನೀರಿನ ಪೂರೈಕೆ<br>(ಅ) ಮೂಲ ಕೆಲಸಗಳು<br>(ಬ) (೧) ಕೆರಿಗಳ;<br>(೨) ಭಾವಿಗಳ ದುರಸ್ತಿಗಳು<br>(೩) ರಕ್ಷಣೆ (ಸುಸ್ಥಿತಿಯಲ್ಲಿಡುವದು) ಮತ್ತು ರಚನೆ<br>ನದಿಯ ಘಾಟಗಳು ಅಥವಾ ಕುಡಿಯುವ ನೀರಿನ ಸ್ಥಳಗಳು ಮತ್ತು ಗ್ರಾಮದ ಜಲಾಶಯಗಳಿಂದ ಜನರಿಗೆ ಆ ನೀರನ್ನು ಪೂರೈಸುವದು.<br>೩. ಬರಹೋಗುವ ಸಾಧನಗಳು |

## ಆದಾಯ

(೬) ಮದುವೆಗಳ, ದತ್ತಕಗಳ ಮತ್ತು ಮೇಜವಾನಿಗಳ ಮೇಲಿನ ಕರ

(೭) (ನಿರ್ದಿಷ್ಟ ಮಾಡಲ್ಪಡುವ) ಇತರ ಯಾವುದೇ ಕರ

೩. ೪೫, ೪೬ ಮತ್ತು ೪೮ನೇ ಕಲಮುಗಳನ್ವಯ ವಸೂಲಾದ ದಂಡಗಳು ಮತ್ತು ಪರಿಹಾರವೆಂದು ಕೊಡಬೇಕೆಂದು ಆಜ್ಞೆ ಮಾಡಲ್ಪಟ್ಟ ರಕಮುಗಳು

(ಅ) ಇಂಡಿಯನ್ ಪಿನಲ್ ಕೋಡಿನನ್ವಯ ಮತ್ತು ೧೮೭೧ನೇ ಇಸ್ವಿಯ ದನಗಳ ಅತಿಕ್ರಮಣದ ವಿಷಯದ ಕಾನೂನಿನನ್ವಯ ದಂಡಗಳು

(ಬ) ಉಪನಿಯಮಗಳ ಉಲ್ಲಂಘನೆಗಾಗಿ ದಂಡಗಳು

(ಕ) ಪರಿಹಾರಧನ

(ಡ) ಇತರ ಬಾಬುಗಳು

೪. ನೇಮಿಸಿ ಕೊಡಲ್ಪಟ್ಟ ರಕಮುಗಳು

೯೩ (೧) (ಇ) ಕಲಮಿನನ್ವಯ ಜಿಲ್ಹಾ ಲೋಕಲ್ ಬೋರ್ಡಿನಿಂದ

## ವೆಚ್ಚ

(ಅ) ಸಣ್ಣ ಮಾರ್ಗ, ಒಡ್ಡು ಅಥವಾ ಕಾಲುವೆಗಳನ್ನು ರಚಿಸುವದು

(ಬ) ಸಣ್ಣ ಮಾರ್ಗ, ಒಡ್ಡು ಅಥವಾ ಕಾಲುವೆಗಳನ್ನು ಸುಸ್ಥಿತಿಯಲ್ಲಿಡುವದು.

೪. ಸಾರ್ವಜನಿಕ ಉಪಯೋಗದ ಇತರ ಕೆಲಸಗಳು

೫. ಪಂಚಾಯತಿಯ ಸ್ವಾಧೀನದ ಕಟ್ಟಡಗಳನ್ನು ಸುಸ್ಥಿತಿಯಲ್ಲಿಡುವದು.

೬. ಆರೋಗ್ಯತೆ ಮತ್ತು ಸ್ವಚ್ಛತೆ

(ಅ) (೧) ನೌಕರ ವರ್ಗ

(೨) ಸಾದಿಲವಾರಗಳು

(ಬ) (೧) ಕಾಲುವೆಗಳು

(೨) ಗೊಬ್ಬರದ ಕುಣಿಗಳ, ರಚನೆ ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡುವದು.

೭. ದೀಪ ಹಚ್ಚುವದು

(ಅ) ನೌಕರ ವರ್ಗ

(ಬ) ಎಣ್ಣೆ

(ಕ) ಇತರ ಬೇಕಾದ ವಸ್ತುಗಳು

| ಆದಾಯ | ವೆಚ್ಚ |
|---|---|
| ೫. ವರ್ಗಣಿಗಳು<br>(ಅ) ಪ್ರಾಂತಿಕ ಸರಕಾರದವರಿಂದ<br>(ಬ) ಜಿಲ್ಹಾ ಲೋಕಲ್ ಬೋರ್ಡಿನಿಂದ<br>(ಕ) ಇತರ ವರ್ಗಣಿಗಳು<br>೬. ಜನ್ಮ ಕಲ್ಮಿನನ್ವಯ ಫೀಗಳು<br>೭. ಪಂಚಾಯತಿಯ ಸ್ವಾಧೀನದಲ್ಲಿದ್ದ ಭೂಮಿಗಳಿಂದ<br>೮. ಕೊಂಡವಾಡೆಗಳಿಂದ ಆದಾಯ<br>೯. (ಅ) ಧೂಳ, ಕಸ, ಸಗಣಿ ( ಗೊಬ್ಬರ ) ಕಸರು ಮತ್ತು ಇತರ ಪದಾರ್ಥ<br>(ಬ) ಉಪಯೋಗಕ್ಕೆ ಬಾರದಿದ್ದ ವಸ್ತು<br>೧೦. ಕಿರಕೋಳ ಆದಾಯ<br>೧೧. ಸಾಲಗಳು, ಠೇವುಗಳು ಮತ್ತು ಸಾಲಕೊಟ್ಟ ರಕಮುಗಳು<br>(ಅ) ಪ್ರಾಂತಿಕ ಸರಕಾರದವರಿಂದ ತಂದ ಸಾಲ<br>(ಬ) ಜಿಲ್ಹಾ ಲೋಕಲ್ ಬೋರ್ಡಿನಿಂದ ತಂದ ಸಾಲ | ೮. ಜಾತ್ರೆಗಳು, ಪೇಟೆಗಳು ಮತ್ತು ಚಕ್ಕಡಿ ನಿಲ್ದಾಣಗಳು<br>೯. ಕಟಕರಮನೆ (ವಧಾಲಯ)<br>(ಅ) ರಚನೆ<br>(ಬ) ದುರಸ್ತಿಗಳು<br>೧೦. ಹೆಣಗಳನ್ನು ಸುಡುವ ಮತ್ತು ಹುಗಿಯುವ ಸ್ಥಳಗಳು (ಸ್ಮಶಾನಗಳು)<br>(ಅ) ಕೊಂಡುಕೊಳ್ಳುವದು<br>(ಬ) ಸುಸ್ಥಿತಿಯಲ್ಲಿಡುವದು<br>೧೧. ಕೊಂಡವಾಡೆಗಳು ನೌಕರವರ್ಗ<br>(ಬ) ಸಾದಿಲವಾರಗಳು<br>(ಕ) ಕೊಂಡವಾಡೆ ಕಾಯುವವರಿಗೆ ಸಂಬಳ<br>೧೨. ಉಪಕರಣಗಳು ಮತ್ತು ಯಂತ್ರ ಸಾಮಗ್ರಿ (Tools and plant)<br>೧೩. ಸಾಲಗಳ ಮೇಲೆ ಬಡ್ಡಿ<br>೧೪. ಕಿರಕೋಳ<br>೧೫. ಸಾಲಗಳು, ಠೇವುಗಳು ಮತ್ತು ಸಾಲ ಕೊಟ್ಟ ರಕಮುಗಳು |

| ಆದಾಯ | ವೆಚ್ಚ |
|---|---|
| (ಕ) ಗ್ರಾಮದ ಶಾಲೆಯ ಸಲುವಾಗಿ ಮತ್ತು ೨೮ನೇ ಕಲಮಿನನ್ವಯ ಇತರ ಕರ್ತವ್ಯಗಳನ್ನು ಮಾಡುವದರ ಸಲುವಾಗಿ ಜಿಲ್ಹಾ ಲೋಕಲ್ ಬೋರ್ಡ ಸ್ಥಾನಿಕ ಅಧಿಕಾರಿ ಸಂಘ ಅಥವಾ ಸ್ಕೂಲಬೋರ್ಡು ಪಂಚಾಯತಿಯ ವಶಕ್ಕೆ ಕೊಟ್ಟ ಫಂಡುಗಳು | (ಅ) ಸಾಲಗಳನ್ನು ತಿರುಗಿ ಕೊಡುವದು |
| (ಡ) ಸಾಲಕೊಟ್ಟ ರಕಮುಗಳು | (ಬ) ಠೇವುಗಳನ್ನು ತಿರುಗಿ ಕೊಡುವದು |
| ಒಟ್ಟು ಆದಾಯ | (೧) ಜಿಲ್ಹಾ ಲೋಕಲ್ ಬೋರ್ಡಿನಿಂದ ವರ್ಗಾಯಿಸಲ್ಪಟ್ಟ ಕೆಲಸಗಳ ಮೇಲಿನ ವೆಚ್ಚ |
| (ಪ್ರಾರಂಭದ ಶಿಲ್ಕು ಸಹಿತ) | (೨) ಗ್ರಾಮದ ಶಾಲೆಯ ಬಗ್ಗೆ ವೆಚ್ಚ |
| ಅಂತೂ ಒಟ್ಟು ರಕಮು | (ಕ) ಸಾಲಕೊಟ್ಟ ರಕಮುಗಳು |
| | ಒಟ್ಟು ವೆಚ್ಚ |
| | ಕೊನೆಯ ಶಿಲ್ಕು |
| | ಅಂತೂ ಒಟ್ಟು ರಕಮು |

# ನಮೂನೆ ೨

ಸನ್ ನೇ ವರ್ಷದ ಗ್ರಾಮಪಂಚಾಯತಿಯ
ಆದಾಯದ ವಾರ್ಷಿಕ ಲೆಕ್ಕವು

೧. ಭಾಗ

೨. ಜಿಲ್ಲೆ

೩. ಪಂಚಾಯತಿಯ ಹೆಸರು

೪. ಪ್ರಾರಂಭದ ಶಿಲ್ಕು

೫. ೧೯೦೧ನೇ ಇಸ್ವಿಯ ಮುಂಬಯಿ ಡಿಸ್ಟ್ರಿಕ್ಟ ಮುನಸಿಪಲ್ ಕಾನೂನಿನ ೧೯೧ನೇ ಕಲಮಿನನ್ವಯ ಸರಕಾರದವರು ನೇಮಿಸಿಕೊಟ್ಟ ಹಣ.

೬. ೮೯ನೇ ಕಲಮಿನನ್ವಯ ಕರಗಳಿಂದ ಬರುವ ಆದಾಯ—

(೧) ಮನೆಗಳ ಮತ್ತು ಭೂಮಿಗಳ ಒಡೆಯರ ಅಥವಾ ಭೋಗವಟೆ ಮಾಡುವವರ ಮೇಲಿನ

(ಬ) ಯಾತ್ರಿಕರ ಮೇಲಿನ ಕರ

(ಕ) ಜಾತ್ರೆಗಳ ಮತ್ತು ಉತ್ಸವಗಳ ಮೇಲಿನ ಕರ

(ಡ) ಸಾಮಾನುಗಳ ಮಾರಾಟದ ಮೇಲಿನ ಕರ

(ಈ) ' ಆಕ್ಟ್ರಾಯ '

(ಫ) ಮದುವೆಗಳ, ದತ್ತಕಗಳ ಮತ್ತು ಮೇಜವಾನಿಗಳ ಮೇಲಿನ ಕರ

(ಗ) (ನಿರ್ದಿಷ್ಟ ಮಾಡಲ್ಪಡುವ) ಇತರ ಯಾವುದೇ ಕರ

೭. ದಂಡಗಳಿಂದ ಮತ್ತು ಪರಿಹಾರ ಧನದ ಬಗ್ಗೆ ಬಂದ ಆದಾಯ—

(ಅ) ದಂಡಗಳು—

(೧) ಇಂಡಿಯನ್ ಪಿನಲ್ ಕೋಡಿನನ್ವಯ ಮತ್ತು ೧೮೭೧ನೇ ಇಸ್ವಿಯ ದನಗಳ ಅತಿಕ್ರಮಣದ ವಿಷಯದ ಕಾನೂನಿನನ್ವಯ ದಂಡಗಳು ಮತ್ತು ೪೫ (೧) (ಅ) ಮತ್ತು (ಬ) ಮತ್ತು ೪೬ (ಅ) ಮತ್ತು (ಬ) ಕಲಮುಗಳನ್ವಯ ವಸೂಲಾದ ದಂಡಗಳು ಮತ್ತು ರಕಮುಗಳು

(೨) ಉಪನಿಯಮಗಳನ್ನು ಉಲ್ಲಂಘಿಸಿದ ಬಗ್ಗೆ ೪೫ (೧) (ಕ) ಕಲಮಿನನ್ವಯ ಹೇರಲ್ಪಟ್ಟ ದಂಡಗಳು

(ಬ) ೪೮ನೇ ಕಲಮಿನನ್ವಯ ಪರಿಹಾರ ಧನಗಳು
(ಕ) ಇತರ ಬಾಬುಗಳು

೮. ನೇಮಿಸಿಕೊಡಲ್ಪಟ್ಟ ರಕಮುಗಳು—
೯೩ (ಅ) (ಇ) ಕಲಮಿನನ್ವಯ ಜಿಲ್ಹಾ ಲೋಕಲ್ ಬೋರ್ಡಿನಿಂದ

೯. ವರ್ಗಣಿಗಳು
(ಅ) ಪ್ರಾಂತಿಕ ಸರಕಾರದವರಿಂದ
(ಬ) ಜಿಲ್ಹಾ ಲೋಕಲ್ ಬೋರ್ಡಿನಿಂದ
(ಕ) ಇತರ ವರ್ಗಣಿಗಳು

೧೦. ೫೯ನೇ ಕಲಮಿನನ್ವಯ ಫೀಗಳು

೧೧. ಪಂಚಾಯತಿಯ ಸ್ವಾಧೀನದಲ್ಲಿದ್ದ ಆಸ್ತಿಗಳಿಂದ ಆದಾಯ

೧೨. ಕೊಂಡವಾಡೆಯಿಂದ ಆದಾಯ

೧೩. ಮಾರಾಟದಿಂದ ಬರುವ ಹಣ
(ಅ) ಧೂಳು, ಸಗಣಿ (ಗೊಬ್ಬರ) ಹೊಲಸು ಅಥವಾ ಕಸ ಮತ್ತು ಇತರ ಪದಾರ್ಥಗಳಿಂದ
(ಬ) ಉಪಯೋಗಕ್ಕೆ ಬಾರದ ವಸ್ತುಗಳಿಂದ

೧೪. ಕಿರಕೋಳ ಆದಾಯ

೧೫. ಸಾಲಗಳು, ಠೇವುಗಳು ಮತ್ತು ಸಾಲಕೊಟ್ಟ ರಕಮುಗಳು
(ಅ) ಪ್ರಾಂತಿಕ ಸರಕಾರದವರಿಂದ ತಂದ ಸಾಲ
(ಬ) ಜಿಲ್ಹಾ ಲೋಕಲ ಬೋರ್ಡಿನಿಂದ ತಂದ ಸಾಲ
(ಕ) ಗ್ರಾಮದ ಶಾಲೆಯ ಬಗ್ಗೆ ಮತ್ತು ೨೮ನೇ ಕಲಮಿನನ್ವಯ ಮಾಡಬೇಕಾದ ಕೆಲಸಗಳಿಗಾಗಿ, ಜಿಲ್ಹಾ ಲೋಕಲ್ ಬೋರ್ಡಿನಿಂದ, ಸ್ಥಾನಿಕ ಅಧಿಕಾರಿ ಸಂಘ ಅಥವಾ ಸ್ಕೂಲಬೋರ್ಡಿನಿಂದ ಪಂಚಾಯತಿಯ ವಶಕ್ಕೆ ಕೊಡಲ್ಪಟ್ಟ ಫಂಡುಗಳು

೧೬. ಒಟ್ಟು ಆದಾಯ

೧೭. (ಪ್ರಾರಂಭದ ಶಿಲ್ಕು ಸಹಿತ) ಅಂತೂ ಒಟ್ಟು ರಕಮು

೧೮. ಜನಸಂಖ್ಯೆಯಲ್ಲಿ ಪ್ರತಿಯೊಬ್ಬನ ಆದಾಯ

# ನಮೂನೆ ೩

ವರ್ಷದ ಬಗ್ಗೆ ಗ್ರಾಮಪಂಚಾಯತಿಯ ವೆಚ್ಚದ
ವಾರ್ಷಿಕ ಲೆಕ್ಕವು

೧. ಭಾಗ
೨. ಜಿಲ್ಹಾ
೩. ಪಂಚಾಯತಿಯ ಹೆಸರು
೪. ಸಾಮಾನ್ಯ ಆಡಳಿತೆ
(೧) ನೌಕರ ವರ್ಗದ ಪಗಾರ
(ಅ) ಸೆಕ್ರೆಟರಿ
(ಬ) ಇತರ ನೌಕರವರ್ಗ
(೨) ಪ್ರವಾಸದ ಭತ್ತೆ
(ಅ) ನೌಕರ ವರ್ಗದ್ದು
(ಬ) ಪಂಚಾಯತದ ಸಭಾ ಸದರದ್ದು
(೩) ಕಚೇರಿಯ ಸಾದಿಲ ವಾರಗಳು
೫. ನೀರಿನ ಪೂರೈಕೆ
(ಅ) ಮೂಲ ಕೆಲಸಗಳು
(ಬ) (೧) ಕೆರಿಗಳ
(೨) ಭಾವಿಗಳ ದುರಸ್ತಿ
೬. ಬರಹೋಗುವ ಸಾಧನಗಳು
(ಅ) ಸಣ್ಣ ಮಾರ್ಗಗಳ, ಒಡ್ಡುಗಳ ಅಥವಾ ಕಾಲುವೆಗಳ ರಚನೆ
(ಬ) ಸಣ್ಣ ಮಾರ್ಗಗಳನ್ನು ಒಡ್ಡುಗಳನ್ನು ಅಥವಾ ಕಾಲುವೆಗಳನ್ನು ಸುಸ್ಥಿತಿಯಲ್ಲಿಡುವದು.
೭. ಸಾರ್ವಜನಿಕ ಉಪಯೋಗದ ಇತರ ಕೆಲಸಗಳು
೮. ಪಂಚಾಯತಿಯ ವಶದಲ್ಲಿದ್ದ ಸಾರ್ವಜನಿಕ ಕಟ್ಟಡಗಳನ್ನು ಸುಸ್ಥಿತಿಯಲ್ಲಿಡುವದು.
೯. ಆರೋಗ್ಯತೆ ಮತ್ತು ಸ್ವಚ್ಛತೆ
(ಅ) (೧) ನೌಕರವರ್ಗ
(೨) ಸಾದಿಲವಾರಗಳು
(ಬ) (೧) ಕಾಲುವೆಗಳನ್ನು
(೨) ಗೊಬ್ಬರ ಕುಣಿಗಳನ್ನು; ರಚಿಸುವದು ಮತ್ತು ಸುಸ್ಥಿತಿಯಲ್ಲಿಡುವದು
೧೦. ದೀಪ ಹಚ್ಚುವದು
(ಅ) ನೌಕರವರ್ಗ
(ಬ) ಎಣ್ಣೆ
(ಕ) ಇತರ ಬೇಕಾದ ವಸ್ತುಗಳು
೧೧. ಜಾತ್ರೆಗಳು, ಪೇಟೆಗಳು ಮತ್ತು ಚಕ್ಕಡಿಯ ನಿಲ್ದಾಣಗಳು
೧೨. ಕಟುಕರ ಮನೆಗಳು

(ಅ) ರಚನೆ

(ಬ) ದುರಸ್ತಿ

೧೩. ಹೆಣಗಳನ್ನು ಸುಡುವ ಮತ್ತು ಹುಗಿಯುವ ಸ್ಥಳಗಳು (ಸ್ಮಶಾನಗಳು)

(ಅ) ಕೊಂಡುಕೊಳ್ಳುವದು

(ಬ) ಸುಸ್ಥಿತಿಯಲ್ಲಿಡುವದು

೧೪. ಕೊಂಡವಾಡೆಗಳು

ನೌಕರವರ್ಗ

(ಬ) ಸಾದಿಲವಾರಗಳು

(ಕ) ಕೊಂಡವಾಡೆ ಕಾಯುವವರಿಗೆ ಸಂಬಳ

೧೫. ಉಪಕರಣಗಳು ಮತ್ತು ಯಂತ್ರಸಾಮಗ್ರಿ

೧೬. ಸಾಲಗಳ ಮೇಲೆ ಬಡ್ಡಿ

೧೭. ಕಿರುಕಳ

೧೮. ಸಾಲ, ಠೇವುಗಳು ಮತ್ತು ಸಾಲ ಕೊಟ್ಟ ರಕಮುಗಳು

(ಅ) ಸಾಲಗಳನ್ನು ತಿರುಗಿ ಕೊಡುವದು

(ಬ) ಠೇವುಗಳನ್ನು ತಿರುಗಿ ಕೊಡುವದು

(೧) ಜಿಲ್ಹಾ ಲೋಕಲ್ ಬೋರ್ಡಿನಿಂದ ವರ್ಗಾಯಿಸಲ್ಪಟ್ಟ ಕೆಲಸಗಳ ಬಗ್ಗೆ ವೆಚ್ಚ

(೨) ಗ್ರಾಮದ ಶಾಲೆಯ ಬಗ್ಗೆ ವೆಚ್ಚ

(ಕ) ಸಾಲ ಕೊಟ್ಟ ರಕಮುಗಳು

೧೯. ಒಟ್ಟು ವೆಚ್ಚ

೨೦. ಕೊನೆಯ ಶಿಲ್ಕು

೨೧. ಅಂತೂ ಒಟ್ಟು ರಕಮು

೨೨. ಜನಸಂಖ್ಯೆಯಲ್ಲಿ ಪ್ರತಿಯೊಬ್ಬನಿಗೆ ವೆಚ್ಚ

# ನಮೂನೆ ೪

ಸನ್ ೧೯೫       ನೇ ವರ್ಷದ ಬಗ್ಗೆ ಸಾಮಾನ್ಯ ಕ್ಯಾಶ-ಬುಕ್ಕು.

________________ ದ ಗ್ರಾಮ ಪಂಚಾಯತವು.

ಜಮಾ.                                                                                    ಖರ್ಚು.

| ಉತ್ಪನ್ನದ ತಿಂಗಳು ಮತ್ತು ತಾರೀಖು | ಅನುಕ್ರಮ ನಂಬರು | ಉತ್ಪನ್ನದ ವಿವರಗಳು | | ಲೆಖ್ಖದ ಸದರು | ರಕಮು | ಪ್ರಾರಂಭದ ಶಿಲ್ಕು ಸಹಿತ ಪ್ರತಿ ದಿವಸದ ಒಟ್ಟು | ರಕಮು ಕೊಟ್ಟ ತಾರೀಖು | ಚೆಕ್ಕಿನ ನಂಬರು | ವ್ಹೌಚರ ನಂಬರು | ಕೊಟ್ಟ ರಕಮಿನ ವಿವರಗಳು | | ಲೆಖ್ಖದ ಸದರು | ರಕಮು | ಕೊನೆಯ ಶಿಲ್ಕು ಸಹಿತ ಪ್ರತಿ ದಿವಸದ ಒಟ್ಟು |
|---|---|---|---|---|---|---|---|---|---|---|---|---|---|---|
| | | ಯಾರಿಂದ ಬಂದದ್ದು | ಯಾತರ ಬಗ್ಗೆ | | | | | | | ಯಾರಿಗೆ ಕೊಟ್ಟದ್ದು | ಯಾತರ ಬಗ್ಗೆ | | | |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ |
| | | | | | | | | | | | | | | |

ಟೀಪು:— ಪ್ರತಿ ದಿವಸ ಕೊನೆಗೆ ಸರಪಂಚನು ಕ್ಯಾಶಬುಕ್ಕಿಗೆ ಸಹಿ ಮಾಡಬೇಕು.

# ನಮೂನೆ ೬.

## ಸಾಮಾನ್ಯ ಪಾವತಿ.

______________________ದ ಗ್ರಾಮದ ಪಂಚಾಯತವು.

ಬುಕ್ಕಿನ ನಂಬರು____________ಪಾವತಿ ನಂಬರು____________

______________________ನಿಂದ____________ಕಾರಣದ

ಸಲುವಾಗಿ (                    )____________

ರೂಪಾಯಿಗಳ ರಕಮು ಬಂತು.

**ಸೆಕ್ರೆಟರಿ.**

ಟೀಪು:— ಈ ಪಾವತಿಯು ಕಾರ್ಬನಿನ ದ್ವಿಪ್ರತಿಯಲ್ಲಿರತಕ್ಕದ್ದು.

ಟೀಪು:—ನಮೂನೆಗಳು ಸಾದರ ಮಾಡಲ್ಪಟ್ಟಾಗ ಬುಕ್ಕಿನ ನಂಬರುಗಳು ಮತ್ತು ಪಾವತಿ ನಂಬರುಗಳು ಛಾಪಿಸಲ್ಪಡಬೇಕು. ಅಥವಾ ಮುದ್ರಿಸಲ್ಪಡಬೇಕು.

# ನಮೂನೆ

ಸನ್ ೧೯೫ ರಿಂದ ೧೯೫ ನೇ ವರ್ಷದ ಬಗ್ಗೆ ಕರಕ್ಕೆ ಪಾತ್ರವಿರುವ

_______________________ ದ

| ೧ ಅನುಕ್ರಮ ನಂಬರು | ೨ ಓಣಿಯ ಹೆಸರು | ೩ ಆಸ್ತಿಯ ನಂಬರು | ೪ ಆಸ್ತಿಯ ವರ್ಣನೆ | ೫ ಮಾಲಿಕನ ಹೆಸರು | ೬ ಭೋಗವಟೆ ಮಾಡುವವನ ಹೆಸರು | ೭ ವಾರ್ಷಿಕ ಬಾಡಿಗೆಯ ಬೆಲೆ ಅಥವಾ ಇತರ ಬೆಲೆ |
|---|---|---|---|---|---|---|
| | | | | | | |

ಇಮಾರತುಗಳ ಮತ್ತು ಭೂಮಿಗಳ ಆಕರಣೆಯ ಯಾದಿಯು.

ಗ್ರಾಮದ ಪಂಚಾಯತವು.

| ಆಕ್ಕರಣಿ ಮಾಡಿದ ಕರಗಳ ರಕಮು | | | | ವಾರ್ಷಿಕ ಬಾಡಿಗೆಯ ಬೆಲೆ ಅಥವಾ ಇತರ ಬೆಲೆ | ಆಪೀಲುಗಳ ಪರಿಣಾಮವು ಮತ್ತು ನಂತರದ ಬದಲಾವಣೆಗಳು | | | | ನಂತರದ ಹೆಚ್ಚಳ ಮತ್ತು ಕೊರತೆಯ ಬಾಬತಿನಲ್ಲಿ ಶರಾಗಳು (ಹುಕುಮುಗಳ ಉಲ್ಲೇಖಗಳ ಸಹಿತ) ಟೀಪು:— ಶರಾಗಳಿಗೆ ಮತ್ತು ತಿದ್ದುಪಡಿಗಳಿಗೆ ಸರಪಂಚನು ಸಾಕ್ಷಿ ಹಾಕಬೇಕು |
|---|---|---|---|---|---|---|---|---|---|
| ಕರ | ಕರ | ಕರ | ಒಟ್ಟು | | ಕರ | ಕರ | ಕರ | ಒಟ್ಟು | |
| ೮ | ೯ | ೧೦ | ೧೧ | ೧೨ | ೧೩ | ೧೪ | ೧೫ | ೧೬ | ೧೭ |
| | | | | | | | | | |

# ನಮೂನೆ

ಸನ್ ೧೯೫    ರಿಂದ ೧೯೫    ನೇ ವರ್ಷದ ಬಗ್ಗೆ

_ ದ

ವಾರ್ಡು
ಸರ್ಕಲು

| ಆಸ್ತಿಯ ನಂಬರು | ಚಿಂದಿಗೆಯ ಹೆಸರು | ಯಾರಿಂದ ಕರವು ಬರತಕ್ಕದ್ದೋ ಆ ಜನರ ಹೆಸರು | ತಗಾದೆ | | | | | | | | | ಪಾವತಿಯ ನಂಬರು ಮತ್ತು ತಾರೀಖು | ವಸೂಲಿ | | |
|---|---|---|---|---|---|---|---|---|---|---|---|---|---|---|---|
| | | | ಕರ | | | ಕರ | | | ಕರ | | | | ಕರ | | |
| | | | ಹಿಂದಿನ ಬಾಕಿಗಳು | ಚಾಲೂ | ಒಟ್ಟು | ಹಿಂದಿನ ಬಾಕಿಗಳು | ಚಾಲೂ | ಒಟ್ಟು | ಹಿಂದಿನ ಬಾಕಿಗಳು | ಚಾಲೂ | ಒಟ್ಟು | | ಹಿಂದಿನ ಬಾಕಿಗಳು | ಚಾಲೂ | ಒಟ್ಟು |
| | | | | | | | | | | | | | | | |

೮

ಆಕರಣಿ ಮಾಡಿದ ಕರಗಳ ತಗಾದೆಯ ರಜಿಸ್ಟರು

ಗ್ರಾಮದ ಪಂಚಾಯತವು

| ಗಳು | | | | | | ಮಾಫಿಗಳು | | | | ಶಿಲುಕು | | | | ಮಾಫಿಗಳನ್ನು ಮಂಜೂರ ಮಾಡಿದ ಠರಾಗಳು (ಹುಕುಮುಗಳ ಉಲ್ಲೇಖಗಳ ಸಹಿತ) ಟೀಪು: ಠರಾಗಳಿಗೆ ಮತ್ತು ತಿದ್ದು ಪಡಿಗಳಿಗೆ ಸರಪಂಚನು ಸಾಕ್ಷಿ ಹಾಕಬೇಕು |
|---|---|---|---|---|---|---|---|---|---|---|---|---|---|---|
| ಕರ | | | ಕರ | | | | | | | | | | | |
| ಹಿಂದಿನ ಬಾಕಿಗಳು | ಚಾಲೂ | ಒಟ್ಟು | ಹಿಂದಿನ ಬಾಕಿಗಳು | ಚಾಲೂ | ಒಟ್ಟು | ಕರ | ಕರ | ಕರ | ಒಟ್ಟು | ಕರ | ಕರ | ಕರ | ಒಟ್ಟು | |
| | | | | | | | | | | | | | | |

# ನಮೂನೆ ೬

## ಕರಗಳ ಬಗ್ಗೆ ಪಾವತಿ

_ದ ಗ್ರಾಮದ ಪಂಚಾಯತವು

ಬುಕ್ಕಿನ ನಂಬರು_ ಪಾವತಿ ನಂಬರು ___

___ ಮನೆಯ ನಂಬರಿನ ಬಗ್ಗೆ ಸನ್ ೧೯೫ ರಿಂದ ಸನ್ ೧೯೫ ವರ್ಷದ ಸಲುವಾಗಿ ಈ ಕೆಳಗಿನ ಕರಗಳ ಸಲುವಾಗಿ ___ ರಿಂದ ಬಂತು. ಬಿಲ್ಲು ನಂಬರು.

| ಕರಗಳ ಹೆಸರುಗಳು | ವಸೂಲಾದ ರಕಮುಗಳು | | |
|---|---|---|---|
| | ಹಿಂದಿನ ಬಾಕಿಗಳು | ಚಾಲೂ | ಒಟ್ಟು |
| | ರೂ. ಆ. ಪೈ | ರೂ. ಆ. ಪೈ | ರೂ. ಆ. ಪೈ |
| ಮನೆಯ ಕರ .... | | | |
| ___ ಕರ .... | | | |
| ___ ಕರ .... | | | |
| ನೋಟೀಸಿನ ಫೀ .... | | | |
| ವಾರಂಟಿನ ಫೀ .... | | | |
| | | | |

ತಾರೀಖು ಸನ್ ೧೯೫ ನೇ ಇಸವಿ

ವಸೂಲ ಮಾಡುವ ಕಾರಕೂನನ ಸಹಿಯು ಆದ್ಯಕ್ಷರಗಳು.

ಟೀಪು:—ಪಾವತಿಯ ನಮೂನೆಯು ಕಾರ್ಬನಿನ ದ್ವಿಪ್ರತಿಯಲ್ಲಿರಬೇಕು.

ಟೀಪು:—ನಮೂನೆಗಳು ಸಾದರ ಮಾಡಲ್ಪಟ್ಟಾಗ ಬುಕ್ಕಿನ ನಂಬರುಗಳು ಛಾಪಿಸಲ್ಪಡಬೇಕು.

# ನಮೂನೆ ೧೦

ಸನ್ ೧೯೫ ರಿಂದ ಸನ್ ೧೯೫ ವರ್ಷದ ಬಗ್ಗೆ ಕಿರಕೋಳ ಬೇಡಿ ಗಳ ರಜಿಸ್ಟರು

ದ : ಗ್ರಾಮದ ಪಂಚಾಯತಿ

| ಅನುಕ್ರಮ ನಂಬರು | ಬೇಡಿದ ಹಣವನ್ನು ಕೊಡಬೇಕಾದ ಮನುಷ್ಯನ ಹೆಸರು ಮತ್ತು ಪತ್ತೆ | ಬೇಡಿದ ಹಣದ ಸ್ವರೂಪ | ಹಣವನ್ನು ಬೇಡುವ ಅಧಿಕಾರ | ತಗಾದೆ | | | ಬಿಲ್ಲಿನ ನಂಬರು ಮತ್ತು ತಾರೀಖು | ವಸೂಲಿಗಳು | | ಮಾಫಿ | | ಶಿಲುಕು | ಶರಾಗಳು ಟೀಪು:—ಶರಾಗಳಿಗೆ ಮತ್ತು ತಿದ್ದುಪಡಿಗಳಿಗೆ ಸರಪಂಚನು ಸಾಕ್ಷಿ ಹಾಕಬೇಕು |
|---|---|---|---|---|---|---|---|---|---|---|---|---|---|
| | | | | ಕಂತು | ರಕಮು | ಒಟ್ಟು | | ಪಾವತಿಯ ನಂಬರು ಮತ್ತು ತಾರೀಖು | ರಕಮು | ಹುಕುಮಿನ ನಂಬರು ಮತ್ತು ತಾರೀಖು | ರಕಮು | | |
| | | | | | | | | | | | | | |

# ನಮೂನೆ ೧೧

## ಆಕ್ಟ್ರಾಯಿ ಉತ್ಪನ್ನ

_______________ದ ಗ್ರಾಮದ ಪಂಚಾಯತವು

ಬುಕ್ಕಿನ ನಂಬರು

ನಾಕೆ

ಪಾವತಿ ನಂಬರು

ಆಮದು ಮಾಡುವವನ / ಮಾಲಿಕನ ಹೆಸರು

| ಸಾಮಾನುಗಳ ವರ್ಣನೆ | ವಾಹನದ ಅಥವಾ ಒಜ್ಜೆಯ ಜಾತಿ | ತೂಕ ನಂಬರು ಅಥವಾ ಬೆಲೆ | ಆಕ್ಟ್ರಾಯಿಯ ದರವು | | ಕೊಟ್ಟ ಆಕ್ಟ್ರಾಯ ರಕಮು |
|---|---|---|---|---|---|
| | | | ರಕಮು | ಪ್ರತಿ | |
| | | | | | |
| ಒಟ್ಟು .... | | | | | |

ಆಮದು ಮಾಡಿದ ವೇಳೆ ನಾಕೆಯ ಕಾರಕೂನನ ಸಹಿಯ ಆದ್ಯಕ್ಷರಗಳು

ತಾರೀಖು ಸನ್ ೧೯೫ ನೇ ಇಸವಿ

ಟೋಲು ಪಾವತಿ ನಂಬರು

ವ್ಹೀಲ್ ಟ್ಯಾಕ್ಸ್ ರಜಿಸ್ಟರು

ಪ್ಲೇಟ ನಂಬರು

ಟೀಪು:—ಈ ಪಾವತಿಯು ಕಾರ್ಬನಿನ ದ್ವಿಪ್ರತಿಯಲ್ಲಿರಬೇಕು

ಟೀಪು—ನಮೂನೆಗಳು ಸಾದರ ಮಾಡಲ್ಪಟ್ಟಾಗ ಬುಕ್ಕನ ನಂಬರು ಮತ್ತು ಪಾವತಿಯ ನಂಬರು ಛಾಪಿಸಲ್ಪಡಬೇಕು.

# ನಮೂನೆ ೧೨

ಸನ್ ೧೯೫ ರಿಂದ ಸನ್ ೧೯೫ ನೇ ವರ್ಷದ ಬಗ್ಗೆ ಆಕ್ಟ್ರಾಯಿಯ

## ವಸೂಲಿ ರಜಿಸ್ಟರು

____________________ದ ಗ್ರಾಮದ ಪಂಚಾಯತವು

ನಾಕೆ

| ತಾರೀಖು | ಪಾವತಿ ನಂಬರು ಮತ್ತು ಬುಕ್ಕಿನ ನಂಬರು | ಮಾಲಿಕನ ಅಥವಾ ಆಮದು ಮಾಡುವವನ ಹೆಸರು | ಸಾಮಾನುಗಳ ವರ್ಣನೆ | ವಾಹನದ ಜಾತಿ | ತೂಕ, ನಂಬರು ಅಥವಾ ಬೆಲೆ | ದರ | | ಆಕ್ಟ್ರಾಯಿಯ ರಕಮು | ಶರಾ |
|---|---|---|---|---|---|---|---|---|---|
| | | | | | | ರಕಮು | ಪ್ರತಿ | | |
| | | | | | | ಒಟ್ಟು .... | | | |

ಚಲನಿನ ನಂಬರದಂತೆ ಗೆ ರವಾನೆ

ನಾಕೆಯ ಕಾರಕೂನನ ಸಹಿ.

# ನಮೂನೆ ೧೩

## ಆಕ್ರಾಯಿ

ವಸೂಲಿಗಳ ಒಟ್ಟುಗೂಡಿಸಿದ ಕೀರ್ದಿ

__________ದ ಗ್ರಾಮದ ಪಂಚಾಯತವು

| ತಾರೀಖು | ನಾಕೆಗಳ ಹೆಸರುಗಳು | | | | ಒಟ್ಟು | ಯಾವತ್ತು ಜಮೆ ಮಾಡಿದರೋ ಆ ಅಂಥಾ ತಾ–ಮತ್ತು ರಸೀದಿ ನಂಬರ | ಸೆಕ್ರೆಟರಿಯ ಸಹಿ |
|---|---|---|---|---|---|---|---|
| | ಅ | ಬ | ಕ | ಡ | | | |
| | ರೂ. ಆ. ಪೈ | ರೂ. ಆ. ಪೈ | ರೂ. ಆ. ಪೈ | ರೂ. ಆ. ಪೈ | | | |
| | | | | | | | |

ಸೆಕ್ರೆಟರಿ. ಸರಪಂಚ.

# ನಮೂನೆ ೧೪

ದ ಗ್ರಾಮದ ಪಂಚಾಯತವು

ನಂಬರು

| ಸಾಮಾನುಗಳ ಹೆಸರು | ಪರಿಮಾಣ ಅಥವಾ ತೂಕ | ದರ | ಯುನಿಟು | ರಕಮು |
|---|---|---|---|---|
| | | | | ರೂ. ಆ. ಪೈ |

| | | |
|---|---|---|
| ೧. ಅಲಾಟಮೆಂಟಿನ ರಕಮು .... | | ಈ ಬಿಲ್ಲಿನಲ್ಲಿ ತೋರಿಸಿದ ದರಗಳು ಮತ್ತು ಅಳತೆಗಳು ಸರಿಯಾಗಿರುತ್ತವೆ ಮತ್ತು ಸಾಮಾನುಗಳು ನನ್ನ ತಾಬೆಗೆ ಬಂದಿರುತ್ತವೆ ಎಂದು ದಾಖಲೆ ಕೊಟ್ಟಿತು. |
| ೨. ಹಿಂದಿನ ಖರ್ಚು .... | | |
| ೩. ಈ ಬಿಲ್ಲಿನಲ್ಲಿ ತೋರಿಸಿದ ಖರ್ಚು .... | | |
| ೨ ಮತ್ತು ೩ರ ಬೇರೀಜು.... | | |
| ಉಳಿದ ಶಿಲುಕು .... | | |

ತಾರೀಖು ಸಾಮಾನುಗಳನ್ನು ಪಡೆಯುವ ಮನುಷ್ಯನ ಸಹಿ.

ಮಂಜೂರಿಯ ಬಗ್ಗೆ ಪಂಚಾಯತಕ್ಕೆ ಸಾದರ ಮಾಡಲಾಯಿತು. ನಾನು ದಾವೆಯನ್ನು ಪರೀಕ್ಷಿಸಿ ನೋಡಿರುತ್ತೇನೆ. ಮತ್ತು ಅದು ಎಲ್ಲಾ ವಿಷಯಗಳಲ್ಲಿ ಸರಿಯಾಗಿದೆಂದು ಕಂಡುಬಂತು.

ಸೆಕ್ರೆಟರಿ.

ಠರಾವು ನಂಬರು , ತಾರೀಖು

ಬಿಲ್ಲಿನಲ್ಲಿ ತೋರಿಸಿದ __________ ರೂಪಾಯಿಗಳ ರಕಮು ಮಂಜೂರು ಮಾಡಲ್ಪಟ್ಟಿದೆ.

ತಾರೀಖು ಸರಪಂಚ.

ದಾವೆಯ ಪೂರ್ಣ ನಿಕಾಲೆಯಾಗಿ ( ) (ಅಕ್ಷರಗಳಲ್ಲಿ) ರೂಪಾಯಿಗಳ ರಕಮು ಬಂತು.

ನನ್ನ ಸಮಕ್ಷಮ ಕೊಡಲ್ಪಟ್ಟಿತು.
ಹಣ ಪಡೆದವನ ಸಹಿ. ಸ್ಟಾಂಪು

ವ್ಹಾಚರ ನಂಬರು
ಡೇ–ಬುಕ್ಕಿನೊಳಗಿನ ಪುಟದಲ್ಲಿ ದಾಖಲು ಮಾಡಲ್ಪಟ್ಟಿತು.

ಸೆಕ್ರೆಟರಿ.

# ನಮೂನೆ ೧೫

## ಸ್ಕೇಲ ರಜಿಸ್ಟರು

______________ದ ಗ್ರಾಮದ ಪಂಚಾಯತವು

| ನೇಮಣೂಕಿನ ಹೆಸರು | ಸನ್ ೧೯೫ ರಿಂದ ಮಂಜೂರಿ ಮಾಡಿದ ಸೇಲು | | | ಸನ್ ೧೯೫ ರಿಂದ ಮಂಜೂರಿ ಮಾಡಿದ ಸ್ಕೇಲು | | | ಸನ್ ೧೯೫ ರಿಂದ ಮಂಜೂರಿ ವಾಡಿದ ಸ್ಕೇಲು | | | ಶರಾ |
|---|---|---|---|---|---|---|---|---|---|---|
| | ಹುದ್ದೆ | ಪ್ರತಿ ನೇಮಣೂಕಿನ÷ ತಿಂಗಳ ಪಗಾರ | ಅಧಿಕಾರ ಮತ್ತು ಸರಪಂಚನ ಸಹಿ | ಹುದ್ದೆ | ಪ್ರತಿ ನೇಮಣೂಕಿನ÷ ತಿಂಗಳ ಪಗಾರ | ಅಧಿಕಾರ ಮತ್ತು ಸರಪಂಚನ ಸಹಿ | ಹುದ್ದೆ | ಪ್ರತಿ ನೇಮಣೂಕಿನ÷ ತಿಂಗಳ ಪಗಾರ | ಅಧಿಕಾರ ಮತ್ತು ಸದಪಂಚನ ಸಹಿ | |
| (೧) ಸಾಮಾನ್ಯ ಆಡಳತೆ | | | | | | | | | | |

ಒಟ್ಟು ಸಾಮಾನ್ಯ ಆಡಳತೆ

÷ ಯಾವದೇ ನೇಮಣೂಕಿನ ಪಗಾರ ಪ್ರಗತಿಪರವಾಗಿದ್ದರೆ, ಕನಿಷ್ಟ ಮತ್ತು ಪರಾಕಾಷ್ಟ ಪಗಾರವನ್ನು ಮತ್ತು ಬಡತಿಯ ಮುದ್ದತನ್ನು ಮತ್ತು ದರವನ್ನು ಈ ಆಸನದಲ್ಲಿ ಪ್ರತಿ ಸಂಗತಿಯಲ್ಲಿ ಬರೆಯಬೇಕು.

# ನಮೂನೆ ೧೭

ಸನ್ ೧೯೫   ರಿಂದ ೧೯೫   ನೇ ವರ್ಷದ ಬಗ್ಗೆ ಸ್ಟಾಂಪ ಲೆಖ್ಖ

_ದ ಗ್ರಾಮದ ಪಂಚಾಯತವು

| ತಾರೀಖು | ಆವಕ | | ಜಾವಕ | | ದೈನಿಕ ಶಿಲಕು | ಸೆಕ್ರೆಟರಿಯ ಸಹಿಯ ಆದ್ಯಕ್ಷರಗಳು | ಶೆರಾ |
|---|---|---|---|---|---|---|---|
| | ವ್ಹಾಚರ ನಂಬರು | ಬಂದ ಸ್ಟಾಂಪಿನ ಬೆಲೆ | ಪತ್ರಗಳ ನಂಬರುಗಳು | ಹಚ್ಚಿದ ಸ್ಟಾಂಪುಗಳ ಬೆಲೆ | | | |
| | | | | | | | |

ಟೀಪು:—ಸರಪಂಚನು ಅಥವಾ ಇತರ ಜವಾಬದಾರ ಅಮಲದಾರನು ಕೈಯ್ಯಲ್ಲಿದ್ದ ಸ್ಟಾಂಪುಗಳ ಶಿಲಕನ್ನು, ಕನಿಷ್ಟ ತಿಂಗಳಿಗೊಮ್ಮೆ ಸರಿನೋಡಬೇಕು ಮತ್ತು ಆ ಬಗ್ಗೆ ದಾಖಲೆ ಕೊಡಬೇಕು.

# ನಮೂನೆ ೧೭

ಪಾವತಿ ಪುಸ್ತಕಗಳ / ಸಾಮಾನುಗಳ ಸ್ಟಾಕ್ ಲೆಖ್ಖ

_______________ ದ ಗ್ರಾಮದ ಪಂಚಾಯತವು

| ತಾರೀಖು | ಬಂದದ್ದು | ಬಂದ ಸಂಖ್ಯೆ ಅಥವಾ ಕಿಂಮತ್ತು | ಒಟ್ಟು | ಯಾರಿಗೆ ಕೊಟ್ಟದ್ದು ಅಥವಾ ಯಾವ ಕಾರಣದ ಬಗ್ಗೆ | ಉಳಿದ ಸಂಖ್ಯೆ ಅಥವಾ ಕಿಂಮತ್ತು | ಸಹಿ | [illegible] | [illegible] | ಶರಾ |
|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
| | | | | | | | | | |

ಟೀಪು:—ಆಗಿಂದಾಗ್ಗೆ ಮತ್ತು ಅವಶ್ಯವಾಗಿ ವರ್ಷದ ಕೊನೆಗೆ ಸರಪಂಚನು ಕೈಯಲ್ಲಿದ್ದ ಸ್ಟಾಕು ಸರಿಯಾಗಿರುತ್ತದೆಂದು ನೋಡಬೇಕು.

# ನಮೂನೆ ೧೮

ಡೆಡ್‌—ಸ್ಟಾಕದ ಅಥವಾ ಚರ ಜಿಂದಿಗೆಯ ರಜಿಸ್ಟರದ ನಮೂನೆಯು

__________________ದ ಗ್ರಾಮದ ಪಂಚಾಯತವು

| ಅನುಕ್ರಮ ನಂಬರು | ವಸ್ತುವಿನ ವರ್ಣನೆ | ಕೊಂಡುಕೊಳ್ಳುವ ಬಗ್ಗೆ ಅಧಿಕಾರ ಮತ್ತು ಕೊಂಡುಕೊಂಡ ತಾರೀಖು | ಸಂಖ್ಯೆ ಅಥವಾ ಪರಿಮಾಣ* | ಬೆಲೆ | ಕಚೇರಿಯ ಮುಖ್ಯನ ಸಹಿಯ ಆದ್ಯಕ್ಷರಗಳು | ಕೊನೆಯ ವ್ಯವಸ್ಥೆ | | ವಸೂಲಾದ ರಕಮು ಮತ್ತು ಖಜಾನೆಯಲ್ಲಿ ಜಮಾ ಮಾಡಿದ ತಾರೀಖು | ಸ್ಟಾಕಿನೊಳಗೆ ಶಿಲಕು | ಕಚೇರಿಯ ಮುಖ್ಯನ ಸಹಿಯ ಆದ್ಯಕ್ಷರಗಳು | ಶರಾ |
|---|---|---|---|---|---|---|---|---|---|---|---|
| | | | | | | ಸಂಖ್ಯೆ ಅಥವಾ ಪರಿಮಾಣ ಮತ್ತು ವ್ಯವಸ್ಥೆಯ ಸ್ವರೂಪ | ಅಧಿಕಾರ ಅಥವಾ ವ್ಹೌಚರು | | | | |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ |
| | | | | | | | | | | | |

# ನಮೂನೆ ೧೯

ತಸಲಮಾತುಗಳ / ಅಮಾನತುಗಳ ರಜಿಸ್ಟರು

ದ ಗ್ರಾಮದ ಪಂಚಾಯತವು

| ತಿಂಗಳು ಮತ್ತು ತಾರೀಖು | ಪಕ್ಷಕಾರನ ಹೆಸರು | ತಸಲಮಾತಿನ ಅಥವಾ ಅಮಾನತಿನ ತಪಶೀಲು | ವ್ಯಾಜರಿನ ಅಥವಾ ಪಾವತಿ ನಂಬರು | ರಕಮು | ತಿಂಗಳಿನ ಒಟ್ಟು | ನಗದಾಗಿ ತಿರುಗಿ ಕೊಡುವದು ಅಥವಾ ಸರಿಗೊಳಿಸುವದು | | | |
|---|---|---|---|---|---|---|---|---|---|
| | | | | | | ಎಪ್ರಿಲ | ಮೇ | ಜೂನ | ಜುಲೈ |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
| | | | | | | ರೂ. ಆ. ಪೈ | ರೂ. ಆ. ಪೈ | ರೂ. ಆ. ಪೈ | ರೂ. ಆ. ಪೈ |

ಟಿಪ್ಪು:—ಶರಾಗಳಿಗೆ ಮತ್ತು ತಿದ್ದುಪಡಿಗಳಿಗೆ ಸರಪಂಚನು ಸಾಕ್ಷಿ ಹಾಕಬೇಕು.

# ನಮೂನೆ ೧೯ (ಮುಂದೆಸಾಗಿದ್ದು)

ತಸಲಮಾತುಗಳ / ಅಮಾನತುಗಳ ರಜಿಸ್ಟರವು

______________________ ವ ಗಾಮದ ಪಂ ಯತವು

| ನಗದಾಗಿ ತಿರುಗಿ ಕೊಡುವದು ಅಥವಾ ಸರಿಗೊಳಿಸುವದು | | | | | | | | [illegible] | ಹಣ ತಿರುಗಿಕೊಟ್ಟ ತಾರೀಖು ಅಥವಾ ಸರಿಗೊಳಿಸುವ ವ್ಹೌಚರ ನಂಬರು | [illegible] | ಶೆರಾ |
|---|---|---|---|---|---|---|---|---|---|---|---|
| ಅಗಸ್ಟ | ಸಪ್ಟಂಬರ | ಅಕ್ಟೋಬರ | ನವಂಬರ | ಡಿಸೆಂಬರ | ಜನವರಿ | ಫೆಬ್ರುವರಿ | ಮಾರ್ಚ | | | | |
| ೧೧ | ೧೨ | ೧೩ | ೧೪ | ೧೫ | ೧೬ | ೧೭ | ೧೮ | ೧೯ | ೨೦ | ೨೧ | ೨೨ |
| ರೂ.ಆ.ಪೈ | ರೂ.ಆ.ಪೈ | ರೂ.ಆ.ಪೈ | ರೂ.ಆ.ಪೈ | ರೂ.ಆ.ಪೈ | ರೂ.ಆ.ಪೈ | ರೂ.ಆ.ಪೈ | ರೂ.ಆ.ಪೈ | | | | |

ಟೀಪು: ಶರಾಗಳಿಗೆ ಮತ್ತು ತಿದ್ದುಪಡಿಗಳಿಗೆ ಸರಪಂಚನು ಸಾಕ್ಷಿ ಹಾಕಬೇಕು.

೨೧

(ಕೆಲಸದ ಸ್ವರೂಪ) ಇಟ್ಟುಕೊಂಡ ಜನರ ಹಾಜರಿ ಪಟ್ಟಿಯು

ಗ್ರಾಮ ಪಂಚಾಯತವು

| ೨೦ | ೨೧ | ೨೨ | ೨೩ | ೨೪ | ೨೫ | ೨೬ | ೨೭ | ೨೮ | ೨೯ | ೩೦ | ೩೧ | ಒಟ್ಟು | ದರ | ರಕಮು | ದಂಡಗಳು | ಬರತಕ್ಕ ಶಿಲಕು | ಹಣ ಪಡೆದವನ ಸಹಿ ಅಥವಾ ಹೆಬ್ಬಟ್ಟಿನ ಮುದ್ರೆ | ಹಣ ಕೊಡುವ ವೇಳೆಯಲ್ಲಿ ಹಣ ಕೊಡುವ ಅಮಲದಾರನ ಸಹಿಯು ಅದ್ಯಕ್ಷರಗಳು (ತಾರೀಖು ಸಹಿತ) |
|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | | | | | | |

# ನಮೂನೆ ೧೦

## ಚಿಲ್ಲರೆ ಕ್ಯಾಶ- ಬುಕ್ಕು

ಜಮಾ ____________ದ ಗ್ರಾಮ ಪಂಚಾಯತವು ಖರ್ಚು

| ತಾರೀಖು ೧ | ಚೆಕ್ಕಿನ ನಂಬರು ೨ | ಯಾರಿಂದ ಬಂದಿತು ೩ | ತಪಶೀಲು ೪ | ಮುಂಗಡಗಳ ಹೊರ್ತು ಇತರ ರಕಮು ೫ | ಮುಂಗಡ ೬ | ಒಟ್ಟು ೭ | ತಾರೀಖು ೮ | ವೌಚರಿನ ನಂಬರು ೯ | ಯಾರಿಗೆ ಕೊಟ್ಟದ್ದು ೧೦ | ತಪಶೀಲು ೧೧ | ೫ನೇ ಕಲಮಿನಲ್ಲಿ ತೋರಿಸಿದ ರಕಮಿನಿಂದ ಕೊಟ್ಟ ಹಣ ೧೨ | ಮುಂಗಡದಿಂದ ಕೊಟ್ಟ ಹಣ ೧೩ | ಒಟ್ಟು ೧೪ |
|---|---|---|---|---|---|---|---|---|---|---|---|---|---|
| | | | | | | | | | | | | | |

# ನಮೂನೆ ೨೨

_ದ ಗ್ರಾಮ ಪಂಚಾಯತವು

( ಹೊರಗಿನ ಹಾಳೆ)

ಸನ್ ೧೯೫ ನೇ ಇಸವಿಯ ನಂಬರು

ಭಾಗ_

ಪಬ್ಲಿಕ್ ವರ್ಕ್ಸ್ ಡಿಪಾರ್ಟಮೆಂಟ್

ತಾರೀಖು ಸನ್ ೧೯೫ ನೇ ಇಸವಿ

ಫಂಡಿನ ಸದರು________________________

ಮುಖ್ಯ ಸದರು________________________

ಚಿಕ್ಕ ಸದರು________________________

ಸರ್ವಿಸ ಸದರು

ದ ಎಕ್ಝಿಕ್ಯೂಟಿವ್ ಎಂಜನಿಯರನಾದ

ನಿಂದ ಬಗ್ಗೆ ತಗಲಬಹುದಾದ ಖರ್ಚಿನ ಅಂದಾಜು ಮಾಡ

ಲಾಯಿತು. ರೂ. (ಹಣದ ಬಗ್ಗೆ ತಗಾದೆ ಅಥವಾ ಅಧಿಕಾರ)

ದ ಗ್ರಾಮಪಂಚಾಯತದಿಂದ ಹಾಗೂ

ಜಿಲ್ಲಾ ಲೋಕಲ್ ಬೋರ್ಡಿನಿಂದ ಮಂಜೂರಾದವು

ಸಾಮಾನ್ಯ ವರ್ಣನೆ.

# ನಮೂನೆ ೨೩

______________________ದ ಗ್ರಾಮ ಪಂಚಾಯತವು

ಸನ್ ೧೯೫    ನೇ ಇಸವಿಯ__________ತಿಂಗಳಲ್ಲಿ__________ತಾರೀಖಿನ ತನ್ನ ಠರಾವು ನಂಬರು__________

ಅನ್ವಯ ಒಪ್ಪಿಗೆ ಕೊಟ್ಟ, (Re-appropriation and allottments)

**ಪುನರ್ವಿನಿಯೋಗ ಮಾಡಿದ ಮತ್ತು ಹಂಚಿಕೊಟ್ಟ ರಕಮುಗಳ ಪತ್ರಿಕೆಯು**

| ಅನುಕ್ರಮ ನಂಬರು | ಇವರಿಂದ | | | | | ಇದಕ್ಕೆ | | | | ಶೆರೆ |
|---|---|---|---|---|---|---|---|---|---|---|
| | ಮುಖ್ಯ ಸದರು | ಮುಂಗಡ ಪತ್ರದಲ್ಲಿಯ ಬಾಬು | | ಕೆಲಸಗಳು ನೌಕರಿ ಇತ್ಯಾದಿ | ಸಿಗತಕ್ಕ ಬಾಕಿ | ಮುಖ್ಯ ಸದರು | ಉಪ-ಸದರು | ಕೆಲಸಗಳು ನೌಕರಿ ಇತ್ಯಾದಿ | ರಕಮು | |
| | | ಬಾಬ ನಂಬರು | ಸದರು | | | | | | | |
| ೧ | ೨ | ೩ | | ೪ | ೫ | ೬ | ೭ | ೮ | ೯ | ೧೦ |
| | | | | | | | | | | |

೧೯೫    ನೇ ಇಸವಿಯ ನಂಬರು__________

ಮೆಮೋ:—ಕೆಳಗೆ ಸಹಿ ಮಾಡಿದವನು ೧೯೫    ನೇ ಇಸವಿಯ__________ತಾರೀಖು ತಿಂಗಳ ರಿಅಪ್ರೊಪ್ರಿಯೇಶನ್ಸ ಮತ್ತು ಅಲಾಟಮೆಂಟಗಳ ೧೯೫ ಪತ್ರಕವನ್ನು ಕಳಿಸುತ್ತಾನೆ

ಮಾ. ಅಧ್ಯಕ್ಷ,

ಜಿಲ್ಹಾ ಲೋಕಲ್ ಬೋರ್ಡ್__________ಇವರಿಗೆ

ಸರಪಂಚ,

__________ಗ್ರಾಮಪಂಚಾಯತ

# ೧೯೪೦ನೇ ಇಸ್ವಿಯ ಮುಂಬಯಿ ನ್ಯಾಯಪಂಚಾಯತಗಳ ನಿಯಮಗಳು.

(ಜನರಲ್ ಡಿಪಾರ್ಟಮೆಂಟ ನಂಬರು ಎಸ್ ೧೭೪/೧೧ ತಾರೀಖು ೧೪ನೇ ಅಗಸ್ಟ ೧೯೪೦)

೧೯೩೩ನೇ ಇಸ್ವಿಯ ಮುಂಬಯಿ ಗ್ರಾಮಪಂಚಾಯತಗಳ ವಿಷಯದ ಕಾನೂನಿನ ( ೧೯೩೩ನೇ ಇಸ್ವಿಯ ಮುಂಬಯಿ ಕಾನೂನು ನಂಬರ ೬ ) ೧೦೮ನೇ ಕಲಮಿನ ೧ನೇ ಉಪಕಲಮಿನ (ಗ), (ಹ), (ಇ), (ಜ) ಮತ್ತು (ಲ) ರಕಮುಗಳನ್ವಯ ದೊರೆತ ಅಧಿಕಾರವನ್ನು, ಮತ್ತು ಈ ಸಂಬಂಧದಲ್ಲಿ ತಮಗೆ ಬಲಕೊಡುವ ಇತರ ಎಲ್ಲ ಅಧಿಕಾರಗಳನ್ನು ಉಪಯೋಗಿಸಿ, ಮತ್ತು ತಾರೀಖು ೧೯-೧೨-೧೯೩೪ನೇ ಇಸ್ವಿಯ ಜನರಲ್ ಡಿಪಾರ್ಟಮೆಂಟಿನ ಸರಕಾರಿ ಪ್ರಕಟನೆ ನಂಬರು ಎಸ್ ೧೭೪/೪ನೇದ್ದರಲ್ಲಿ ಪ್ರಸಿದ್ಧಿಸಲ್ಪಟ್ಟ, ೧೯೩೪ನೇ ಇಸ್ವಿಯ ಮುಂಬಯಿ ನ್ಯಾಯಪಂಚಾಯತಗಳ ನಿಯಮಗಳನ್ನು ರದ್ದುಪಡಿಸಿ, ಮುಂಬಯಿ ಸರಕಾರದವರು ಈ ಕೆಳಗಿನ ನಿಯಮಗಳನ್ನು ಮಾಡಿರುತ್ತಾರೆ:—

## ಅ. ಪ್ರಾರಂಭಿಕ.

**೧. ಸಂಕ್ಷಿಪ್ತ ಹೆಸರು:—**

ಈ ನಿಯಮಗಳಿಗೆ ೧೯೪೦ನೇ ಇಸ್ವಿಯ ಮುಂಬಯಿ ನ್ಯಾಯಪಂಚಾತಗಳ ನಿಯಮಗಳೆಂದು ಕರೆಯಬಹುದು.

**೨. ವ್ಯಾಖ್ಯೆಗಳು:—**

ಈ ನಿಯಮಗಳಲ್ಲಿ ವಿಷಯದ ಅಥವಾ ಸಂದರ್ಭದಮೇಲಿಂದ ಯಾವುದೇ ಬಾಧೆಬರದಿದ್ದರೆ—

(೧) ‘‘ಆಕ್ಟ” ಅಂದರೆ ೧೯೩೩ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತಗಳ ಕಾನೂನು ಎಂದರ್ಥ;

(೨) ‘‘ನಮೂನೆ” ಅಂದರೆ ಈ ನಿಯಮಗಳಿಗೆ ಜೋಡಿಸಿದ ನಮೂನೆಯು ಎಂದರ್ಥ;

(೩) ‘‘ಸಭಾಸದನು” ಅಂದರೆ ನ್ಯಾಯಪಂಚಾಯತಿಯ ಸಭಾಸದನು ಎಂದರ್ಥ;

(೪) ‘‘ಕಲಮು” ಅಂದರೆ ಸದರ ಆಕ್ಟಿನ ಕಲಮು ಎಂದರ್ಥ;

(೫) “ಗ್ರಾಮದ ಚಾವಡಿ” ಎಂಬ ಸಂಜ್ಞೆಯಲ್ಲಿ ೧೮೭೯ನೇ ಇಸ್ವಿಯ ಮುಂಬಯಿ ಭೂಮಿಯ ಮಹಸೂಲಿನ ಕಾನೂನಿನನ್ವಯ ಚಾವಡಿಯೆಂದು ತಿಳಿಯಲ್ಪಟ್ಟ ಯಾವುದೊಂದು ಸ್ಥಳದ ಸಮಾವೇಶವಾಗುತ್ತದೆ.

(೬) ಈ ನಿಯಮಗಳಲ್ಲಿ ವ್ಯಾಖ್ಯಾಯಿಸಲ್ಪಡದಿದ್ದ ಶಬ್ದಗಳಿಗೆ ಮತ್ತು ಸಂಜ್ಞೆಗಳಿಗೆ ಸದರ ಆಕ್ಟಿನಲ್ಲಿ ಕೊಡಲ್ಪಟ್ಟ ಅರ್ಥಗಳಿರುತ್ತವೆ.

## ಬ. ನ್ಯಾಯಪಂಚಾಯತಿಯನ್ನು ರಚಿಸುವ ಸಭಾಸದರನ್ನು ಚುನಾಯಿಸುವ ರೀತಿಯು.

**೩. ನ್ಯಾಯಪಂಚಾಯತಿಯ ಸಭಾಸದರನ್ನು ಚುನಾಯಿಸುವ ರೀತಿಯು —**

೧೭ನೇ ಕಲಮಿನನ್ವಯ ಕರೆಯಲ್ಪಟ್ಟ ಪಂಚಾಯತದ ಮೊದಲನೇ ಸಭೆಯಲ್ಲಿ, ಸರಪಂಚನು ಚುನಾಯಿಸಲ್ಪಟ್ಟನಂತರ, ಪಂಚಾಯತವು ನ್ಯಾಯ ಪಂಚಾಯತನ್ನು ರಚಿಸುವದಕ್ಕಾಗಿ ತನ್ನ ಸಭಾಸದರಪೈಕಿ ೫ ಜನರನ್ನು ಚುನಾಯಿಸಲು ಮುಂದುವರಿಯಬೇಕು. ಇಂಥ ಚುನಾವಣೆಯನ್ನು ಕೈಗಳನ್ನು ಎತ್ತಿಹಿಡಿದಾಗಲಿ ಅಥವಾ ಗುಪ್ತಮತದಾನ ಪದ್ಧತಿಯಿಂದಾಗಲಿ ನಡಿಸ ಬಹುದು. ಪ್ರತಿಯೊಂದು ಚುನಾವಣೆಯ ಪ್ರಸಂಗದಲ್ಲಿ, ಸರಪಂಚನು ಯಾವ ಸಭೆಯಲ್ಲಿ ಚುನಾವಣೆಯು ನಡೆಯುವದೋ, ಆ ಸಭೆಯ ಇಚ್ಛೆಯನ್ನು

ತಿಳಿದುಕೊಂಡು, ಚುನಾವಣೆಯನ್ನು ಕೈಗಳನ್ನು ಎತ್ತಿಹಿಡಿಯುವ ಪದ್ಧತಿ ಯಿಂದ ನಡೆಸಬೇಕೋ ಇಲ್ಲವೆ ಗುಪ್ತಮತದಾನ ಪದ್ಧತಿಯಿಂದ ನಡೆಸ ಬೇಕೋ ಎಂಬುದನ್ನು ನಿರ್ಧರಿಸಬೇಕು.

**೪. ಕೈಗಳನ್ನು ಎತ್ತಿಹಿಡಿದು ಚುನಾವಣೆಗಳನ್ನು ನಡೆಸುವಾಗ ಅನುಸರಿಸತಕ್ಕ ರೀತಿ—**

(೧) ಕೈಗಳನ್ನು ಎತ್ತಿಹಿಡಿದು ಚುನಾವಣೆಯನ್ನು ನಡಿಸುವಾಗ್ಗೆ, ಈ ನಿಯಮದಲ್ಲಿ ವಿಧಿಸಲ್ಪಟ್ಟ ರೀತಿಯನ್ನು ಅನುಸರಿಸಬೇಕು.

(೨) ಸರಪಂಚನು, ಚುನಾಯಿಸಲ್ಪಡಲಿಚ್ಛಿಸುವ ಎಲ್ಲ ಉಮೇದ ವಾರರಿಗೆ ತಮ್ಮ ಹೆಸರುಗಳನ್ನು ತನಗೆ ಹೇಳಲು ಕೇಳಬೇಕು.

(೩) ಅವನು ಪ್ರತಿಯೊಬ್ಬ ಉಮೇದವಾರನ ಹೆಸರನ್ನು ಪ್ರತ್ಯೇಕ ವಾಗಿ ಮತಕ್ಕೆ ಹಾಕಬೇಕು, ಮತ್ತು ಎಲ್ಲಕ್ಕೂ ಹೆಚ್ಚು ಮತಗಳನ್ನು ದೊರಕಿ ಸಿದ ಉಮೇದವಾರರು ಚುನಾಯಿಸಲ್ಪಟ್ಟರೆಂದು ಜಾಹೀರ ಮಾಡಬೇಕು.

(೪) ಇಬ್ಬರು ಅಥವಾ ಹೆಚ್ಚು ಜನ ಉಮೇದವಾರರಿಗೆ ಸಮಾನ ಸಂಖ್ಯೆಯ ಮತಗಳು ದೊರೆತಲ್ಲಿ ಯಾವ ಉಮೇದವಾರನು ಚುನಾಯಿಸಲ್ಪಟ್ಟಿ ದ್ದಾನೆ ಎಂದು ಜಾಹೀರ ಮಾಡಬೇಕೆಂಬುದನ್ನು, ಸರಪಂಚನು ನಿರ್ಧರಿಸುವ ರೀತಿಯಲ್ಲಿ ಮತ್ತು ಅವನ ಸಮಕ್ಷಮ ಚೀಟಿಹಾಕಿ ನಿರ್ಣಯಿಸಬೇಕು.

**೫. ಗುಪ್ತಮತದಾನದಿಂದ ಚುನಾವಣೆಗಳನ್ನು ನಡಿಸುವಾಗ ಅನು ಸರಿಸತಕ್ಕ ರೀತಿ—**

(೧) ಗುಪ್ತಮತದಾನದಿಂದ ಚುನಾವಣೆಯನ್ನು ನಡೆಸುವಾಗ್ಗೆ, ಈ ನಿಯಮದಲ್ಲಿ ವಿಧಿಸಲ್ಪಟ್ಟ ರೀತಿಯನ್ನು ಅನುಸರಿಸಬೇಕು.

(೨) ಸರಪಂಚನು, ಚುನಾಯಿಸಲ್ಪಡಲಿಚ್ಛಿಸುವ ಎಲ್ಲ ಉಮೇದ ವಾರರಿಗೆ ತಮ್ಮ ಹೆಸರುಗಳನ್ನು ತನಗೆ ಹೇಳಲು ಕೇಳಬೇಕು.

(೩) ಸರಪಂಚನು, ಸಭೆಯಲ್ಲಿ ಹಾಜರಿದ್ದ ಪಂಚಾಯತದ ಪ್ರತಿ ಯೊಬ್ಬ ಸಭಾಸದನಿಗೆ ೫ ಮತದಾನದ ಕಾಗದಗಳನ್ನು ಕೊಡಬೇಕು ಮತ್ತು

ಅವನಿಗೆ, ಯಾವ ಸಭಾಸದನು ನ್ಯಾಯಪಂಚಾಯತಿಗೆ ಚುನಾಯಿಸಲ್ಪಡುವದ ಬೇಕಾಗಿದೆಯೋ ಅಂಥ ಉಮೇದವಾರನ ಹೆಸರನ್ನು ಪ್ರತಿಯೊಂದು ಕಾಗದದಮೇಲೆ ಬರೆಯಲು ಹೇಳಬೇಕು.

(೪) ಮತದಾನದ ಕಾಗದಗಳು ಸರಿಯಾಗಿ ತುಂಬಲ್ಪಟ್ಟನಂತರ, ಅವುಗಳನ್ನು ಮಡಿಚಿ ಸರಪಂಚನಿಗೆ ಕೊಡಬೇಕು. ಅವನು ಮತಗಳನ್ನು ಎಣಿಸುವದಕ್ಕೆ ಸಭೆಯಲ್ಲಿ ಹಾಜರಿದ್ದ ಪಂಚಾಯತದ ಸಭಾಸದರು ಸಮ್ಮತಿಸುವಂಥ, ಇಬ್ಬರು ಪರೀಕ್ಷರನ್ನು ನೇಮಿಸಬೇಕು.

(೫) ಪರೀಕ್ಷಕರು ಮತಗಳನ್ನು ಎಣಿಸಿ, ಮತದಾನದ ಪರಿಣಾಮವನ್ನು ಸರಪಂಚನಿಗೆ ಕೂಡಲೆ ತಿಳಿಸಬೇಕು.

(೬) ಸರಪಂಚನು, ಎಲ್ಲಕ್ಕೂ ಹೆಚ್ಚು ಮತಗಳನ್ನು ದೊರಕಿಸಿದ ಉಮೇದವಾರರು ಚುನಾಯಿಸಲ್ಪಟ್ಟರೆಂದು ಜಾಹೀರ ಮಾಡಬೇಕು.

(೭) ಇಬ್ಬರು ಅಥವಾ ಹೆಚ್ಚು ಜನ ಉಮೇದವಾರರಿಗೆ ಸಮಾನ ಸಂಖ್ಯೆಯ ಮತಗಳು ದೊರೆತಲ್ಲಿ ಯಾವ ಉಮೇದವಾರನು ಚುನಾಯಿಸಲ್ಪಟ್ಟಿದ್ದಾನೆ ಎಂದು ಜಾಹೀರ ಮಾಡಬೇಕೆಂಬುದನ್ನು, ಸರಪಂಚನು ನಿರ್ಧರಿಸುವ ರೀತಿಯಲ್ಲಿ ಮತ್ತು ಅವನ ಸಮಕ್ಷಮ ಚೀಟಿಹಾಕಿ ನಿರ್ಣಯಿಸಬೇಕು.

**೬. ಚುನಾವಣೆಯ ಪರಿಣಾಮವನ್ನು ಪ್ರಸಿದ್ಧಪಡಿಸುವ ರೀತಿ.**

ಪ್ರತಿಯೊಂದು ಚುನಾವಣೆಯ ಪರಿಣಾಮವನ್ನು, ಪಂಚಾಯತದ ಕಚೇರಿಯಲ್ಲಿ ನೋಟೀಸ ಬೋರ್ಡಿನಮೇಲೆ ಹಚ್ಚಬೇಕು.

## ಕ. ನ್ಯಾಯಪಂಚಾಯತಿಯ ಚೆಅರಮನ್ನನ ಚುನಾವಣೆ, ನ್ಯಾಯಪಂಚಾಯತಿಯ ಮುಂದೆ ಕೆಲಸವನ್ನು ನಡಿಸುವ ಕ್ರಮ, ಅದರ ಸಭೆಗಳ ವೇಳೆಗಳು ಮತ್ತು ಸ್ಥಳಗಳು ಇತ್ಯಾದಿ.

**೭. ಚೆಅರಮನ್ನನ ಚುನಾವಣೆ.**

ಪಂಚಾಯತವು, ನ್ಯಾಯಪಂಚಾಯತಿಯ ಸಭಾಸದರನ್ನು ಚುನಾಯಿಸಿದನಂತರ, ಸರಪಂಚನು, ನ್ಯಾಯಪಂಚಾಯತಿಯ ಚೆಅರಮನ್ನನನ್ನು ಚುನಾಯಿಸುವದಕ್ಕೆ ನ್ಯಾಯಪಂಚಾಯತಿಯ ಸಭೆಯನ್ನು ಕರೆಯಬೇಕು. ಇಂಥ ಸಭೆಯಲ್ಲಿ ನ್ಯಾಯಪಂಚಾಯತದಿಂದ ಚೆಅರಮನ್ನನು ಚುನಾಯಿಸಲ್ಪಡಬೇಕು.

೭ ಅ. ಸರಪಂಚನು, ಚೆಅರಮನ್ನನು ಚುನಾಯಿಸಲ್ಪಡುವವರೆಗೆ, ಆ ಸಭೆಯ ಅಧ್ಯಕ್ಷನಾಗಬೇಕು.

೭ ಬ. ಹೀಗೆ ಅಧ್ಯಕ್ಷನಾದ ಸರಪಂಚನು, ತಾನು ಸ್ವತಃ ನ್ಯಾಯಪಂಚಾಯತಿಯ ಸಭಾಸದ ನಿರದವಿನಃ, ಆ ಸಭೆಯಲ್ಲಿ ಯಾವುದೇ ಸೂಚನೆಯಮೇಲೆ ಮತಕೊಡಲಿಕ್ಕೆ ಅಥವಾ ಯಾವುದೇ ಸೂಚನೆಯನ್ನು ಮಾಡಲಿಕ್ಕೆ ಸ್ವತಂತ್ರನಿರುವದಿಲ್ಲ.

೭ ಕ. ಸರಪಂಚನು ಆ ಸಭೆಯ ಅಧ್ಯಕ್ಷನಾಗಲು ಅಸಮರ್ಥನಿದ್ದರೆ, ಅಥವಾ ಅವನು ಯಾವುದೇ ಕಾರಣದಿಂದ ಅಧ್ಯಕ್ಷನಾಗಲು ತಪ್ಪಿದರೆ, ಹಾಜರಿದ್ದ ಸಭಾಸದರು, ಸದರಿ ಸಭೆಗಾಗಿ ತಮ್ಮೊಳಗಿಂದ ಒಬ್ಬ ಚೆಅರಮನ್ನನನ್ನು ಚುನಾಯಿಸಬೇಕು. ಇಂಥ ಚೆಅರಮನ್ನನು ನ್ಯಾಯಪಂಚಾಯತಿಯ ಚೆಅರಮನ್ನನು ಚುನಾಯಿಸಲ್ಪಡುವವರೆಗೆ ಸದರ ಸಭೆಯ ಅಧ್ಯಕ್ಷನಾಗಬೇಕು.

೭ ಡ. ಮತಗಳು ಸಮಾನವಾಗಿ ದೊರೆತ ಪ್ರಸಂಗದಲ್ಲಿ, ಚುನಾವಣೆಯ ಪರಿಣಾಮವನ್ನು ಸಭೆಯ ಅಧ್ಯಕ್ಷನಾದವನು ನಿರ್ಧರಿಸಬಹುದಾದ ರೀತಿಯಲ್ಲಿ, ಅವನ ಸಮಕ್ಷಮ ಚೀಟಿಹಾಕಿ ನಿರ್ಣಯಿಸಬೇಕು.

**೮. ಚೆಅರಮನ್ನನು ಗೈರಹಾಜರಿದ್ದಾಗ್ಗೆ ಅಥವಾ ಅಧ್ಯಕ್ಷನಾಗಲು ಅಸಮರ್ಥನಿದ್ದರೆ, ಚೆಅರಮನ್ನನನ್ನು ನೇಮಿಸುವದು.**

ನ್ಯಾಯಪಂಚಾಯತಿಯ ಚೆಅರಮನ್ನನು, ಇಂಥ ನ್ಯಾಯಪಂಚಾಯತಿಯ ಪ್ರತಿಯೊಂದು ಸಭೆಯಲ್ಲಿ ಅಧ್ಯಕ್ಷತೆಯನ್ನು ವಹಿಸಬೇಕು. ಚೆಅರಮನ್ನನು ಗೈರಹಾಜರಿದ್ದಾಗ್ಗೆ, ಅಥವಾ ಅವನು ಯಾವುದೇ ಸಭೆಯಲ್ಲಿ ಅಧ್ಯಕ್ಷನಾಗಲು ಅಸಮರ್ಥನಿದ್ದಾಗ, ಹಾಜರಿದ್ದ ಸಭಾಸದರು, ಸದರಿ ಸಭೆಗೆ ಚೆಅರಮನ್ನನಾಗುವದಕ್ಕಾಗಿ, ಹಾಜರಿದ್ದ ಸಭಾಸದರೊಳಗಿಂದ ಒಬ್ಬನನ್ನು ಚುನಾಯಿಸಬೇಕು. ಇಬ್ಬರು ಅಥವಾ ಹೆಚ್ಚುಜನ ಸದಸ್ಯರಿಗೆ ಚೆಅರಮನ್ನನ ಚುನಾವಣೆಯಲ್ಲಿ ಸಮಾನ ಮತಗಳು ದೊರೆತಿದ್ದರೆ, ಯಾವ ಸದಸ್ಯನು ಚುನಾಯಿಸಲ್ಪಟ್ಟಿರುವನೆಂಬುದನ್ನು ಚೀಟಿಹಾಕಿ ನಿರ್ಣಯಿಸಬೇಕು.

**೯. ಸಭೆ ಸೇರುವ ಸ್ಥಳ.**

ಪ್ರತಿಯೊಂದು ನ್ಯಾಯಪಂಚಾಯತವು, ೧೯ನೇ ಕಲಮಿನನ್ವಯ ಮಾಡಲ್ಪಟ್ಟ ಉಪನಿಯಮಗಳಿಗನುಸರಿಸಿ, ಪಂಚಾಯತಿಯ ಸಭೆಯು ಸೇರುವ ಸ್ಥಳವೆಂದು ಗೊತ್ತುಮಾಡಲ್ಪಟ್ಟ ಸ್ಥಳದಲ್ಲಿ ಸಭೆ ಸೇರಬೇಕು, ಮತ್ತು ಇಂಥ ಸ್ಥಳವು ದೊರೆಯದಿದ್ದರೆ, ಗ್ರಾಮದ ಚಾವಡಿಯಲ್ಲಿ ಸಭೆ ಸೇರಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಯಾವುದೇ ಗ್ರಾಮದಲ್ಲಿ, ಇಂಥ ಗ್ರಾಮದ ಚಾವಡಿಯು ಇರದಿದ್ದರೆ, ಸದರ ಗ್ರಾಮವು ಯಾವ ಸಬ್-ಡಿವ್ಹಿಜನಲ್ ಮ್ಯಾಜಿಸ್ಟ್ರೇಟನ ಅಧಿಕಾರ ಕ್ಷೇತ್ರದಲ್ಲಿರುವದೋ ಆ ಸಬ್ ಡಿವ್ಹಿಜನಲ್ ಮ್ಯಾಜಿಸ್ಟ್ರೇಟನು ಒಪ್ಪುವ ಮತ್ತು ಸಂಬಂಧಪಟ್ಟವರೆಲ್ಲರಿಗೂ ಸುಗಮವಿರುವ ಇತರ ಯಾವುದೇ ಸ್ಥಳದಲ್ಲಿ ನ್ಯಾಯಪಂಚಾಯತವು ಸಭೆ ಸೇರಬೇಕು.

**೧೦. ಸಭೆ ಸೇರುವ ತಾಸುಗಳು.**

ನ್ಯಾಯಪಂಚಾಯತಿಯ ಚೇರಮನ್ನನು, ಇತರ ಸದಸ್ಯರೊಂದಿಗೆ ಆಲೋಚನೆಮಾಡಿ ಇಂಥ ನ್ಯಾಯಪಂಚಾಯತವು ಸಭೆಸೇರುವ ತಾಸುಗಳನ್ನು ಗೊತ್ತುಮಾಡಬೇಕು.

**೧೧. ರಜಿಸ್ಟರುಗಳು.**

ಪ್ರತಿಯೊಂದು ನ್ಯಾಯಪಂಚಾಯತವು ಈ ಕೆಳಗಿನ ರಜಿಸ್ಟರುಗಳನ್ನು ಇಡಬೇಕು:—

(೧) ೧ನೇ ನಮೂನೆಯಲ್ಲಿ, ನಡಿಸಿದ ಕೆಲಸಗಳ ರಜಿಸ್ಟರು.

(೨) ೨ನೇ ನಮೂನೆಯಲ್ಲಿ, ದಾವೆಗಳ ರಜಿಸ್ಟರು.

(೩) ೩ನೇ ನಮೂನೆಯಲ್ಲಿ, ಖಟ್ಲೆಗಳ ರಜಿಸ್ಟರು.

**೧೨. ಭಾಷೆ.**

ನ್ಯಾಯಪಂಚಾಯತವು ನಡಿಸುವ ಕೆಲಸಗಳು ಮತ್ತು ನ್ಯಾಯಪಂಚಾಯತಿಯ ಎಲ್ಲ ರಜಿಸ್ಟರುಗಳು, ಆ ಗ್ರಾಮವು ಯಾವ ಜಿಲ್ಹೆಯಲ್ಲಿರುವದೋ, ಆ ಜಿಲ್ಹೆಯ ಮುಖ್ಯ ಪ್ರಾದೇಶಿಕ ಭಾಷೆಯಲ್ಲಿ ಅಥವಾ ಯಾವ ಸಬ್‌ಡಿವ್ಹಿಜನಲ್ ಮ್ಯಾಜಿಸ್ಟ್ರೇಟನ ಅಧಿಕಾರಕ್ಷೇತ್ರದಲ್ಲಿ ಆ ಗ್ರಾಮವು ಇರುವದೋ ಅಂಥ ಸಬ್ ಡಿವ್ಹಿಜನಲ್ ಮ್ಯಾಜಿಸ್ಟ್ರೇಟನು ಆಜ್ಞೆಮಾಡಬಹುದಾದ ಸದರ ಗ್ರಾಮದ ಇತರ ಭಾಷೆಯಲ್ಲಿ ಅನುಕ್ರಮವಾಗಿ ನಡೆಯಬೇಕು ಮತ್ತು ಇಡಲ್ಪಡಬೇಕು.

**೧೩. ದಾವೆಗಳ ಮತ್ತು ಖಟ್ಲೆಗಳ ವಿಚಾರಣೆ ಮತ್ತು ಅವುಗಳನ್ನು ಮುಂದೆ ಹಾಕುವದು.**

ಪ್ರತಿಯೊಂದು ನ್ಯಾಯಪಂಚಾಯತವು ಸಾಧ್ಯವಿದ್ದಮಟ್ಟಿಗೆ, ದಾವೆಯ ಅಥವಾ ಖಟ್ಲೆಯ ವಿಚಾರಣೆಯನ್ನು, ಇಂಥ ವಿಚಾರಣೆಗಾಗಿ ಗೊತ್ತುಪಡಿಸಿದ ತಾರೀಖಿನ ದಿವಸ ಮುಗಿಸಬೇಕು. ಯಾವುದಾದರೊಂದು ದಾವೆಯ ಅಥವಾ ಖಟ್ಲೆಯ ವಿಚಾರಣೆಯು, ಯಾವುದೇ ಕಾರಣದಿಂದ ಯಾವುದೇ ದಿವಸ ಮುಗಿಯದಿದ್ದರೆ, ಅದನ್ನು ಮುಂದೆ ಹಾಕುವಬಗ್ಗೆ ತನ್ನ ಕಾರಣಗಳನ್ನು ಬರೆದಿಟ್ಟು, ಆ ವಿಚಾರಣೆಯನ್ನು ಸಾಧ್ಯವಿದ್ದರೆ, ಮುಂದಿನ ದಿವಸಕ್ಕೆ

ಇಡಬೇಕು, ಆಮೇಲೆ ವಿಚಾರಣೆ ಮಾಡುವದನ್ನು ದಿನದಿಂದ ದಿನಕ್ಕೆ ಮುಂದು ವರಿಸಬೇಕು. ಯಾವುದಾದರೊಂದು ದಾವೆಯ ಅಥವಾ ಖಟ್ಲೆಯ ನಿರ್ಣಯವು, ಅದರ ಮೊದಲನೆಯ ವಿಚಾರಣೆಯು ಆದ ತಾರೀಖಿನಿಂದ ೧೪ ದಿವಸಗಳೊಳಗಾಗಿ ಮಾಡಲ್ಪಡದಿದ್ದರೆ, ಚೇಅರಮನ್ನನು ಆ ಬಗ್ಗೆ ಕಾರಣಗಳನ್ನು ಕುರಿತು, ಯಾವ ಸಬ್‌ಡಿವ್ಹಿಜನಲ್ ಮ್ಯಾಜಿಸ್ಟ್ರೇಟನ ಅಧಿಕಾರಕ್ಷೇತ್ರದಲ್ಲಿ ಆ ಗ್ರಾಮವಿರುವದೋ ಅಂಥ ಸಬ್‌ಡಿವ್ಹಿಜನಲ್ ಮ್ಯಾಜಿಸ್ಟ್ರೇಟನಿಗೆ ವರದಿ ಮಾಡಬೇಕು.

**೧೪. ಪುರಾವೆಯನ್ನು ಬರೆದಿಡುವದು.**

ಪ್ರತಿಯೊಂದು ನ್ಯಾಯಪಂಚಾಯತವು, ಪ್ರಸಂಗಾನುಸಾರವಾಗಿ, ದಾವೆಗಳ ರಜಿಸ್ಟರಿನಲ್ಲಿ ಅಥವಾ ಖಟ್ಲೆಗಳ ರಜಿಸ್ಟರಿನಲ್ಲಿ, ತಾನು ವಿಚಾರಣೆ ಮಾಡಿದ ಪ್ರತ್ಯೇಕ ದಾವೆಯಲ್ಲಿಯ ಅಥವಾ ಖಟ್ಲೆಯಲ್ಲಿಯ ಕೆಲಸಗಳ ಟಿಪ್ಪಣಿಯನ್ನು ಬರೆಯಬೇಕು, ಮತ್ತು ಅದರಲ್ಲಿ ಅರ್ಜಿಯ ಪ್ರತಿವಾದಿಯು ಅಥವಾ ಆರೋಪಿಯು ಕೊಟ್ಟ ಜಬಾನಿಯು ಮತ್ತು ಇಂಥ ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ ಕೊಡಲ್ಪಟ್ಟ ಪುರಾವೆಯ ಸಾರಾಂಶವು ಇರಬೇಕು.

**೧೫. ಕಾಗದಪತ್ರಗಳು.**

ಯಾವುದೇ ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ, ಯಾವವೇ ಕಾಗದ ಪತ್ರಗಳು ಹಾಜರಮಾಡಲ್ಪಟ್ಟಿದ್ದರೆ, ಆಬಗ್ಗೆ ಅವುಗಳಮೇಲೆ ಅದರಂತೆ ಶರಾ ಬರೆಯಬೇಕು, ಮತ್ತು ಅವುಗಳಬಗ್ಗೆ ಒಂದು ಟಿಪ್ಪಣಿಯನ್ನು ಪ್ರಸಂಗಾನುಸಾರ ದಾವೆಗಳ ಮತ್ತು ಖಟ್ಲೆಗಳ ರಜಿಸ್ಟರಿನಲ್ಲಿ ಬರೆದಿಡಬೇಕು. ನ್ಯಾಯಪಂಚಾಯತವು, ಇಂಥ ಕಾಗದಪತ್ರಗಳನ್ನು, ಸದರ ದಾವೆಯು ಅಥವಾ ಖಟ್ಲೆಯು ನಿರ್ಣಯಿಸಲ್ಪಟ್ಟನಂತರ ಅವುಗಳನ್ನು ಹಾಜರಮಾಡಿದ ಮನುಷ್ಯನಿಗೆ ತಿರುಗಿಕೊಡಬೇಕು.

**೧೬. ನಿರ್ಣಯವನ್ನು ಬರೆದಿಡುವದು.**

ಪ್ರತಿಯೊಂದು ನ್ಯಾಯಪಂಚಾಯತವು, ತನ್ನ ನಿರ್ಣಯವನ್ನು, ಮತ್ತು ತನ್ನ ನಿರ್ಣಯದಬಗ್ಗೆ ಸಂಕ್ಷಿಪ್ತಕಾರಣಗಳನ್ನು, ಪ್ರಸಂಗಾನುಸಾರ, ದಾವೆಗಳ ರಜಿಸ್ಟರಿನಲ್ಲಿ (ನಮೂನೆ ನಂ೨) ಅಥವಾ ಖಟ್ಲೆಗಳ ರಜಿಸ್ಟರಿನಲ್ಲಿ (ನಮೂನೆ

ನಂಆ) ಬರೆದಿಡಬೇಕು, ಮತ್ತು ಸದರ ನಿರ್ಣಯವನ್ನು ಕೊಡುವ ಸಭಾಸದರು ಅದರಮೇಲೆ ತಮ್ಮ ಸಹಿಗಳನ್ನು ಅಥವಾ ಹೆಬ್ಬೆಟ್ಟಿನ ಗುರುತುಗಳನ್ನು ಮಾಡ ಬೇಕು. ಸದರ ನಿರ್ಣಯವನ್ನು ಹಾಜರಿರುವ ಪಕ್ಷಕಾರರಿಗೆ ತಿಳಿಸಬೇಕು, ಮತ್ತು ಆಮೇಲೆ ಅವರ ಸಹಿಗಳನ್ನು ಅಥವಾ ಹೆಬ್ಬೆಟ್ಟಿನ ಗುರುತುಗಳನ್ನು ಸದರ ರಜಿಸ್ಟರಿನಲ್ಲಿ ತೆಗೆದುಕೊಳ್ಳಬೇಕು.

## ಡ. ದಾವೆಗಳನ್ನು ದಾಖಲ ಮಾಡುವಬಗ್ಗೆ ಫೀಗಳು, ಸಮನ್ಸಿನ ನಮೂನೆಗಳು ಇತ್ಯಾದಿ.

**೧೭. ದಾವೆಯನ್ನು ಅಥವಾ ಖಟ್ಲೆಯನ್ನು ದಾಖಲ ಮಾಡುವಬಗ್ಗೆ ಫೀಗಳು.**

ದಾವೆಗಳನ್ನು ಅಥವಾ ಖಟ್ಲೆಗಳನ್ನು ದಾಖಲ ಮಾಡುವದಕ್ಕೆ ಈ ಕೆಳಗಿನ ದರಗಳ ಪ್ರಕಾರ ಫೀಗಳ ಆಕರಣೆ ಮಾಡಬೇಕು:—

(೧) ದಾವೆಯ ಸಂಬಂಧದಲ್ಲಿ, ಬೇಡಿಕೆಯ (ಮಾಗಣಿ) ರಕಮು ಅಥವಾ ಕಿಮ್ಮತ್ತು.

(ಅ) ೧೦ರೂಪಾಯಿಗಳಿಗೆ ಮೀರದಿದ್ದಾಗ........ಎಂಟು ಆಣೆಗಳು.

(ಬ) ೧೦ರೂಪಾಯಿಗಳಿಗಿಂತ ಹೆಚ್ಚು, ಆದರೆ ೨೫ರೂಪಾಯಿಗಳಿಗೆ ಮೀರದಿದ್ದಾಗ...............ಒಂದುರೂಪಾಯಿ.

(ಕ) ೨೫ರೂಪಾಯಿಗಳಿಗಿಂತ ಹೆಚ್ಚು, ಆದರೆ ೫೦ರೂಪಾಯಿಗಳಿಗೆ ಮೀರದಿದ್ದಾಗ...............ಒಂದುರೂಪಾಯಿ ಎಂಟು ಆಣೆಗಳು.

(ಡ) ೫೦ರೂಪಾಯಿಗಳಿಗಿಂತ ಹೆಚ್ಚು, ಆದರೆ ೭೫ರೂಪಾಯಿಗಳಿಗೆ ಮೀರದಿದ್ದಾಗ...............ಎರಡು ರೂಪಾಯಿಗಳು.

(ಈ) ೭೫ರೂಪಾಯಿಗಳಿಗಿಂತ ಹೆಚ್ಚು ಆದರೆ ೧೦೦ರೂಪಾಯಿಗಳಿಗೆ ಮೀರದಿದ್ದಾಗ...............ಎರಡುರೂಪಾಯಿ ಎಂಟು ಆಣೆಗಳು.

(೨) (ಯಾವುದೇ ಅಪರಾಧದ ಅಥವಾ ಯಾವುದೇ ಉಪನಿಯಮದ ಉಲ್ಲಂಘನೆಯ ಸಂಬಂಧದಲ್ಲಿ, ಪಂಚಾಯತದ ಪಕ್ಷದಿಂದ ಮಾಡಲ್ಪಟ್ಟ ಅಥವಾ ಯಾವನೊಬ್ಬ ಸರಕಾರಿ ನೌಕರನು ತನ್ನ ಅಧಿಕಾರ ಸಾಮರ್ಥ್ಯದ ಮೂಲಕ ಮಾಡಿದ ಖಟ್ಲೆಯನ್ನು ಬಿಟ್ಟು) ಯಾವುದೇ ಖಟ್ಲೆಯ ಸಂಬಂಧದಲ್ಲಿ ..................ಎಂಟು ಆಣೆಗಳು.

**೧೮. ಸಮನ್ಸುಗಳ ನಮೂನೆ.**

ನ್ಯಾಯಪಂಚಾಯತಿಯಿಂದ ಹೊರಡಿಸಲ್ಪಟ್ಟ ಪ್ರತಿಯೊಂದು ಸಮನ್ಸು ಎರಡು ಪ್ರತಿಗಳಲ್ಲಿ ಇರಬೇಕು, ಮತ್ತು ಅದು ಪ್ರತಿವಾದಿಯ ಅಥವಾ ಆರೋಪಿಯ ಸಂಬಂಧದಲ್ಲಿ ೪ನೇ ನಮೂನೆಯಲ್ಲಿ ಮತ್ತು ಸಾಕ್ಷಿದಾರನ ಸಂಬಂಧದಲ್ಲಿ ೫ನೇ ನಮೂನೆಯಲ್ಲಿ ಇರಬೇಕು.

**೧೯. ಪ್ರೊಸೆಸ್ ಫೀಗಳು.**

ನ್ಯಾಯಪಂಚಾಯತಿಯಿಂದ ಹೊರಡಿಸಲ್ಪಟ್ಟ ಪ್ರತಿಯೊಂದು ಸಮನ್ಸಿನ ಬಗ್ಗೆ, ಸದರ ಸಮನ್ಸನ್ನು ಸದರಗ್ರಾಮದಲ್ಲಿ ಜಾರಿಮಾಡುವದಿದ್ದಾಗ್ಗೆ, ಒಂದು ಆಣೆಯ ಫೀಯನ್ನು, ಮತ್ತು ಸದರ ಸಮನ್ಸನ್ನು ಗ್ರಾಮದಹೊರಗೆ ಜಾರಿ ಮಾಡುವದಿದ್ದಾಗ್ಗೆ, ನಾಲ್ಕು ಆಣೆಗಳ ಫೀಯನ್ನು ಆಕರಿಸಬೇಕು.

**೨೦. ಫೀಗಳಬಗ್ಗೆ ಪಾವತಿ.**

೧೭ನೇ ಮತ್ತು ೧೯ನೇ ನಿಯಮಗಳನ್ವಯ ಆಕರಣೆಮಾಡಲ್ಪಡತಕ್ಕ ಫೀಗಳನ್ನು, ಚೆಅರಮನ್ನನಿಗೆ, ಅಥವಾ ಅವನು ಗ್ರಾಮದಿಂದ ಗೈರಹಾಜರಿದ್ದಾಗ, ಪಂಚಾಯತದ ಸೆಕ್ರೆಟರಿಗಾಗಲಿ ಇಲ್ಲವೆ ೫೯ನೇ ಕಲಮಿನನ್ವಯ ದಾವೆಗಳನ್ನು ಅಥವಾ ಖಟ್ಲೆಗಳನ್ನು ದಾಖಲಮಾಡುವಬಗ್ಗೆ ಅರ್ಜಿಗಳನ್ನು ಸ್ವೀಕರಿಸುವದಕ್ಕೆ ನೇಮಿಸಲ್ಪಟ್ಟ ಸಭಾಸದನಿಗಾಗಲಿ ನಗದು ಕೊಡಬೇಕು. ಇಂಥ ಚೆಅರಮನ್ನನು, ಸೆಕ್ರೆಟರಿಯು ಅಥವಾ ಸಭಾಸದನು, ತನ್ನಕಡೆಗೆ ಕೊಡಲ್ಪಟ್ಟ ಹಣಕ್ಕಾಗಿ, ಈಬಗ್ಗೆ ನ್ಯಾಯಪಂಚಾಯತಿಯು ಮಂಜೂರ ಮಾಡಿದ ನಮೂನೆಯಲ್ಲಿ, ತನ್ನ ಸಹಿಯೊಂದಿಗೆ ಒಂದು ಪಾವತಿಯನ್ನು ಕೂಡಲೆ ಕೊಡಬೇಕು, ಮತ್ತು ಸದರ ರಕಮನ್ನು ಗ್ರಾಮದ ಫಂಡಿಗೆ ಜಮಾ

ಮಾಡಬೇಕು, ಮತ್ತು ನ್ಯಾಯಪಂಚಾಯತಿಯ ಕ್ಯಾಶ ಬುಕ್ಕಿನಲ್ಲಿ, ಫೀಗಳಿಗೆ ಸಂಬಂಧಪಟ್ಟ ಆಸನದಲ್ಲಿ ಅದನ್ನು ನಮೂದ ಮಾಡಬೇಕು.

**೨೧. ಸಮುನ್ಸುಗಳನ್ನು ಜಾರಿಮಾಡಿದಬಗ್ಗೆ ಗ್ರಾಮಾಧಿಕಾರಿಗಳಿಗೆ ಫೀಗಳನ್ನು ಕೊಡುವದು.**

ಸಮುನ್ಸನ್ನು ಜಾರಿಮಾಡುವಬಗ್ಗೆ, ಗ್ರಾಮಾಧಿಕಾರಿಯು ನೇಮಿಸಲ್ಪಟ್ಟಿದ್ದರೆ, ೧೯ನೇ ನಿಯಮದನ್ವಯ ಆಕರಣಿಮಾಡಲ್ಪಟ್ಟ ಫೀಯನ್ನು ಇಂಥ ಅಧಿಕಾರಿಗೆ ಕೊಡಬೇಕು.

## ಈ. ನಕಲುಗಳನ್ನು ಕೊಡುವದು ಇತ್ಯಾದಿ.

**೨೨. ರಜಿಸ್ಟರುಗಳೊಳಗಿನ ದಾಖಲೆ (ನೊಂದ)ಗಳ ನಕಲುಗಳನ್ನು ಕೊಡುವದು.**

(೧) ದಾವೆಗಳ ರಜಿಸ್ಟರಿನಲ್ಲಿ ಅಥವಾ ಖಟ್ಲೆಗಳ ರಜಿಸ್ಟರಿನಲ್ಲಿ ಮಾಡಿದ ಯಾವುದೇ ದಾಖಲೆಯ ನಕಲಿನ ಬಗ್ಗೆ ಮಾಡಲ್ಪಟ್ಟ ಯಾವುದೊಂದು ಅರ್ಜಿಯನ್ನು, ನ್ಯಾಯ ಪಂಚಾಯತಿಯ ಚೆಅರಮನ್ನನ ಕಡೆಗೆ, ಅಥವಾ ಅವನು ಗೈರಹಾಜರಿದ್ದಾಗ ನ್ಯಾಯಪಂಚಾಯತಿಯ ಸೆಕ್ರೆಟರಿಯ ಕಡೆಗಾಗಲಿ ಇಲ್ಲವೆ ೫೯ನೇ ಕಲಮಿನನ್ವಯ ದಾವೆಗಳನ್ನು ಅಥವಾ ಖಟ್ಲೆಗಳನ್ನು ದಾಖಲ ಮಾಡುವಬಗ್ಗೆ ಅರ್ಜಿಗಳನ್ನು ಸ್ವೀಕರಿಸುವದಕ್ಕೆ ನೇಮಿಸಲ್ಪಟ್ಟ ಸಭಾಸದನ ಕಡೆಗಾಗಲಿ ಕೊಡಬೇಕು. ಇಂಥ ಪ್ರತಿಯೊಂದು ನಕಲನ್ನು, ಅರ್ಜಿಯು ಮುಟ್ಟಿದ ತಾರೀಖಿನಿಂದ ಒಂದು ವಾರದೊಳಗಾಗಿ ಕೊಡಬೇಕು. ಇಂಥ ಪ್ರತಿಯೊಂದು ನಕಲಿಗಾಗಿ ನಾಲ್ಕು ಆಣೆಗಳ ಫೀಯನ್ನು ಕೊಡಬೇಕು.

(೨) ನ್ಯಾಯಪಂಚಾಯತಿಯ ಚೆಅರಮನ್ನನು ನಕಲನ್ನು ತಾನೇ ಸ್ವತಃ ಮಾಡಬೇಕು, ಅಥವಾ ಅವನು ಪಂಚಾಯತಿಯ ಸೆಕ್ರೆಟರಿಯಿಂದಾಗಲಿ ಅಥವಾ ಗ್ರಾಮದ ತಲಾಟಿಯಿಂದಾಗಲಿ, ಅಥವಾ ಶಾಲೆಯ ಶಿಕ್ಷಕನಿಂದಾಗಲಿ ಇಲ್ಲವೆ ಇತರ ಯಾವನೇ ಓದುಬರಹ ಬಲ್ಲವನಿಂದಾಗಲಿ ಮಾಡಿಸಬೇಕು. ಚೆಅರಮನ್ನನು ಪ್ರತಿಯೊಂದು ನಕಲನ್ನು ರಜಿಸ್ಟರನೊಂದಿಗೆ ಸರಿ ನೋಡಬೇಕು ಮತ್ತು ಅದು ನಿಜವಾದ ನಕಲು ಎಂದು ಸಾರಿ ಹೇಳಬೇಕು (ದಾಖಲೆ ಕೊಡಬೇಕು).

(೩) ೧ನೇ ಉಪನಿಯಮದನ್ವಯ, ಸ್ವೀಕರಿಸಿದ ನಕಲಿನ ಫೀಯ ಅರ್ಧದಷ್ಟು ಹಣವನ್ನು ನಕಲು ಮಾಡುವವನಿಗೆ ಕೊಡಬೇಕು ಮತ್ತು ಉಳಿದದ್ದನ್ನು ಗ್ರಾಮದ ಫಂಡಿಗೆ ಜಮಾ ಮಾಡಬೇಕು.

## ಫ. ಕಿರಕೋಳ.

### ೨೩. ದಂಡ, ಪರಿಹಾರಧನ ಮೊದಲಾದವುಗಳನ್ನು ಕೊಡುವದು ಮತ್ತು ಅದರಬಗ್ಗೆ ಪಾವತಿ.

ನ್ಯಾಯಪಂಚಾಯತಿಯ ಆಜ್ಞೆಯ ಅಥವಾ ಹುಕುಮನಾಮೆಯ ಅನ್ವಯ, ದಂಡ, ಪರಿಹಾರ ಅಥವಾ ಇತರ ಕಾರಣದ ಮೂಲಕ ಯಾವುದೇ ಹಣವನ್ನು ಕೊಡಲಿಕ್ಕೆ ಪಾತ್ರನಿರುವ ಪ್ರತಿಯೊಬ್ಬ ಮನುಷ್ಯನು, ಇಂಥ ಹಣವನ್ನು, ನ್ಯಾಯಪಂಚಾಯತಿಯ ಚೆಅರಮನ್ನನ ಕಡೆಗೆ, ಅಥವಾ ಅವನು ಗ್ರಾಮದಿಂದ ಗೈರಹಾಜರಿದ್ದಲ್ಲಿ, ಪಂಚಾಯತದ ಸೆಕ್ರೆಟರಿಯ ಕಡೆಗಾಗಲಿ ಅಥವಾ ೫೫ನೇ ಕಲಮಿನನ್ವಯ ದಾವೆಗಳನ್ನು ಅಥವಾ ಖಟ್ಲೆಗಳನ್ನು ದಾಖಲ ಮಾಡುವಬಗ್ಗೆ ಅರ್ಜಿಗಳನ್ನು ಸ್ವೀಕರಿಸುವದಕ್ಕೆ ನೇಮಿಸಲ್ಪಟ್ಟ ಸಭಾಸದನ ಕಡೆಗಾಗಲಿ ಕೊಡಬೇಕು. ಇಂಥ ಚೆಅರಮನ್ನನು, ಸೆಕ್ರೆಟರಿಯು ಅಥವಾ ಸಭಾಸದನು ಹೀಗೆ ಸ್ವೀಕರಿಸಿದ ಹಣದಬಗ್ಗೆ, ಸದರ ಆಕ್ಟಿನ ೧೦೮ನೇ ಕಲಮಿನ ೧ನೇ ಉಪಕಲಮಿನ (ಫ) ರಕಮಿನನ್ವಯ ಮಾಡಲ್ಪಟ್ಟ ನಿಯಮ

ಗಳನ್ವಯ ಗ್ರಾಮಪಂಚಾಯತದ ಲೆಕ್ಕಗಳ ಸಂಬಂಧ ಗೊತ್ತುಮಾಡಲ್ಪಟ್ಟ "ಸಾಮಾನ್ಯ ಪಾವತಿಯು" ಎಂಬ ನಮೂನೆಯಲ್ಲಿ ಒಂದು ಪಾವತಿಯನ್ನು ಕೊಡಬೇಕು. ನ್ಯಾಯಪಂಚಾಯತಿಯ ಆಜ್ಞೆಯ ಅಥವಾ ಹುಕುಮ ನಾಮೆಯ ಅನ್ವಯ ಯಾವನೇ ಮನುಷ್ಯನಿಗೆ ಯಾವುದೇ ಹಣವು ಕೊಡಲ್ಪಟ್ಟಾಗ್ಗೆ, ನ್ಯಾಯಪಂಚಾಯತಿಯು ಒಪ್ಪಬಹುದಾದ್ದ ನಮೂನೆಯಲ್ಲಿ, ಇಂಥ ಮನುಷ್ಯನಿಂದ, ಹೀಗೆ ಕೊಡಲ್ಪಟ್ಟ ಹಣಕ್ಕಾಗಿ ಒಂದು ಪಾವತಿಯನ್ನು ತೆಗೆದುಕೊಳ್ಳಬೇಕು.

## ೨೪. ದಾವೆಗಳಲ್ಲಿಯ ವೆಚ್ಚವು.

ಹಣದ ವಿಷಯದ ದಾವೆಗಳಲ್ಲಿ ವೆಚ್ಚಗಳಬಗ್ಗೆ ಮಾಡಲ್ಪಡುವ ಆಜ್ಞೆಯು ದಾವೆಯ ಪರಿಣಾಮವನ್ನು ಅನುಸರಿಸುವದು, ಮತ್ತು ಇಂಥ ವೆಚ್ಚಗಳಲ್ಲಿ, ೧೭ನೇ ಮತ್ತು ೧೯ನೇ ನಿಯಮಗಳನ್ವಯ ಕೊಡಲ್ಪಟ್ಟ ಫೀಗಳು, ಮತ್ತು ೬೭ನೇ ಕಲಮಿನ ೩ನೇ ಉಪಕಲಮಿನನ್ವಯ ಆವ ಸಾಕ್ಷಿದಾರರ ವೆಚ್ಚದಲ್ಲಿ ಎಷ್ಟು ಭಾಗವನ್ನು ಕೊಡುವದು ಯೋಗ್ಯವೆಂದು ನ್ಯಾಯಪಂಚಾಯತಿಗೆ ತೋರುವದೋ ಅಷ್ಟು ವೆಚ್ಚದ ಭಾಗವು ಸಮಾವೇಶವಾಗುವವು.

# ನಮೂನೆ ೧.

## ೧೧ನೇ ನಿಯಮವನ್ನು ನೋಡಿರಿ

ನಡಿಸಿದ ಕೆಲಸಗಳ ರಜಿಸ್ಟರು

| ತಾರೀಖು.<br>೧ | ಹಾಜರಿದ್ದ ಸಭಾಸದರ ಹೆಸರು.<br>೨ | ಮಾಡಲ್ಪಟ್ಟ ಕೆಲಸ.<br>೩ |
|---|---|---|
| | | |

# ನಮೂನೆ ೨

(೧೧ನೇ ನಿಯಮವನ್ನು ನೋಡಿರಿ)

## ಗ್ರಾಮದ ನ್ಯಾಯಪಂಚಾಯತಿಯಲ್ಲಿ ದಾಖಲ ಮಾಡಲ್ಪಟ್ಟ ದಾವೆಗಳ ರಜಿಸ್ಟರು

| ದಾವೆಯ ನಂಬರು | ಅರ್ಜಿಯ ತಾರೀಖು | ವಾದಿಯ ಹೆಸರು, ವಯಸ್ಸು, ಜಾತಿ, ತಂದೆಯ ಅಥವಾ ಗಂಡನ ಹೆಸರು ಮತ್ತು ವಾಸಸ್ಥಳ, ಅವನ ಜಬಾನಿಯ ಸಾರಾಂಶ, ಅವನ ಸಹಿ ಅಥವಾ ಹೆಬ್ಬಟ್ಟಿನ ಗುರುತು ಮತ್ತು ತಾರೀಖು ಮತ್ತು ಚೆಅರಮನ್ನನ ಅಥವಾ ಸಭಾಸದನ ಸಹಿ (ಕಲಮು ೬೦) | ಸಭೆಗಾಗಿ ಗೊತ್ತುಪಡಿಸಿದ ತಾರೀಖು, ವೇಳೆ ಮತ್ತು ಸ್ಥಳ (ಕಲಮು ೬೧) | ಪುರಾವೆಯನ್ನು ಹಾಜರ ಮಾಡುವದಕ್ಕೆ ಮತ್ತು ದಾವೆಯ ವಿಚಾರಣೆ ಮಾಡುವದಕ್ಕೆ ಗೊತ್ತುಪಡಿಸಿದ ತಾರೀಖು, ವೇಳೆ ಮತ್ತು ಸ್ಥಳ (ಕಲಮು ೬೨) | ವಾದಿಯ ಪುರಾವೆಯ ಸಾರಾಂಶ ಮತ್ತು ಅವನ ಸಾಕ್ಷಿಗಾರರ ಹೆಸರುಗಳು ಮತ್ತು ಅವರ ಪುರಾವೆಯ ಸಾರಾಂಶ | ಪ್ರತಿವಾದಿಯ ಅಥವಾ ಅವನ ಪ್ರತಿನಿಧಿಯ ಹೆಸರು, ವಯಸ್ಸು, ತಂದೆಯ ಅಥವಾ ಗಂಡನ ಹೆಸರು, ವಾಸಸ್ಥಳ; ಅವನ ಜಬಾನಿಯ ಸಾರಾಂಶ ಮತ್ತು ಅವನ ಸಾಕ್ಷಿದಾರರ ಹೆಸರಿನೊಂದಿಗೆ ಅವರ ಪುರಾವೆಯ ಸಾರಾಂಶ | ಮಾಡಲ್ಪಟ್ಟ ಹುಕುಮನಾಮೆಯು ಅಥವಾ ಅಜ್ಞೆಯು ಮತ್ತು ಅದರಬಗ್ಗೆ ಸಂಕ್ಷಿಪ್ತ ಕಾರಣಗಳು ಮತ್ತು ಹುಕುಮನಾಮೆಯ ಬಾಪ ಯಾವುದೇ ಹಣ ಇದ್ದರೆ ಇತರ ವಿಷಯಗಳೊಂದಿಗೆ ಅಂಥ ಹಣ ಹುಕುಮನಾಮೆಯ ಅಥವಾ ಅಜ್ಞೆಯ ತಾರೀಖು (ನಿಯಮ ೧೬) | ಹುಕುಮನಾಮೆಯು ಪೂರ್ಣವಾಗಿ ಅಥವಾ ಅಂಶತಃ ಫೇಡಾದ ಅಥವಾ ಸರಿಗೊಳಿಸಲ್ಪಟ್ಟ ತಾರೀಖು ಮತ್ತು ರೀತಿ (ಕಲಮು ೮೦) | ಜಿಲ್ಹಾ ಕೋರ್ಟಿನಿಂದ ಈಚೆಗೆ ಮಾಡಲ್ಪಟ್ಟ ಯಾವುದೇ ಅಜ್ಞೆಯು (ಕಲಮು ೮೭) | ಜಿಲ್ಹಾ ಕೋರ್ಟು ದಾವೆಯನ್ನು ವರ್ಗಾಯಿಸಿದ್ದು (ಕಲಮು ೮೭—ಅ) |
|---|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ |
| | | | | | | | | | | |

ಹುಕುಮನಾಮೆಯನ್ನು/ಅಜ್ಞೆಯನ್ನು ಮಾಡುವ ನ್ಯಾಯಪಂಚಾಯತಿಯ ಸಭಾಸದರ ಸಹಿಗಳು ಅಥವಾ ಹೆಬ್ಬಟ್ಟಿನ ಗುರುತುಗಳು.

ಚೆಅರಮನ್ನನ ಸಹಿ.

ಮತಭೇದವುಳ್ಳ (ಒಪ್ಪದ) ನ್ಯಾಯಪಂಚಾಯತಿಯ ಸಭಾಸದರ ಸಹಿಗಳು ಅಥವಾ ಹೆಬ್ಬಟ್ಟಿನ ಗುರುತುಗಳು ೧೬ನೇ ನಿಯಮದ ಪ್ರಕಾರ ಪಕ್ಷಕಾರರ ಸಹಿಗಳು ಅಥವಾ ಹೆಬ್ಬಟ್ಟಿನ ಗುರುತುಗಳು.

# ನಮೂನೆ ೩

೧೧ನೇ ನಿಯಮವನ್ನು ನೋಡಿರಿ

| ಖಟ್ಲೆಯ ನಂಬರು / ಅರ್ಜಿಯ ತಾರೀಖು | ಫಿರ್ಯಾದಿಯ ಹೆಸರು, ವಯಸ್ಸು, ಜಾತಿ, ತಂದೆಯ ಅಥವಾ ಗಂಡನ ಹೆಸರು ಮತ್ತು ವಾಸಸ್ಥಳ, ಅವನ ಜಬಾನಿಯ ಸಾರಾಂಶ, ಅವನ ಸಹಿ ಅಥವಾ ಹೆಬ್ಬಟ್ಟಿನ ಗುರುತು ಮತ್ತು ತಾರೀಖು ಮತ್ತು ಚೆಆರಮನ್ನನ ಅಥವಾ ಸಭಾಸದನ ಸಹಿ ( ಕಲಮು ೬೦ ) | ಸಭೆಗಾಗಿ ಗೊತ್ತುಪಡಿಸಿದ ತಾರೀಖು, ವೇಳೆ ಮತ್ತು ಸ್ಥಳ ( ಕಲಮು ೬೧ ) | ಖಟ್ಲೆಯ ವಿಚಾರಣೆ ಮಾಡುವ ಬಗ್ಗೆ ಗೊತ್ತು ಪಡಿಸಿದ ತಾರೀಖು, ವೇಳೆ ಮತ್ತು ಸ್ಥಳ ( ಕಲಮು ೬೩ ) | ಫಿರ್ಯಾದಿಯ ಮತ್ತು ಅವನ ಸಾಕ್ಷಿಗಾರರ ಹೆಸರುಗಳೊಂದಿಗೆ ಅವರ ಪುರಾವೆಯ ಸಾರಾಂಶ | ಆರೋಪಿಯ ಅಥವಾ ಅವನ ಪ್ರತಿನಿಧಿಯ ಹೆಸರು, ವಯಸ್ಸು, ಜಾತಿ, ತಂದೆಯ ಅಥವಾ ಗಂಡನ ಹೆಸರು, ಮತ್ತು ವಾಸಸ್ಥಳ ಮತ್ತು ಅವನ ಜಬಾನಿಯ ಸಾರಾಂಶ, ಅವನ ಸಹಿ ಅಥವಾ ಹೆಬ್ಬಟ್ಟಿನ ಗುರುತು ಮತ್ತು ತಾರೀಖು ಮತ್ತು ಅವನ ಸಾಕ್ಷಿದಾರರು ಕೊಟ್ಟ ಪುರಾವೆಯ ಸಾರಾಂಶ; ಅವರ ಹೆಸರು ಸಹಿತವಾಗಿ | ಸಂಕ್ಷಿಪ್ತ ಕಾರಣಗಳೊಂದಿಗೆ, ವಿಧಿಸಲ್ಪಟ್ಟ ಆಜ್ಞೆಗಳು; ಆಜ್ಞೆಯ ತಾರೀಖು ( ನಿಯಮ ೧೬ ) | ದಂಡವನ್ನು ಅಥವಾ ಪರಿಹಾರಧನವನ್ನು ವಸೂಲಮಾಡೋಣ ಮತ್ತು ತಾರೀಖು ( ಕಲಮು ೮೫ ) | ಜಿಲ್ಹಾ ಮ್ಯಾಜಿಸ್ಟ್ರೇಟನಿಂದ ಈಚೆಗೆ ಮಾಡಲ್ಪಟ್ಟ ಯಾವದೇ ಆಜ್ಞೆ ( ಕಲಮು ೮೬ ) | ಜಿಲ್ಹಾ ಮ್ಯಾಜಿಸ್ಟ್ರೇಟನು ಖಟ್ಲೆಯನ್ನು ವರ್ಗಾಯಿಸಿದ್ದು ( ಕಲಮು ೮೬—ಬ ) |
|---|---|---|---|---|---|---|---|---|---|
| | ೩ | | | | ೭ | ೮ | ೯ | ೧೦ | ೧೧ |

ಆಜ್ಞೆಗಳನ್ನು ಮಾಡುವ ನ್ಯಾಯಪಂಚಾಯತದ ಸಭಾಸದರ ಸಹಿಗಳು ಅಥವಾ ಹೆಬ್ಬಟ್ಟಿನ ಗುರುತುಗಳು.

ಮತಭೇದವುಳ್ಳ (ಒಪ್ಪದ) ನ್ಯಾಯಪಂಚಾಯತಿಯ ಸಭಾಸದರ ಸಹಿಗಳು ಅಥವಾ ಹೆಬ್ಬಟ್ಟಿನ ಗುರುತುಗಳು.

ಚೆಆರಮನ್ನನ ಸಹಿ.

೧೬ನೇ ನಿಯಮದ ಪ್ರಕಾರ ಪಕ್ಷಕಾರರ ಸಹಿಗಳು ಅಥವಾ ಹೆಬ್ಬಟ್ಟಿನ ಗುರುತುಗಳು.

# ನಮೂನೆ ಳ.

## (೧೮ನೇ ನಿಯಮವನ್ನು ನೋಡಿರಿ.)

ಪ್ರತಿವಾದಿಗೆ ಅಥವಾ ಆರೋಪಿಗೆ ಸಮನ್ಸ.

ದಾವೆ/ಖಟ್ಲೆಯ ನಂಬರು.

ಪಕ್ಷಕಾರರ ಹೆಸರುಗಳು.

ದಾವೆ/ಫಿರ್ಯಾದಿಯ ಸ್ವರೂಪ.

ದಾಖಲ ಮಾಡಿದ ತಾರೀಖು.

ಈ ದಾವೆ/ಖಟ್ಲೆಯು. .ಲ್ಲಿ(ಸ್ಥಳ).

ದಿವಸ (ತಾರೀಖು ಮತ್ತು ವೇಳೆ)...........ಗ್ರಾಮದ ನ್ಯಾಯಪಂಚಾಯತಿಯಿಂದ ವಿಚಾರಣೆ ಯಾಗತಕ್ಕದ್ದಿರುವದರಿಂದ.......................... ನೀವು, ನಿಮ್ಮ ದಾವೆ/ಖಟ್ಲೆ ಯಲ್ಲಿ ನಿಮ್ಮ ಸಮರ್ಥನೆಮಾಡಿಕೊಳ್ಳಲು ದಸ್ತೈವಜುಗಳು ಯಾವದಾದರೂ ಇದ್ದರೆ ಅವುಗಳ ಮತ್ತು ನಿಮ್ಮ ಸಾಕ್ಷಿದಾರರ ಸಹಿತ ಹಾಜರಿರಬೇಕೆಂದು ಈ ಮೂಲಕ ನಿಮಗೆ ಆಜ್ಞೆ ಮಾಡಿದೆ.

ತಾರೀಖು. ಚೇಅರಮನ್ನನ ಸಹಿ.

# ನಮೂನೆ ೫

(೧೮ನೇ ನಿಯಮವನ್ನು ನೋಡಿರಿ)

## ಸಾಕ್ಷಿದಾರರಿಗೆ ಸಮನ್ಸು.

ದಾವೆ/ಖಟ್ಲೆಯ ನಂಬರು_

ಪಕ್ಷಕಾರರ ಹೆಸರುಗಳು_

ದಾವೆ/ಫಿರ್ಯಾದಿಯ ಸ್ವರೂಪ_

ದಾಖಲ ಮಾಡಿದ ತಾರೀಖು

_ನೀವು ಮೇಲಿನ ದಾವೆ/ಖಟ್ಲೆಯಲ್ಲಿ ಪುರಾವೆಯನ್ನು ಕೊಡ/ಕೆಳಗೆ ಹೇಳಿದ ದಸ್ತೈವಜನ್ನು ಹಾಜರ ಮಾಡ

ಬೇಕಾದ್ದರಿಂದ______ಲ್ಲಿ (ಸ್ಥಳ)______ದಿವಸ (ತಾರೀಖು ಮತ್ತು ವೇಳೆ)

_ಗ್ರಾಮದನ್ಯಾಯಪಂಚಾಯತಿಯ ಮುಂದೆ ಹಾಜರಾಗಲಿಕ್ಕೆ/ಮೇಲೆ ಹೇಳಿದ ದ. ಹಾ. ಮಾಡಲಿಕ್ಕೆ

ಈ ಮೂಲಕ ನಿಮಗೆ ಆಜ್ಞೆ ಮಾಡಿದೆ.

ತಾರೀಖು__________ ಚೆಅರಮನ್ನನ ಸಹಿ.

**ಪಂಚಾಯತಿಯ ಸೆಕ್ರೆಟರಿಯು, ಪಂಚಾಯತಿಯ ಜ್ಯುಡಿಸಿಯಲ್ ಕಾರಕೂನನೆಂದು ಕೆಲಸಮಾಡುವಾಗ್ಗೆ, ಅವನು ಮಾಡಬೇಕಾದ ಇತರ ಕೆಲಸಗಳನ್ನು ಗೊತ್ತುಮಾಡುವ ನಿಯಮವು.**

ಗವ್ಹರ್ನಮೆಂಟ ನೋಟೀಫಿಕೇಶನ ಜನರಲ್ ಡಿಪಾರ್ಟಮೆಂಟ ನಂ. ಎಸ್. ೧೭೪-೧೧-೧ ತಾರೀಖು ೧೯ನೇ ಜನೇವರಿ ೧೯೪೦ (ಜನರಲ್ ಡಿಪಾರ್ಟಮೆಂಟಿನ ನಂ ೧೭೪-೧೧-೧ ತಾರೀಖು ೨೦ನೇ ಸಪ್ಟಂಬರ ೧೯೪೩ನೇ ಇಸ್ವಿಯ ಗವ್ಹರ್ನಮೆಂಟ ನೋಟೀಫಿಕೇಶನದಿಂದ ತಿದ್ದುಪಡೆಯಾದದ್ದು).

೧೯೩೩ನೇ ಇಸ್ವಿಯ ಮುಂಬಯಿ ಗ್ರಾಮಪಂಚಾಯತಗಳ ಕಾನೂನಿನ (೧೯೩೩ನೇ ಇಸ್ವಿಯ ಮುಂಬಯಿ ಕಾನೂನ ನಂ ೬) ೧೦೮ನೇ ಕಲಮಿನ ೧ನೇ ಉಪಕಲಮಿನ (ಗ ಗ) ರಕಮಿನನ್ವಯ ದೊರೆತ ಅಧಿಕಾರವನ್ನು ಉಪಯೋಗಿಸಿ, ಮುಂಬಯಿ ಸರಕಾರದವರು ಈ ಕೆಳಗಿನ ನಿಯಮವನ್ನು ಮಾಡಿರುವರು:—

ಪಂಚಾಯತಿಯ ಸೆಕ್ರೆಟರಿಯು ಪಂಚಾಯತಿಯ ಜ್ಯುಡಿಸಿಯಲ್ ಕಾರಕೂನನೆಂದು ಕೆಲಸಮಾಡುವಾಗ್ಗೆ, ೧೯೩೩ನೇ ಇಸ್ವಿಯ ಮುಂಬಯಿ ಗ್ರಾಮಪಂಚಾಯತಗಳ ಕಾನೂನಿನ (೧೯೩೩ನೇ ಇಸ್ವಿಯ ಮುಂಬಯಿ ಕಾನೂನು ನಂ ೬) ೧೦೮ನೇ ಕಲಮಿನ ೧ನೇ ಉಪಕಲಮಿನ (ಗ ಗ) ರಕಮಿನನ್ವಯ ಅವನು ಮಾಡಬೇಕಾದ ಇತರ ಕೆಲಸಗಳನ್ನು ಗೊತ್ತುಮಾಡುವ ನಿಯಮವು.

ಪಂಚಾಯತಿಯ ಸೆಕ್ರೆಟರಿಯು ನ್ಯಾಯಪಂಚಾಯತಿಯ ಜ್ಯುಡಿಸಿಯಲ್ ಕಾರಕೂನನೆಂದು ಕೆಲಸಮಾಡುವಾಗ್ಗೆ ಈ ಕೆಳಗಿನ ಕೆಲಸಗಳನ್ನು ಮಾಡಬೇಕು:—

(ಅ) ಅವನು, ನ್ಯಾಯಪಂಚಾಯತಿಯ ಮುಂದೆ ದಾಖಲ ಮಾಡಲ್ಪಟ್ಟ, ವಿಚಾರಿಸಲ್ಪಟ್ಟ ಮತ್ತು ನಿರ್ಣಯಿಸಲ್ಪಟ್ಟ ದಾವೆಗಳ ಮತ್ತು ಪ್ರಕರ್ಣಗಳ ಮತ್ತು ಖಟ್ಲೆಗಳ ರಜಿಸ್ಟರುಗಳನ್ನು ೧೯೪೦ನೇ ಇಸ್ವಿಯ ಮುಂಬಯಿ ನ್ಯಾಯಪಂಚಾಯತಿಯ ನಿಯಮಗಳನ್ವಯ ಗೊತ್ತುಪಡಿಸಿದ ನಮೂನೆಗಳಲ್ಲಿ ಇಡಬೇಕು.

(ಅ) ಅವನು, ನ್ಯಾಯಪಂಚಾಯತಿಯ ಮುಂದೆ ದಾಖಲ ಮಾಡ ಲ್ಪಟ್ಟ ದಾವೆಗಳ ಮತ್ತು ಖಟ್ಲೆಗಳ ಮಾಸಿಕವರದಿಯನ್ನು, ಈ ನಿಯಮಕ್ಕೆ ಜೋಡಿಸಿದ ನಮೂನೆಯಲ್ಲಿ, ಅನುಕ್ರಮವಾಗಿ ಜಿಲ್ಹಾ ಕೋರ್ಟಿಗೆ ಮತ್ತು ಜಿಲ್ಹಾ ಮ್ಯಾಜಿಸ್ಟ್ರೇಟನಿಗೆ ಕಳಿಸಬೇಕು.

(ಬ) ಅವನು, ಗ್ರಾಮಪಂಚಾತಿಗೆ ಅದರ ಲೆಕ್ಕದಲ್ಲಿ ಸಮಾವೇಶ ಮಾಡುವದಕ್ಕಾಗಿ,

(೧) ಸದರ ಆಕ್ಟಿನ ೪೫ನೇ, ೪೬ನೇ ಅಥವಾ ೪೮ನೇ ಕಲಮಿನನ್ವಯ ದಂಡ ಅಥವಾ ಪರಿಹಾರಧನವೆಂದು ವಸೂಲಾದ ಎಲ್ಲ ರಕಮುಗಳು;

(೨) ಗ್ರಾಮದ ಫಂಡಿಗೆ ಜಮಾ ಮಾಡಬೇಕೆಂದು ಕೋರ್ಟು ಆಜ್ಞೆ ಮಾಡಿದ ಇತರ ಎಲ್ಲ ರಕಮುಗಳು;

(೩) ಸದರ ಆಕ್ಟಿನ ೫೯ನೇ ಕಲಮಿನನ್ವಯ ದಾವೆಗಳನ್ನು ಮತ್ತು ಖಟ್ಲೆಗಳನ್ನು ದಾಖಲಮಾಡುವದಕ್ಕಾಗಿ ಕೂಡಿಸಿದ ಫೀಗಳು; ಮತ್ತು

(೪) ನ್ಯಾಯಪಂಚಾಯತಿಗೆ, ತನ್ನ ನ್ಯಾಯದಾನದ ಕೆಲಸದಲ್ಲಿ ಆದ ವೆಚ್ಚ.

ಇವುಗಳ ಬಗ್ಗೆ, ವಿವರಗಳನ್ನು ಪೂರೈಸಬೇಕು.

(ಕ) ಅವನು ನ್ಯಾಯಪಂಚಾಯತಿಯ ಆಜ್ಞೆಗಳನ್ನು ಜಾರಿಯಲ್ಲಿ ತರಬೇಕು.

(ಡ) ಅವನು, ನ್ಯಾಯಪಂಚಾಯತಿಯ ಕೆಲಸಗಳ ಸಂಬಂಧದಲ್ಲಿ ರಾಜ್ಯ ಸರಕಾರದವರು ಅಥವಾ ನ್ಯಾಯಪಂಚಾಯತಿಯು ಅವನಿಗೆ ಒಪ್ಪಿಸ ಬಹುದಾದ ಇಂಥ ಇತರ ಕೆಲಸಗಳನ್ನು ಮಾಡಬೇಕು.

## ನಮೂನೆ

(ಅಅ) ನಿಯಮದಲ್ಲಿ ಉಲ್ಲೇಖಮಾಡಿದ ನಮೂನೆ.

............ನ್ಯಾಯಪಂಚಾಯತಿಯ ಮುಂದೆ ೧೯೫ ನೇ ಇಸ್ವಿಯ............ ತಿಂಗಳಲ್ಲಿ ದಾಖಲಮಾಡಲ್ಪಟ್ಟ $\frac{\text{ದಾವೆಗಳ}}{\text{ಖಟ್ಲೆಗಳ}}$ ವರದಿ.

ನ್ಯಾಯಪಂಚಾಯತಿಯ ಮುಂದೆ ದಾಖಲ ಮಾಡಲ್ಪಟ್ಟ $\frac{\text{ದಾವೆಗಳ}}{\text{ಖಟ್ಲೆಗಳ}}$ ಸಂಖ್ಯೆ............

| ತಿಂಗಳಿನ ಪ್ರಾರಂಭಕ್ಕೆ ಚಾಲೂ ಇರುವ | ತಿಂಗಳಲ್ಲಿ ದಾಖಲ ಮಾಡಲ್ಪಟ್ಟವು | ತಿಂಗಳಲ್ಲಿ ನಿಕಾಲೆ ಮಾಡಲ್ಪಟ್ಟವು | ತಿಂಗಳ ಕೊನೆಗೆ ಬಾಕಿ ಉಳಿದ |
|---|---|---|---|
| ೧ | ೨ | ೩ | ೪ |
| | | | |

**೧೯೩೩ನೇ ಇಸವಿಯ ಮುಂಬಯಿ ಗ್ರಾಮಪಂಚಾಯತಿ ಕಾನೂನಿನ ೨೩ನೇ ಕಲಮಿನನ್ವಯ, ಸರಪಂಚನ ಅಥವಾ ಉಪಸರಪಂಚನ ಅಥವಾ ಸಭಾಸದನ ಸ್ಥಾನವು ಬರಿದಾದ ಬಗ್ಗೆ ನೋಟೀಸನ್ನು ಕೊಡಬೇಕಾದ ರೀತಿಯನ್ನು ನಿಯಮನಗೊಳಿಸುವ ಸಂಬಂಧ ೧೦೮ನೇ ಕಲಮಿನ ೧ನೇ ಉಪಕಲಮಿನ ( ಡ ) ರಕಮಿನನ್ವಯ ಮಾಡಲ್ಪಟ್ಟ ನಿಯಮವು.**

೧) ಸರಪಂಚನ, ಉಪಸರಪಂಚನ ಅಥವಾ ಸಭಾಸದನ ಸ್ಥಾನವು ಬರಿದಾದ ಬಗ್ಗೆ, ಸರಪಂಚನು, ಸರಪಂಚನು ಗೈರಹಾಜರಿದ್ದರೆ ಉಪಸರಪಂಚನು ಮತ್ತು ಸರಪಂಚ ಮತ್ತು ಉಪಸರಪಂಚ ಇವರಿಬ್ಬರೂ ಗೈರಹಾಜರಿದ್ದರೆ ಸೆಕ್ರೆಟರಿಯು ಇಂಥ ಸ್ಥಾನವು ಬರಿದಾದ ೭ ದಿವಸಗಳೊಳಗಾಗಿ ಕಲೆಕ್ಟರನಿಗೆ ನೋಟೀಸನ್ನು ಕೊಡಬೇಕು. ಸರಪಂಚನ ಸ್ಥಾನವು ಬರಿದಾಗಿದ್ದರೆ ನೋಟೀಸಿನ ಪ್ರತಿಯೊಂದನ್ನು ಜಿಲ್ಹಾ ಲೋಕಲ್‌ಬೋರ್ಡಿನ ಅಧ್ಯಕ್ಷನಿಗೆ ಕಳುಹಿಸಬೇಕು.

೨) ಆ ನೋಟೀಸಿನಲ್ಲಿ ಸ್ಥಾನವು ಬರಿದಾದದ್ದರ ಕಾರಣವನ್ನು ವಿವರಿಸಬೇಕು. ಮತ್ತು ಮರಣ ಅಥವಾ ರಾಜೀನಾಮೆ ಈ ಕಾರಣವನ್ನು ಬಿಟ್ಟು ಉಳಿದ ಯಾವದೇ ಕಾರಣದಿಂದ ಸ್ಥಾನವು ಬರಿದಾಗಿದ್ದರೆ, ಬರಿದಾಗಲು ಕಾರಣವಾದ ಪರಿಸ್ಥಿತಿಯನ್ನು ನೋಟೀಸಿನಲ್ಲಿ ವಿವರಿಸಬೇಕು.

**೧೯೩೩ನೇ ಇಸವಿಯ ಮುಂಬಯಿ ಗ್ರಾಮಪಂಚಾಯತಿ ಕಾನೂನಿನ ೩೨ನೇ ಕಲಮಿನನ್ವಯ, ಪಂಚಾಯತಿಗೆ ದೊರೆತ ಎಲ್ಲ ಫಂಡುಗಳನ್ನು ಮತ್ತು ಅದಕ್ಕೆ ದೊರೆಯತಕ್ಕ ಎಲ್ಲ ಹಣಗಳನ್ನು ಯಾವ ರೀತಿಯಿಂದ ತಾಬೆಯಲ್ಲಿಡಬೇಕೆಂಬುದನ್ನು ಗೊತ್ತುಪಡಿಸುವ ಬಗ್ಗೆ ೧೦೮ನೇ ಕಲಮಿನ ೧ನೇ ಉಪಕಲಮಿನ (ಈ) ರಕಮಿನನ್ವಯ ಮಾಡಲ್ಪಟ್ಟ ನಿಯಮವು.**

೧. ೧) ಪ್ರಚಲಿತ (ಚಾಲೂ) ವೆಚ್ಚಕ್ಕಾಗಿ ೫೦ ರೂಪಾಯಿ ಮಿಕ್ಕದಷ್ಟು ಹಣವನ್ನು ಕಾಯಮ ಮುಂಗಡ• ಹಣ (ಪರ್ಮನಂಟ ಅಡ್ವಾನ್ಸ) ವೆಂದು ಇಡಲು ಪಂಚಾಯತಿಯು ತನ್ನ ಸೆಕ್ರೆಟರಿಗೆ ಅಪ್ಪಣೆ ಕೊಡಬಹುದು.

೨) ಸರಪಂಚನು ಅಥವಾ ಅವನ ಗೈರಹಾಜರಿಯಲ್ಲಿ ಉಪ ಸರಪಂಚನು, ಪ್ರತಿ ತಿಂಗಳ ಕೊನೆಗೆ ಸೆಕ್ರೆಟರಿಯ ಕಾಯಮ ಮುಂಗಡ ಹಣದ ಲೆಖ್ಖವನ್ನು ತಪಾಸ ಮಾಡಬೇಕು. ಮತ್ತು ಬಾಕಿ ಇದ್ದ ರಕಮು ಸರಿ ಇರುವದೋ ಹೇಗೆ ಎಂಬುದನ್ನು ನೋಡಬೇಕು

೨. ೧) ಪಂಚಾಯತಿಯು:—

(i) ಕಲೆಕ್ಟರನು ಮಂಜೂರಮಾಡಬಹುದಾದ ಬ್ಯಾಂಕಿನಲ್ಲಿ, ೧ನೇ ನಿಯಮದ ೧ನೇ ಉಪನಿಯಮದನ್ವಯ ಸೆಕ್ರೆಟರಿಯ ಕಡೆಗೆ ಇಡುವದಕ್ಕೆ ಅಪ್ಪಣೆಕೊಡಲ್ಪಟ್ಟ ಹಣವನ್ನು ಹೊರ್ತುಪಡಿಸಿ ಎಲ್ಲ ಫಂಡುಗಳನ್ನು ಠೇವು ಇಡಬಹುದು.

(ii) ಇಂಥ ಎಲ್ಲ ಫಂಡುಗಳನ್ನು ೧೯೦೧ನೇ ಇಸವಿಯ ಮುಂಬಯಿ ಡಿಸ್ಟ್ರಿಕ್ಟ ಮುನಸಿಪಲ್ ಕಾನೂನಿನ ೩ನೇ ಕಲಮಿನ ೧೮ನೇ ರಕಮಿನಲ್ಲಿ ವಿವರಿಸಿದ ಪಬ್ಲಿಕ ಸೆಕ್ಯುರಿಟಿಗಳಲ್ಲಿ ಪಂಚಾಯತಿಯ ಹೆಸರಿನಲ್ಲಿ ತೊಡಗಿಸಬಹುದು. ಮತ್ತು ಕಾಲಕಾಲಕ್ಕೆ ಅವಶ್ಯವಿದ್ದಪ್ರಕಾರ ಇಂಥ ಸೆಕ್ಯುರಿಟಿಗಳನ್ನು ಕೊಟ್ಟುಬಿಡಬಹುದು. (ವಿಲೆವಾಟಮಾಡಬಹುದು).

೨) ಇಂಥ ಎಲ್ಲ ಫಂಡುಗಳು ೧ನೇ ಉಪನಿಯಮದನ್ವಯ ಠೇವು ಇಡಲ್ಪಡದಿದ್ದರೆ ಅಥವಾ ಸೆಕ್ಯುರಿಟಿಗಳಲ್ಲಿ ತೊಡಗಿಸಲ್ಪಟ್ಟಿರದಿದ್ದರೆ, ಇಂಥ ಫಂಡುಗಳ ಹಣವು ೧೦೦ರೂಪಾಯಿಗಳನ್ನು ಮಿಕ್ಕದಿದ್ದರೆ ಪ್ರತಿ ತಿಂಗಳ ಮೊದಲನೇ ವಾರದಲ್ಲಿ ಮತ್ತು ಇಂಥ ಫಂಡುಗಳ ಹಣವು ೧೦೦ ರೂಪಾಯಿಗಿಂತ ಅಧಿಕವಾದರೆ ಅನುಕೂಲವಿದ್ದಷ್ಟು ಬೇಗನೆ ತಾಲೂಕ ಸಬ್ ಟ್ರೆಝರಿಯಲ್ಲಿ ಠೇವು ಇಡಲ್ಪಡಬೇಕು.

## ೮೯ನೇ ಕಲಮಿನ ೨ನೇ ಉಪಕಲಮಿನ ೪ನೇ ರಕಮಿನನ್ವಯ ವಸ್ತುಗಳ ಮಾರಾಟದ ಮೇಲೆ ಕರ ಕೂಡಿಸುವ ಬಗ್ಗೆ ನಿಯಮವು.

೧) ಪೇಟೆಯ ಹದ್ದಿಯಲ್ಲಿ ಅಥವಾ ಗ್ರಾಮದ ಗಡಿಯಲ್ಲಿ ನೆರೆದ ಜಾತ್ರೆಯಲ್ಲಿ ಮಾರಾಟಕ್ಕಾಗಿ ಸರಕು ( ವಸ್ತು ) ಗಳನ್ನಿಟ್ಟ ಪ್ರತಿಯೊಬ್ಬ ಮನುಷ್ಯನು ಮುಂದೆ ಗೊತ್ತುಪಡಿಸಿದ ಪ್ರಕಾರ ಕರವನ್ನು ಕೊಡಬೇಕು.

೨) ೧೦೮ (೧)ನೇ ಕಲಮಿನ (ನ) ರಕಮಿನನ್ವಯ ರಾಜ್ಯ ಸರಕಾರದವರು ಗೊತ್ತುಪಡಿಸಿದ ದರವನ್ನು ಮೀರದಂತೆ ಉಪಯೋಗಿಸಲು ( ಭೋಗವಟೆ ಮಾಡಲು ) ಅಪ್ಪಣೆಕೊಡಲ್ಪಟ್ಟ ಸ್ಥಳದ ಆಕಾರಕ್ಕನುಸರಿಸಿ ಅಥವಾ ಮಾರಾಟಕ್ಕೆ ಇಡಲ್ಪಡುವ ವಸ್ತುಗಳ ಪರಿಮಾಣದ ಮೇಲಿಂದ ಪಂಚಾಯತವು ಹೇರತಕ್ಕ ದರವನ್ನು ನಿರ್ಧರಿಸಬೇಕು. ಮತ್ತು ಅದಕ್ಕಾಗಿ ಕಮಿಶನರರ ಮಂಜೂರಿಯನ್ನು ಪಡೆಯಬೇಕು.

೩) ಈ ಬಗ್ಗೆ ಪಂಚಾಯತಿಯಿಂದ ಅಧಿಕಾರ ಪಡೆದ ಮನುಷ್ಯನಿಗೆ ಬೇಡಿದ ಕೂಡಲೆ ಆ ಸ್ಥಳದಲ್ಲಿ ಕರವನ್ನು ಕೊಡಬೇಕು. ಮತ್ತು ಆ ಮನುಷ್ಯನು ನಿಯಮಗಳನ್ವಯ ಗೊತ್ತುಪಡಿಸಿದ ನಮೂನೆಯಲ್ಲಿ ಪಾವತಿಯನ್ನು ಕೊಡಬೇಕು.

## ೮೯ನೇ ಕಲಮಿನಲ್ಲಿ ವಿವರಿಸಿದ ಕರಗಳನ್ನು ಅಥವಾ ಫೀಗಳನ್ನು ಹೇರುವ ಸಂಬಂಧ ೯೦ನೇ ಕಲಮಿನನ್ವಯ ಪರಮಾವಧಿ ದರವನ್ನು ಗೊತ್ತುಪಡಿಸುವದಕ್ಕೆ ೧೦೮ (೧)ನೇ ಕಲಮಿನ ( ನ ) ರಕಮಿನನ್ವಯ ಮಾಡಿದ ನಿಯಮವು.

೮೯ನೇ ಕಲಮಿನನ್ವಯ ಹೇರಲ್ಪಡುವ ಕರಗಳ ಮತ್ತು ಫೀಗಳ ದರಗಳು ಕೆಳಗೆ ನಮೂದಿಸಿದ ದರಗಳಿಗಿಂತ ಅಧಿಕವಾಗಬಾರದು.

| | |
|---|---|
| ೧. ಭೂಮಿಗಳ ಮತ್ತು ಮನೆಗಳ ಒಡೆಯರ ಅಥವಾ ಭೋಗವಟಿ ಮಾಡುವವರ ಮೇಲೆ ಕರ— | ಪರಮಾವಧಿ ದರ. |
| ಅ) ಭೂಮಿಗಳ ಮತ್ತು ಕಟ್ಟಡಗಳ ಭಂಡವಲಿನ ಕಿಮ್ಮತ್ತಿನ (Capital value) ಮೇಲಿಂದ ಕೂಡ್ರಿಸುವ ಕರದ ಬಗ್ಗೆ. | ಭಂಡವಲಿನ ಕಿಮ್ಮತ್ತಿನ ಪ್ರತಿ ನೂರು ರೂಪಾಯಿಗೆ ಅಥವಾ ಅದರ ಭಾಗಕ್ಕೆ ರೂ. ೦—೮—೦ |
| ಬ) ಭೂಮಿಗಳ ಮತ್ತು ಕಟ್ಟಡಗಳ ಭಾಡಿಗೆಯ ಕಿಮ್ಮತ್ತಿನ ಮೇಲಿಂದ ಕೂಡ್ರಿಸುವ ಕರದ ಬಗ್ಗೆ | ವಾರ್ಷಿಕ ಭಾಡಿಗೆಯ ಕಿಮ್ಮತ್ತಿನ ಮೇಲೆ ೧೦೦ಕ್ಕೆ ೧೫. |
| ೨. ಯಾತ್ರಿಕರ ಮೇಲೆ ಕರ. | ಪ್ರತಿಯೊಬ್ಬ ಯಾತ್ರಿಕನಿಂದ ೬ ಆ. |
| ೩. ಜಾತ್ರೆ ಮತ್ತು ಉತ್ಸವಗಳ ಮೇಲೆ ಕರ. | ಅ) ಅಂಗಡಿ ಅಥವಾ ಚಪ್ಪರ (Booth) ಅಥವಾ ಮಳಿಗಿ (Stall) ಯ ಬಗ್ಗೆ ಉಪಯೋಗಿಸಲ್ಪಡುವ ೯ ಚೌರಸ ಫೂಟಿಗಿಂತ ಅಧಿಕವಿಲ್ಲದ ಪ್ರತಿ |

ಯೊಂದು ಪ್ಲಾಟಿಗೆ ಜಾತ್ರೆ ಅಥವಾ ಉತ್ಸವದ ಅವಧಿಗಾಗಿ ೪ ಆಣೆ, ಮತ್ತು ೯ ಚೌರಸ ಫೂಟಿನ ಹೆಚ್ಚಿನ ಪ್ಲಾಟಿನ ಬಗ್ಗೆ ಅಥವಾ ಅದರ ಭಾಗಕ್ಕಾಗಿ ೬ ಪೈ.

ಬ) ಸಿನೇಮಾ, ಸರ್ಕಸ ಅಥವಾ ಇತರ ಮನರಂಜನೆಗಳಿಗಾಗಿ ತೆಗೆದುಕೊಂಡ ಸ್ಥಳಗಳಿಗಾಗಿ ಒಂದು ದಿವಸಕ್ಕೆ ೧ ಎಕರೆಗೆ ೫೦ ರೂಪಾಯಿ.

೪. ವಸ್ತುಗಳ ಮಾರಾಟಗಳ ಮೇಲಿನ ಕರ.

ಅ) ಉಪಯೋಗಿಸಲ್ಪಡುವ (ಭೋಗವಟಿಯಲ್ಲಿರುವ) ಪ್ಲಾಟಿನ ಕ್ಷೇತ್ರಫಲದ ಮೇಲಿಂದ ಕರವನ್ನು ಹೇರತಕ್ಕದ್ದೆಂದು ಪಂಚಾಯತಿಯು ನಿರ್ಧರಿಸಿದರೆ, ೩ (ಅ) ದಲ್ಲಿ ಹೇಳಿದಂತೆ ದರವಿರಬೇಕು. ಆದರೆ ಅದು ಪ್ರತಿದಿವಸಕ್ಕೆ ಇರಬೇಕು.

ಬ) ಮಾರಾಟಕ್ಕೆಂದು ಇಡಲ್ಪಟ್ಟ ವಸ್ತುಗಳ ಪರಿಮಾಣದ ಮೇಲಿಂದ ಒಂದು ದರದಂತೆ ಕರವನ್ನು ಕೊಡತಕ್ಕದ್ದೆಂದು ಪಂಚಾಯತಿಯು ನಿರ್ಧರಿಸಿದರೆ, ಪರಮಾವಧಿ ದರವು ಪ್ರತಿದಿವಸಕ್ಕೆ ಈ ಕೆಳಗಿನಂತೆ ಇರಬೇಕು.

೧) ಕಾಯಿಪಲ್ಲೆ ಅಥವಾ
ಹಣ್ಣು ಹಂಪಲ:—

| | | ರೂ.ಆ.ಪೈ |
|---|---|---|
| ಅ) | ಬುಟ್ಟಿಗೆ | ೦-೦-೬ |
| ಬ) | ಗೋಣಿಚೀಲಕ್ಕೆ | ೦-೧-೦ |
| ಕ) | ಚಕ್ಕಡಿಗೆ | ೦-೪-೯ |

೨) ಧಾನ್ಯ:—

| | | |
|---|---|---|
| ಅ) | ತಲೆವಜ್ಜೆಗೆ | ೦-೦-೬ |
| ಬ) | ಗೋಣಿಚೀಲಕ್ಕೆ | ೦-೨-೦ |
| ಕ) | ಚಕ್ಕಡಿಗೆ | ೦-೪-೦ |

೩) ಇತರ ವಸ್ತುಗಳು:—

| | | |
|---|---|---|
| ಅ) | ತಲೆವಜ್ಜೆಗೆ | ೦-೦-೬ |
| ಬ) | ಗೋಣಿಚೀಲಕ್ಕೆ | ೦-೨-೦ |
| ಕ) | ಚಕ್ಕಡಿಯ ವಜ್ಜೆಗೆ | ೦-೪-೦ |

**೫. ಆಕ್ಟ್ರಾಯ.**

| | | | ರೂ.ಆ.ಪೈ |
|---|---|---|---|
| ೧) ಅರಿವೆ:— | | | |
| ಅ) | ನೂಲಿನದು | ಪ್ರತಿ ಬಂಗಾಲಿ ಮಣಕ್ಕೆ | ೧-೦-೦ |
| ಬ) | ಉಣ್ಣೆಯದು | | ೧-೮-೦ |
| ಕ) | ರೇಶಿಮೆಯದು | ,, | ೩-೦-೦ |
| ೨) ಚಿಮಣಿ ಎಣ್ಣೆ:— | | ಪ್ರತಿ ಡಬ್ಬಿಗೆ | ೦-೨-೦ |
| ೩) ಕಟ್ಟಡಕ್ಕೆ ಬೇಕಾಗುವ ಸಾಮಾನುಗಳು:— | | | |
| ಅ) | ಸಾಗವಾನಿ ಕಟ್ಟಿಗೆ | ಪ್ರತಿ ಚಕ್ಕಡಿ ವಜ್ಜೆಗೆ (ಅಂದರೆ ೧೬ ಬಂಗಾಲಿಮಣ) | ೦-೮-೦ |
| ಬ) | ತಗಡು (Corrugatep iron sheets) | ಪ್ರತಿ ಬಂಗಾಲಿ ಮಣಕ್ಕೆ | ೦-೪-೦ |
| ಕ) | ಇತರ ಸಾಮಾನುಗಳು | | ೦-೪-೦ |

೬. ವಿವಾಹ, ದತ್ತಕ ಮತ್ತು ಮೇಜವಾನಿ (ಸುಖಭೋಜನ) ಗಳ ಮೇಲೆ ಕರ:—

| | |
|---|---|
| ಅ) ವಿವಾಹಗಳು— | ರೂ.ಆ.ಪೈ |
| ವರ್ಗ ೧ | ೫—೦—೦ |
| ವರ್ಗ ೨ | ೨—೦—೦ |
| ವರ್ಗ ೩ | ೧—೦—೦ |
| ವರ್ಗ ೪ | ೦—೮—೦ |
| ಬ) ದತ್ತಕಗಳು— | |
| ವರ್ಗ ೧ | ೫—೦—೦ |
| ವರ್ಗ ೨ | ೨—೦—೦ |
| ವರ್ಗ ೩ | ೧—೦—೦ |
| ವರ್ಗ ೪ | ೦—೮—೦ |
| ಕ) ಮೇಜವಾನಿಗಳ | |
| ವರ್ಗ ೧ | ೩—೦—೦ |
| ವರ್ಗ ೨ | ೨—೦—೦ |
| ವರ್ಗ ೩ | ೧—೦—೦ |
| ವರ್ಗ ೪ | ೦—೮—೦ |

೭. ಜನರಲ್ ಸ್ಯಾನಿಟರಿ ಸೆಸ್. ಮನೆಯ ಭಂಡವಲಿನ ಕಿಮ್ಮತ್ತು ೧೫೦೦ ರೂಪಾಯಿಗಳನ್ನು ಮಿಾರದಿದ್ದರೆ ಭಂಡವಲಿನ ಕಿಮ್ಮತ್ತಿನ ಮೇಲೆ ೧೦೦ ರೂಪಾಯಿಗೆ ವರ್ಷಕ್ಕೆ ೪ ಆಣೆ ಅಥವಾ ಮನೆಯ ವಾರ್ಷಿಕ ಭಾಡಿಗೆಯ ಕಿಮ್ಮತ್ತು ೪೫ ರೂಪಾಯಿಗಳನ್ನು ಮಿಾರದಿದ್ದರೆ, ೩ ರೂಪಾಯಿಗಳಿಗೆ ವರ್ಷಕ್ಕೆ ೪ ಆಣೆ ಮತ್ತು ಮನೆಯ ಭಂಡವಲಿನ ಕಿಮ್ಮತ್ತು

೧೫೦೦ ರೂಪಾಯಿಗಳಿಗಿಂತ ಅಧಿಕವಾದರೆ ವರ್ಷಕ್ಕೆ ೪ ರೂಪಾಯಿ ಅಥವಾ ಮನೆಯ ವಾರ್ಷಿಕ ಭಾಡಿಗೆಯ ಕಿಮ್ಮತ್ತು ೪೫ ರೂಪಾಯಿಗಳಿಗಿಂತ ಅಧಿಕವಾದರೆ ವರ್ಷಕ್ಕೆ ೪ ರೂಪಾಯಿ.

ಆದರೆ ಗೊತ್ತುಪಡಿಸುವದೇನಂದರೆ, ಮುಂಬಯಿ ಸಬರ್ಬನ ಜಿಲ್ಹೆಯಲ್ಲಿ ಇಂಥ ಕಿಮ್ಮತ್ತು ೧೬೦ ರೂಪಾಯಿಗಳಿಗಿಂತ ಅಧಿಕವಾದರೆ ಮನೆಯ ವಾರ್ಷಿಕ ಭಾಡಿಗೆಯ ಕಿಮ್ಮತ್ತಿನ ೧೦೦ಕ್ಕೆ ೩॥ಯಷ್ಟನ್ನು ಮೀರದ ದರದಂತೆ ಇಂಥ ಸೆಸ್ ಹೇರಲ್ಪಡಬಹುದು.

**೪. ಸ್ಪೇಶಲ್ ಸ್ಯಾನಿಟರಿ ಸೆಸ್.**

ಅ) ಮುಂಬಯಿ ಸಬರ್ಬನ ಜಿಲ್ಹೆಯಲ್ಲಿ—

ಪ್ರತ್ಯೇಕ ಪಾಯಖಾನೆಗೆ ಅಥವಾ ಶೌಚಕೂಪಕ್ಕೆ ಅಥವಾ ಪಾಯಖಾನೆಯನ್ನು ಇಲ್ಲವೆ ಶೌಚಕೂಪವನ್ನು ಉಪಯೋಗಿಸುವ ಪ್ರತ್ಯೇಕ ಕುಟುಂಬಕ್ಕೆ ವರ್ಷಕ್ಕೆ ೩೪ ರೂ. ಮತ್ತು ಅದೇ ಕುಟುಂಬವು ಉಪಯೋಗಿಸುವ ಪ್ರತಿಯೊಂದು ಹೆಚ್ಚಿನ ಪಾಯಖಾನೆಗೆ ಅಥವಾ ಶೌಚಕೂಪಕ್ಕೆ ೧೩ ರೂಪಾಯಿ.

ಬ) ಇತರ ಸ್ಥಳಗಳಲ್ಲಿ— ಪ್ರತ್ಯೇಕ ಪಾಯಖಾನೆಗೆ ಅಥವಾ ಶೌಚಕೂಪಕ್ಕೆ ಅಥವಾ ಪಾಯಖಾನೆಯನ್ನು ಅಥವಾ ಶೌಚಕೂಪವನ್ನು ಉಪಯೋಗಿಸುವ ಪ್ರತಿಯೊಂದು ಕುಟುಂಬಕ್ಕೆ ವರ್ಷಕ್ಕೆ ೧೨ ರೂಪಾಯಿ ಮತ್ತು ಅದೇ ಕುಟುಂಬವು ಉಪಯೋಗಿಸುವ ಪ್ರತಿಯೊಂದು ಹೆಚ್ಚಿನ ಪಾಯಖಾನೆಗೆ ಅಥವಾ ಶೌಚಕೂಪಕ್ಕೆ ೬ ರೂಪಾಯಿ.

**೯. ಪೇಟೆ ಮತ್ತು ಸಂತೆಗಳಮೇಲೆ ಫೀ.**

೯ ಚೌರಸ ಫೂಟಿಗಿಂತ ಅಧಿಕವಿಲ್ಲದ ಪ್ರತಿಯೊಂದು ಪ್ಲಾಟಿಗೆ ದಿನಕ್ಕೆ ೨ ಆಣೆ ಅಥವಾ ತಿಂಗಳಿಗೆ ೩ ರೂಪಾಯಿ ಮತ್ತು ೯ ಚೌರಸ ಫೂಟಿಗೆ ಹೆಚ್ಚಿನ ಪ್ಲಾಟಿನ ಬಗ್ಗೆ ಅಥವಾ ಅದರ ಭಾಗಕ್ಕೆ ದಿನಕ್ಕೆ ೧ ಆಣೆ ಅಥವಾ ತಿಂಗಳಿಗೆ ರೂ. ೧–೮–೦

**೧೦. ವಾಹನ ಮತ್ತು ಪ್ರಾಣಿಗಳ ಮೇಲೆ ಜಕಾತಿ.**

| ವಾಹನಗಳು— | ರೂ. ಪೈ. ಆ. |
| --- | --- |
| ಅ) ಎರಡು ಅಥವಾ ಅಧಿಕ ಪ್ರಾಣಿಗಳಿಂದ ಎಳೆಯಲ್ಪಡುವ ಪ್ರತಿಯೊಂದು ವಾಹನಕ್ಕೆ (ಚಕ್ಕಡಿ, ಟಾಂಗಾ, ಎಕ್ಕಾ) | ೦—೨—೦ |

| | | |
|---|---|---|
| ಬ) | ಒಂದೇ ಪ್ರಾಣಿಯಿಂದ ಎಳೆಯಲ್ಪಡುವ ಇಂಥ ಪ್ರತಿಯೊಂದು ವಾಹನಕ್ಕೆ | ೦–೧–೦ |
| ಕ) | ಪ್ರತಿಯೊಂದು ಬಾಯಸಿಕಲಾಗೆ (Bycicle) | ೦–೧–೦ |

**ಪ್ರಾಣಿಗಳು**

| | | |
|---|---|---|
| ಡ) | ಪ್ರತಿಯೊಂದು ಆನೆಗೆ | ೦–೪–೦ |
| ಈ) | ಪ್ರತಿಯೊಂದು ಒಂಟಿಗೆ | ೦–೨–೦ |
| ಫ) | ಪ್ರತಿಯೊಂದು ಎಮ್ಮೆ, ಕೋಣ, ಕುದುರೆ, ಹೆಣ್ಣು ಕುದುರೆ, ಕಸಿಮಾಡಿದ ಕುದುರೆ, ಹೇಸರಗತ್ತೆ, ಎತ್ತು, ಆಕಳು, ಆಕಳ ಮಣಕಕ್ಕೆ | ೦–೧–೦ |
| ಗ) | ಪ್ರತಿಯೊಂದು ಕುದುರೆ ಮರಿ, ಹೆಣ್ಣು ಕುದುರೆಮರಿ ಆಕಳಕರು, ಕತ್ತೆ, ಕುರಿ, ಆಡು, ನಾಯಿ, ಹಂದಿಗೆ | ೦–೦–೬ |

೧೯೩೩ನೇ ಇಸವಿಯ ಮುಂಬಯಿ ಗ್ರಾಮಪಂಚಾಯತ ಕಾನೂನಿನ ೯೧ (ಇ) ಕಲಮಿನನ್ವಯ ಪಂಚಾಯತಿಗೆ ಬರತಕ್ಕ ಕರಗಳನ್ನು ಮತ್ತು ಇತರ ಹಣಗಳನ್ನು ವಸೂಲಿ ಮಾಡುವದರ ಸಲುವಾಗಿ ಗ್ರಾಮಾಧಿಕಾರಿಗಳ ಪ್ರತಿ ಫಲವನ್ನು ಮತ್ತು ಅದನ್ನು ಕೊಡಬೇಕಾದ ರೀತಿಯನ್ನು ಗೊತ್ತುಮಾಡುವ ಸಂಬಂಧ ೧೦೮ನೇ ಕಲಮಿನ ೧ನೇ ಉಪಕಲಮಿನ (ಓ) ರಕಮಿನನ್ವಯ ಮಾಡಲ್ಪಟ್ಟ ನಿಯಮವು.

೧. ಕರಗಳನ್ನು ಮತ್ತು ಪಂಚಾಯತಿಗೆ ಬರತಕ್ಕ ಇತರ ಹಣಗಳನ್ನು ಮಾಡುವದರಸಲುವಾಗಿ ಗ್ರಾಮಾಧಿಕಾರಿಗಳಿಗೆ ಕೊಡತಕ್ಕ ಪ್ರತಿಫಲವು ವಸೂಲ ಮಾಡಲ್ಪಟ್ಟ ಪ್ರತಿಯೊಂದು ರೂಪಾಯಿಗೆ ಒಂದಾಣೆಯಂತಿರಬೇಕು. ಮತ್ತು ಅದನ್ನು ಈ ಕೆಳಗಿನಂತೆ ಹಂಚಬೇಕು.

| | ಪೈ | |
|---|---|---|
| ೧) ತಲಾಟಿ (ಕುಲಕರ್ಣಿ) | ೬ | ಪ್ರತಿಫಲವೆಂದು ಗಾಮಪಂಚಾಯತಿಯಿಂದ ವಸೂಲಮಾಡಿದ ಪ್ರತಿಯೊಂದು ಆಣೆಯಲ್ಲಿ (ಸರಕಾರಿ ಠರಾವ ರೆವೆನ್ಯೂ ಡಿಪಾರ್ಟಮೆಂಟ ನಂ. ೭೪೮೫/೨೪ ತಾ. ೧೧-೨೨೯-ಇದನ್ನು ನೋಡಿರಿ) |
| ೨) ಪಾಟೀಲ | ೪ | |
| ೩) ಗ್ರಾಮದ ಕೆಳದರ್ಜೆಯ ನೌಕರ | ೩ | |

೨. ೩೨ನೇ ಕಲಮಿನೊಂದಿಗೆ ಓದಲ್ಪಡುವ ೧೦೪ನೇ ಕಲಮಿನ ೧ ಉಪಕಲಮಿನ (ಈ) ರಕಮಿನನ್ವಯ ಮಾಡಲ್ಪಟ್ಟ ನಿಯಮುಗಳಲ್ಲಿ ೨ನೇ ನಿಯಮದ ೨ನೇ ಉಪನಿಯಮದನ್ವಯ ಯಾವ ಪಂಚಾಯತಗಳು ಸಬ್ ಟ್ರೆಝುರಿಯಲ್ಲಿ ತಮ್ಮ ಫಂಡಗಳನ್ನು ಠೇವು ಇಟ್ಟಿರುವವೋ ಅಂಥ ಪಂಚಾಯತಗಳ ಸಂಬಂಧದಲ್ಲಿ, ಅವುಗಳಿಗೆ ಬರತಕ್ಕ ಹಣಗಳನ್ನು ವಸೂಲ ಮಾಡುವದಕ್ಕೆ ಗ್ರಾಮಾಧಿಕಾರಿಗಳಿಗೆ ಕೊಡತಕ್ಕ ಪ್ರತಿಫಲವನ್ನು ಆರ್ಥಿಕ ವರ್ಷದ ಕೊನೆಗೆ ಶಕ್ಯವಿದ್ದಷ್ಟು ಬೇಗನೆ ಸರಪಂಚನಿಂದ ಸಬ್‌ಟ್ರೆಝುರಿ ಮೇಲೆ ತೆಗೆಯಲ್ಪಟ್ಟ ಮತ್ತು ಪ್ರಸಂಗಾನುಸಾರ ಮಾಮಲೇದಾರನಿಂದ ಅಥವಾ ಮಹಾಲಕರಿಯಿಂದ (ಪ್ರತಿ) ಸಹಿಮಾಡಲ್ಪಟ್ಟ ಚೆಕ್ಕಿನಿಂದ ಕೊಡಬೇಕು. ಗ್ರಾಮಾಧಿಕಾರಿಗಳು ಮತ್ತು ಸರಪಂಚನು ಇವರಲ್ಲಿಯ ಮತಭೇದವನ್ನು ಅಸಿಸ್ಟಂಟ ಅಥವಾ ಡೆಪ್ಯುಟಿ ಕಲೆಕ್ಟರನ ಕಡೆಗೆ ನಿರ್ಣಯಕ್ಕಾಗಿ ಕಳಿಸಬೇಕು. ಮತ್ತು ಅವನ ನಿರ್ಣಯವು ಕೊನೆಯದಾಗುವದು.

೩. ೩೨ನೇ ಕಲಮಿನೊಂದಿಗೆ ಓದಲ್ಪಡುವ ೧೦೪ನೇ ಕಲಮಿನ ೧ನೇ ಉಪಕಲಮಿನ (ಈ) ರಕಮಿನನ್ವಯ ಮಾಡಲ್ಪಟ್ಟ ನಿಯಮುಗಳಲ್ಲಿ ೨ನೇ ನಿಯಮದನ್ವಯ ಯಾವ ಪಂಚಾಯತಗಳು ಕಲೆಕ್ಟರನು ಮಂಜೂರ

ಮಾಡಿದ ಯಾವುದೊಂದು ಬ್ಯಾಂಕಿನಲ್ಲಿ ತಮ್ಮ ಫಂಡುಗಳನ್ನು ಠೇವು ಇಟ್ಟಿರುವವೋ ಅಂಥ ಪಂಚಾಯತಗಳ ಸಂಬಂಧದಲ್ಲಿ, ಗ್ರಾಮಾಧಿಕಾರಿಗಳು ಸರಪಂಚನಿಗೆ ಬಿಲ್ಲನ್ನು ಸಾದರಪಡಿಸಿ ಪ್ರತಿಫಲವನ್ನು ವಸೂಲ ಮಾಡಿಕೊಳ್ಳಬೇಕು. ಗ್ರಾಮಾಧಿಕಾರಿಗಳು ಮತ್ತು ಸರಪಂಚನು ಇವರಲ್ಲಿಯ ಮತಭೇದವನ್ನು ಅಸಿಸ್ಟಂಟ ಅಥವಾ ಡೆಪ್ಯುಟಿ ಕಲೆಕ್ಟರನ ಕಡೆಗೆ ನಿರ್ಣಯಕ್ಕಾಗಿ ಕಳಿಸಬೇಕು. ಮತ್ತು ಅವನ ನಿರ್ಣಯವು ಕೊನೆಯದಾಗವದು.

೪. ೧ನೇ ನಿಯಮಕ್ಕನುಸರಿಸಿ, ಪ್ರತಿಫಲವನ್ನು ಹಂಚುವ ವಿಷಯದಲ್ಲಿ ತಲಾಠಿ (ಕುಲಕರ್ಣಿ)ಯು ಹೊಣೆಗಾರನಾಗುವನು.

೧೯೩೩ನೇ ಇಸವಿಯ ಮುಂಬಯಿ ಗ್ರಾಮಪಂಚಾಯತ ಕಾನೂನಿನ ೯೩ನೇ ಕಲಮಿನನ್ವಯ ಜಿಲ್ಹಾ ಲೋಕಲಬೋರ್ಡಿನಿಂದ ಪಂಚಾಯತಿಗೆ ಯಾವ ಕರಾರುಗಳ ಮೇಲಿಂದ ಸಾಲಗಳು ಕೊಡಲ್ಪಡಬಹುದೆಂಬುದನ್ನು ೧೦೮ (೧)ನೇ ಕಲಮಿನ (ಪ) ರಕಮಿನನ್ವಯ ಗೊತ್ತುಪಡಿಸುವ ನಿಯಮಗಳು.

೧. ಸಾಲಕ್ಕಾಗಿ ಪಂಚಾಯತಿಯಿಂದ ಮಾಡಲ್ಪಟ್ಟ ಅರ್ಜಿಯು ಸದರ ಆಕ್ಟಿನ ಉದ್ದೇಶಗಳಲ್ಲಿ ಯಾವುದೇ ಉದ್ದೇಶಕ್ಕಾಗಿ ಮಾಡಲ್ಪಡದ ವಿನಹ ಮತ್ತು ಅದಕ್ಕೆ ಪಂಚಾಯತಿಯ ಸಭಾಸದರ ಒಟ್ಟು ಸಂಖ್ಯೆಯ ೨/೩ ದಷ್ಟು ಬಹುಮತದಿಂದ ಪಾಸಾದ ಠರಾವಿನ ಆಧಾರವಿರದ ವಿನಹ ಜಿಲ್ಹಾ ಲೋಕಲಬೋರ್ಡಿನಿಂದ ವಿಚಾರಿಸಲ್ಪಡಲಾರದು.

೨. ೧ನೇ ನಿಯಮಕ್ಕನುಸರಿಸಿ, ಪಂಚಾಯತಿಯಿಂದ ಅರ್ಜಿಯು ಮಾಡಲ್ಪಟ್ಟಮೇಲೆ ಜಿಲ್ಹಾ ಲೋಕಲಬೋರ್ಡು, ಯಾವ ವಿಷಯ (ಬಾಬು) ಕ್ಕಾಗಿ ಪಂಚಾಯತಿಯು ವೆಚ್ಚಮಾಡಬೇಕಾಗಿದೆಯೋ ಆ ವಿಷಯದ ಬಗ್ಗೆ ಮಂಜೂರಾದ ಅಂದಾಜನ್ನು ಮೀರದಷ್ಟು ಹಣವನ್ನು ಪಂಚಾಯತಿಯ ಫಂಡುಗಳ ಭದ್ರತೆ (ಜಾಮೀನ) ಯ ಮೇಲೆ ಸಾಲವಾಗಿ ಕೊಡಬಹುದು.

೩. ಕಳೆದ ಮೂರು ವರ್ಷಗಳ ಅಂಕೆಗಳ ಆಧಾರದ ಮೇಲಿಂದ ತೆಗೆದ ಸರಾಸರಿ ಚಾಲೂ ಸಾಲಿನ ವೆಚ್ಚಕ್ಕಿಂತ ಸರಾಸರಿ ಚಾಲೂ ಸಾಲಿನ

ಆದಾಯವು ಎಷ್ಟು ಹೆಚ್ಚಾಗುವದೋ ಅಷ್ಟು ರಕಮಿನ ೫ ಪಟ್ಟಿಗಿಂತ ಹೆಚ್ಚಿನ ಹಣವನ್ನು ಜಿಲ್ಲಾ ಲೋಕಲಬೋರ್ಡು ಪಂಚಾಯತಿಗೆ ಸಾಲವಾಗಿ ಕೊಡಬಾರದು.

೪. ಜಿಲ್ಲಾ ಲೋಕಲಬೋರ್ಡಿನಿಂದ ಕೊಡಲ್ಪಟ್ಟ ಸಾಲದ ಮೇಲೆ ಪಂಚಾಯತಿಯಿಂದ ಕೊಡಲ್ಪಡುವ ಬಡ್ಡಿಯ ದರವು ಜಿಲ್ಲಾ ಲೋಕಲ ಬೋರ್ಡಿನ ಮತ್ತು ಪಂಚಾಯತಿಯ ಪರಸ್ಪರ ಸಮ್ಮತಿಯಿಂದ ನಿರ್ಧರಿಸಲ್ಪಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಇಂಥ ಬಡ್ಡಿಯ ದರವು ೧೮೮೩ನೇ ಇಸವಿಯ ಭೂಸುಧಾರಣೆ ಮಾಡಲು ಸಾಲ ಕೊಡುವ ಕಾನೂನಿನನ್ವಯ ಪ್ರಾಂತಿಕ ಸರಕಾರದವರಿಂದ ಕಾಲಕಾಲಕ್ಕೆ ಯಾವ ಬಡ್ಡಿಯ ದರದಂತೆ ಸಾಲಗಳು ಕೊಡಲ್ಪಟ್ಟಿರುವವೋ ಆದರಕ್ಕಿಂತ ಅಧಿಕವಾಗಬಾರದು.

೫. ಜಿಲ್ಲಾ ಲೋಕಲ ಬೋರ್ಡಿನಿಂದ ಪಂಚಾಯತಿಗೆ ಕೊಡಲ್ಪಟ್ಟ ಸಾಲವು ಹತ್ತಕ್ಕಿಂತ ಹೆಚ್ಚಲ್ಲದ ಸಮಾನ ಕಂತುಗಳಿಂದ ಬಡ್ಡಿಸಹಿತವಾಗಿ ತಿರುಗಿ ಕೊಡಲ್ಪಡಬೇಕು.

## ಮನೆಗಳ ಮತ್ತು ಭೂಮಿಗಳ ಒಡೆಯರ ಅಥವಾ ಭೋಗವಟೆ ಮಾಡುವವರ ಮೇಲೆ ಗ್ರಾಮಪಂಚಾಯತಗಳು ಕರ ಹೇರುವ ಸಂಬಂಧದಲ್ಲಿ ನಿಯಮಗಳು.

ಕಮಿಶನರರ ನೋಟೀಫಿಕೇಶನ ನಂಬರ ವ್ಹಿ. ಪಿ. ೧೨೩
ತಾರೀಖು ೨೪ನೇ ಯನೇವರಿ ೧೯೪೩.

(ಕಮಿಶನರರ ನೋಟೀಫಿಕೇಶನ್ ನಂ. ವ್ಹಿ. ಪಿ. ೧೨೩ ತಾರೀಖು ೧೪ನೇ ಎಪ್ರಿಲ್ ೧೯೪೯ ಮತ್ತು ನಂ. ಪಿ. ೧೨೩ ರಾರೀಖು ೧೬ನೇ ಮಾರ್ಚ ೧೯೫೦ ಇವುಗಳಿಂದ ತಿದ್ದುಪಡೆಯಾದದ್ದು).

ಆದಾಯವು ಎಷ್ಟು ಹೆಚ್ಚಾಗುವದೋ ಅಷ್ಟು ರಕಮಿನ ೫ ಪಟ್ಟಿಗಿಂತ ಹೆಚ್ಚಿನ ಹಣವನ್ನು ಜಿಲ್ಹಾ ಲೋಕಲ್ ಬೋರ್ಡು ಪಂಚಾಯತಿಗೆ ಸಾಲವಾಗಿ ಕೊಡಬಾರದು.

೪. ಜಿಲ್ಹಾ ಲೋಕಲ್ ಬೋರ್ಡಿನಿಂದ ಕೊಡಲ್ಪಟ್ಟ ಸಾಲದಮೇಲೆ ಪಂಚಾಯತಿಯಿಂದ ಕೊಡಲ್ಪಡುವ ಬಡ್ಡಿಯದರವು ಜಿಲ್ಹಾ ಲೋಕಲ್ ಬೋರ್ಡಿನ ಮತ್ತು ಪಂಚಾಯತಿಯ ಪರಸ್ಪರ ಸಮ್ಮತಿಯಿಂದ ನಿರ್ಧರಿಸಲ್ಪಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಇಂಥ ಬಡ್ಡಿಯ ದರವು ೧೮೮೩ನೇ ಇಸ್ವಿಯ ಭೂ ಸುಧಾರಣೆ ಮಾಡಲು ಸಾಲಕೊಡುವ ಕಾನೂನಿನನ್ವಯ ಪ್ರಾಂತಿಕ ಸರಕಾರದವರಿಂದ ಕಾಲಕಾಲಕ್ಕೆ ಯಾವ ಬಡ್ಡಿಯ ದರದಂತೆ ಸಾಲಗಳು ಕೊಡಲ್ಪಟ್ಟಿರುವವೋ ಆ ದರಕ್ಕಿಂತ ಅಧಿಕವಾಗಬಾರದು.

೫. ಜಿಲ್ಹಾ ಲೋಕಲ್ ಬೋರ್ಡಿನಿಂದ ಪಂಚಾಯತಿಗೆ ಕೊಡಲ್ಪಟ್ಟ ಸಾಲವು ಹತ್ತಕ್ಕಿಂತ ಹೆಚ್ಚಲ್ಲದ ಸಮಾನ ಕಂತುಗಳಿಂದ ಬಡ್ಡಿ ಸಹಿತವಾಗಿ ತಿರುಗಿ ಕೊಡಲ್ಪಡಬೇಕು.

## ಮನೆಗಳ ಮತ್ತು ಭೂಮಿಗಳ ಒಡೆಯರ ಅಥವಾ ಭೋಗವಟೆ ಮಾಡುವವರ ಮೇಲೆ ಗ್ರಾಮಪಂಚಾಯತಗಳು ಕರ ಹೇರುವ ಸಂಬಂಧದಲ್ಲಿ ನಿಯಮಗಳು.

ಕಮಿಶನರರ ನೋಟೀಫೀಕೇಶನ್ ನಂಬರ ವ್ಹಿ. ಪಿ. ೧೨೩ ತಾರೀಖು ೨೮ನೇ ಜನೇವರಿ ೧೯೪೩.

(ಕಮಿಶನರರ ನೋಟೀಫಿಕೇಶನ ನಂ ವ್ಹಿ. ಪಿ. ೧೨೩ ತಾರೀಖು ೧೪ನೇ ಎಪ್ರಿಲ್ ೧೯೪೯ ಮತ್ತು ನಂ ವ್ಹಿ. ಪಿ. ೧೨೩ ತಾ ೧೬ನೇ ಮಾರ್ಚ ೧೯೫೦ ಇವುಗಳಿಂದ ತಿದ್ದುಪಡೆಯಾದದ್ದು).

೧೯೩೩ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತ ಕಾನೂನಿನ ೧೦೮ (೧) ನೇ ಕಲಮಿನ (ಮ) ರಕಮಿನನ್ವಯ ದೊರತ, ನಿಯಮಗಳನ್ನು

ಮಾಡುವ ಅಧಿಕಾರವನ್ನು ಸರಕಾರದವರು, ೧೯೪೧ನೇ ಇಸ್ವಿಯ ನವ್ಹೆಂಬರ ೧ನೇ ತಾರೀಖಿನ ನೋಟೀಫಿಕೇಶನ್ ಜನರಲ್, ಡಿಪಾರ್ಟಮೆಂಟ ನಂಬರ ಎಸ್ ೧೭೪೧ (ಅ) ಇದರಲ್ಲಿ ಕಮಿಶನರರಿಗೆ ಒಪ್ಪಿಸಿಕೊಟ್ಟಿದ್ದು, ಅವರು ೧೯೪೧ನೇ ಇಸ್ವಿಯ ಸಪ್ಟಂಬರ ೧೧ನೇ ತಾರೀಖಿನ ಡ್ರಾಫ್ಟ ನೋಟೀಫಿಕೇಶನ್ ನಂ ವ್ಹಿ. ಪಿ. ೧೨೩ ಇದಕ್ಕೆ ದೊರೆತ ಆಕ್ಷೇಪ ಮತ್ತು ಸೂಚನೆಗಳನ್ನು ವಿಚಾರಿಸಿ, ೮೯ನೇ ಕಲಮಿನ ೧ನೇ ಉಪಕಲಮಿನನ್ವಯ ಮನೆಗಳ ಮತ್ತು ಭೂಮಿಗಳ ಒಡೆಯರ ಅಥವಾ ಭೋಗವಟಿ ಮಾಡುವವರ ಮೇಲೆ ಯಾವದರದಂತೆ ಮತ್ತು ರೀತಿಯಲ್ಲಿ ಕರವನ್ನು ಹೇರಬೇಕೆಂಬುದನ್ನು ಗೊತ್ತುಪಡಿಸುವ ಈ ಕೆಳಗಿನ ನಿಯಮಗಳನ್ನು ಮಾಡಿರುತ್ತಾರೆ:—

೧. ಈ ನಿಯಮಗಳಲ್ಲಿ ವಿಷಯಕ್ಕೆ ಅಥವಾ ಸಂದರ್ಭಕ್ಕೆ ಯಾವುದೇ ಬಾಧೆ ಬರದಿದ್ದರೆ—

ಅ) "ಒಡೆಯನು" ಇದರಲ್ಲಿ ಮನೆಯು, ಅಥವಾ ಭೂಮಿಯು ಇಂಥ ಮನೆಯು ಅಥವಾ ಭೂಮಿಯು ಬಾಡಿಗೆಯಿಂದ ಕೊಡಲ್ಪಟ್ಟರೆ, ಭಾಡಿಗೆಯನ್ನು ಸ್ವೀಕರಿಸುವ ಅಥವಾ ಸ್ವೀಕರಿಸಲು ಹಕ್ಕುಳ್ಳ ಮನುಷ್ಯನ ಸಮಾವೇಶವಾಗುತ್ತದೆ;

ಬ) "ಭೋಗವಟಿ ಮಾಡುವವನು" ಇದರಲ್ಲಿ ಒಡೆಯನೆಂದಾಗಲಿ, ಎಜೆಂಟನೆಂದಾಗಲಿ ಅಥವಾ ಭಾಡಿಗೆದಾರ ನೆಂದಾಗಲಿ ಯಾವನ ಪ್ರತ್ಯಕ್ಷ ವಶ (ಸ್ವಾಧೀನ) ದಲ್ಲಿ ಮನೆ ಅಥವಾ ಭೂಮಿಯು ಇರುವದೋ ಅವನ ಸಮಾವೇಶವಾಗುತ್ತದೆ;

ಕ) "ವಾರ್ಷಿಕ ಭಾಡಿಗೆಯ ಬೆಲೆಯು" ಅಂದರೆ, ಮನೆಯನ್ನು ಅಥವಾ ಭೂಮಿಯನ್ನು ಪ್ರತಿವರ್ಷಕ್ಕೆ ಅಥವಾ ವರ್ಷದಿಂದ ವರ್ಷಕ್ಕೆ ಯೋಗ್ಯ ರೀತಿಯಿಂದ ಎಷ್ಟಕ್ಕೆ ಭಾಡಿಗೆಗೆ ಕೊಡಬಹುದುದೆಂದು ಊಹಿಸಬಹುದೋ ಅಷ್ಟು ವಾರ್ಷಿಕ ಭಾಡಿಗೆ ಎಂದರ್ಥವಾಗುತ್ತದೆ;

ಡ) "ಮನೆ" ಅಂದರೆ ಒಂದೇ ಆವಾರದಲ್ಲಿ ಮತ್ತು ಒಬ್ಬನೇ ಭೋಗವಟಿ ಮಾಡುವವನಿಂದ ಉಪಯೋಗಿಸಲ್ಪಡುವ ಯಾವುದೇ ಕಟ್ಟಡ ಅಥವಾ ಕಟ್ಟಡಗಳ ಗುಂಪು ಎಂದರ್ಥವಾಗುತ್ತದೆ;

ಈ) "ಭೂಮಿ" ಅಂದರೆ ಒಕ್ಕಲತನದ ಸಂಬಂಧ(ಭೂ) ಕಂದಾಯ ಕೊಡಲು ಪಾತ್ರವಿಲ್ಲದ ಯಾವುದೇ ಭೂಮಿ ಎಂದರ್ಥವಾಗುತ್ತದೆ.

೨. ಇಲ್ಲಿ ಜೊತೆಗಿಡಲ್ಪಟ್ಟ ಪರಿಶಿಷ್ಟದಲ್ಲಿ ನಮೂದಿಸಿದ ಪ್ರತಿಯೊಂದು ಪಂಚಾಯತವು ಗ್ರಾಮದ ಹದ್ದಿಯಲ್ಲಿನ್ನ ಮನೆಗಳ ಮತ್ತು ಭೂಮಿಗಳ ಒಡೆಯರ ಅಥವಾ ಭೋಗವಟೆ ಮಾಡುವವರ ಮೇಲೆ, ಸದರ ಪರಿಶಿಷ್ಟದ ಮುಂದಿನ ಆಸನದಲ್ಲಿ ಆ ಪಂಚಾಯತಿಯು ಮುಂದೆ ನಿರ್ದಿಷ್ಟಪಡಿಸಿದ ದರದಂತೆ ಕರವನ್ನು ಹೇರಬೇಕು.

ಆದರೆ ಈ ಕೆಳಗಿನ ವಿಷಯುಗಳಲ್ಲಿ ಕರವನ್ನು ಹೇರಬಾರದು.

ಅ) ಲೋಕಲ್ ಬೋರ್ಡುಗಳ, ಮುನಸಿಪಾಲಿಟಿಗಳ, ಮುಂಬಯಿ ನಗರ ಮುನಸಿಪಲ್ ಕಾರ್ಪೊರೇಶನದ ಮತ್ತು ಪಂಚಾಯತಿಗಳ ಒಡೆತನವುಳ್ಳ ಮತ್ತು ಸಾರ್ವಜನಿಕ ಉದ್ದೇಶಗಳಿಗಾಗಿ ಉಪಯೋಗಿಸಲ್ಪಡುವ ಮತ್ತು ಲಾಭದ ಉದ್ದೇಶಗಳಿಗಾಗಿ ಉಪಯೋಗಿಸಲ್ಪಡದ ಅಥವಾ ಉಪಯೋಗಿಸುವ ಉದ್ದೇಶವಿಲ್ಲದ ಭೂಮಿಗಳು ಮತ್ತು ಕಟ್ಟಡಗಳು;

ಅಅ) ಲಾಭದ ಉದ್ದೇಶಗಳಿಗಾಗಿ ಉಪಯೋಗಿಸಲ್ಪಡುವ ಅಥವಾ ಉಪಯೋಗಿಸಲ್ಪಡದಿರುವ ಅಥವಾ ಉಪಯೋಗಿಸುವ ಉದ್ದೇಶವಿರುವ ಅಥವಾ ಉದ್ದೇಶವಿರದಿರುವ ಸರಕಾರಿ ಭೂಮಿಗಳು ಮತ್ತು ಕಟ್ಟಡಗಳು; ಆದರೆ ಇವುಗಳಲ್ಲಿ, ೧೯೪೧ನೇ ಇಸ್ವಿಯ ರೇಲ್ವೆಗಳ (ಲೋಕಲ್ ಅಥಾರಿಟೀಜ ಟ್ಯಾಕ್ಸೇಶನ) ಕಾನೂನಿನ ೩ನೇ ಕಲಮಿನನ್ವಯ ತೆಗೆದ ನೋಟೀಫೀಕೇಶನಕ್ಕನುಸರಿಸಿ, ರೇಲ್ವೆ ಆಡಳಿತೆಯು ಯಾವ ಭೂಮಿಗಳ ಮತ್ತು ಕಟ್ಟಡಗಳ ಸಂಬಂಧ ಕರವನ್ನು ಅಥವಾ ಆದರ ಬದಲಾಗಿ ಹಣವನ್ನು ಕೊಡಬೇಕಾಗುವದೋ ಅಂಥ ಭೂಮಿಗಳ ಮತ್ತು ಕಟ್ಟಡಗಳ ಸಮಾವೇಶ ವಾಗುವದಿಲ್ಲ.

ಬ) ಕೇವಲ ಧಾರ್ಮಿಕ, ಶೈಕ್ಷಣಿಕ ಮತ್ತು ಪರೋಪಕಾರೀ (ಧರ್ಮಾದಾಯ) ಉದ್ದೇಶಗಳಿಗಾಗಿ ಉಪಯೋಗಿಸಲ್ಪಡುವ ಭೂಮಿಗಳು ಮತ್ತು ಕಟ್ಟಡಗಳು.

ಕ) ನೂರು ರೂಪಾಯಿಗಿಂತ ಕಡಿಮೆ ಭಾಂಡವಲ ಕಿಮ್ಮತ್ತುಳ್ಳ ಅಥವಾ ವರ್ಷಕ್ಕೆ ೬ ರೂಪಾಯಿ ಅಥವಾ ಅದಕ್ಕಿಂತ ಕಡಿಮೆ ಭಾಡಿಗೆಯ ಬೆಲೆಯುಳ್ಳ ಭೂಮಿಗಳು ಮತ್ತು ಕಟ್ಟಡಗಳು.

೩. ಗ್ರಾಮದ ಹದ್ದಿಯಲ್ಲಿರುವ ಮನೆಗಳ ಮತ್ತು ಭೂಮಿಗಳ ಒಡೆಯರ ಅಥವಾ ಭೋಗವಟಿ ಮಾಡುವವರಮೇಲೆ ನೋಟೀಸಿನಲ್ಲಿ ನಮೂದಿಸಿದ ದರಗಳಂತೆ ಕರವನ್ನು ಹೇರಲಾಗುವದು ಎಂಬ ನೋಟೀಸಿನೊಂದಿಗೆ ಈ ನಿಯಮಗಳನ್ನು ಇಂಥ ನಿಯಮಗಳ ಮತ್ತು ನೋಟೀಸಿನ ಪ್ರತಿಗಳನ್ನು ಪ್ರತಿಯೊಂದು ಪಂಚಾಯತವು ಪಂಚಾಯತಿಯ ಕಚೇರಿಯಲ್ಲಿ ಹಚ್ಚಿ ಪ್ರಕಟ ಮಾಡಬೇಕು. ಪಂಚಾಯತವು ಇಂಥ ಪ್ರಕಟನೆಯನ್ನು ಡಂಗುರದಿಂದ ಸಹ ಸಾರಿ ಹೇಳಬೇಕು. ಗೊತ್ತುಮಾಡಲ್ಪಟ್ಟಪ್ರಕಾರ, ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಮತ್ತು ಇಂಥ ನೋಟೀಸಿನ ಪ್ರಕಟನೆಯ ತಾರೀಖಿನಿಂದ ಒಂದು ತಿಂಗಳೊಳಗಿರದ ಒಂದು ತಾರೀಖಿನಿಂದ ಕರವನ್ನು ಹೇರಬೇಕು.

ಆದರೆ (೧) ಎಪ್ರಿಲ್ ೧ರಿಂದ ಪ್ರಾರಂಭವಾಗುವ ಮತ್ತು ಮಾರ್ಚ ೩೧ಕ್ಕೆ ಮುಗಿಯುವ ವರ್ಷಕ್ಕೆ ಕರವು ಹೇರಲ್ಪಡಬೇಕು, ಮತ್ತು ಅದು ಯಾವುದೇ ವರ್ಷದಲ್ಲಿ ಎಪ್ರಿಲ ೧, ಜುಲೈ ೧, ಅಕ್ಟೋಬರ ೧ ಅಥವಾ ಜನೇವರಿ ೧ ಈ ತಾರೀಖುಗಳನ್ನು ಹೊರ್ತುಪಡಿಸಿ ಇತರ ದಿವಸ ಅಮಲಿನಲ್ಲಿ ಬರಲಾರದು, ಮತ್ತು

(೨) ಅದು ಎಪ್ರಿಲ ೧ನೇ ತಾರೀಖಿನಹೊರ್ತು ಇತರ ಯಾವುದೇ ದಿವಸ ಅಮಲಿನಲ್ಲಿ ಬಂದರೆ, ತ್ರೈಮಾಸಿಕ ಲೆಕ್ಕದಿಂದ ಮುಂಬರುವ ಎಪ್ರಿಲ ೧ನೇ ತಾರೀಖಿನವರೆಗೆ ಕರವು ಹೇರಲ್ಪಡಬೇಕು.

೪. (೧) ಸರಪಂಚನು, ೩ನೇ ನಿಯಮದನ್ವಯ ಈ ನಿಯಮಗಳನ್ನು ಪ್ರಕಟಿಸಿದನಂತರ, ಶಕ್ಯವಿದ್ದಷ್ಟು ಬೇಗನೆ ಮತ್ತು ಯಾವುದೇ ಪ್ರಸಂಗದಲ್ಲಿ ಮುಂಬರುವ ಡಿಶೆಂಬರ ೧ನೇ ತಾರೀಖಿಗಿಂತ ಹೆಚ್ಚಿಗೆ ತಡವಾಗದಂತೆ—

ಅ) ಪ್ರತಿಯೊಂದು ಮನೆಯ ಅಥವಾ ಭೂಮಿಯ ಅನುಕ್ರಮ ನಂಬರನ್ನು;

ಬ) ಗೊತ್ತಿದ್ದರೆ, ಒಡೆಯನ ಮತ್ತು ಭೋಗವಟಿ ಮಾಡುವವನ ಹೆಸರನ್ನು;

ಕ) ಪ್ರಸಂಗಾನುಸಾರ, ಭಂಡವಲಿನ ಕಿಮ್ಮತ್ತನ್ನು ಅಥವಾ ವಾರ್ಷಿಕ ಭಾಡೆಯ ಬೆಲೆಯನ್ನು; ಮತ್ತು

ಡ) ಅದರಮೇಲೆ ಆಕರಿಸಲ್ಪಟ್ಟ ಕರದ ರಕಮನ್ನು ತೋರಿಸುವ ಆಕರಣೆಯ ಯಾದಿಯೊಂದನ್ನು ತಯಾರಿಸಬೇಕು ಅಥವಾ ತಯಾರಮಾಡಿಸಬೇಕು.

(೨) ವಾರ್ಷಿಕ ಭಾಡಿಗೆಯ ಬೆಲೆಯಮೇಲೆ ಕರವನ್ನು ಆಕರಿಸುವಾಗ್ಗೆ ಸದರ ಬೆಲೆಯ ನೂರಕ್ಕೆ ಹೆತ್ತರಷ್ಟು ರಕಮನ್ನು ದುರಸ್ತಿಯ ಅಥವಾ ಇತರ ಯಾವುದೇ ಕಾರಣಕ್ಕಾಗಿ ಅದರಲ್ಲಿ ವಜಾ ಮಾಡಬೇಕು.

(೩) ಇಂಥ ಆಕರಣೆಯ ಯಾದಿಯನ್ನು ತಯಾರಮಾಡುವ ಉದ್ದೇಶಕ್ಕಾಗಿ ಸರಪಂಚನು ಅಥವಾ ಅವನ ಅಧಿಕಾರದನ್ವಯ ಕೆಲಸಮಾಡುವ ಯಾವನೇ ಮನುಷ್ಯನು ಗ್ರಾಮದಲ್ಲಿ ಯಾವುದೇ ಮನೆಯ ಅಥವಾ ಭೂಮಿಯ ಪರೀಕ್ಷೆ (ತಪಾಸಣೆ) ಮಾಡಬಹುದು.

೫. ಕರವನ್ನು ಕೊಡಲು ಮುಖ್ಯವಾಗಿ ಪಾತ್ರನಿರುವ ಮನುಷ್ಯನ ಹೆಸರು ನಿಶ್ಚಿತವಾಗದಿದ್ದಾಗ್ಗೆ, ಆಕರಣೆಯ ಯಾದಿಯಲ್ಲಿ ಮತ್ತು ಸದರ ಮನುಷ್ಯನ ಮೇಲೆ ಜಾರಿಮಾಡಲಿಕ್ಕೆ ಅಗತ್ಯವಿರುವ ಯಾವುದೇ ನೋಟೀಸಿನಲ್ಲಿ, ಅವನನ್ನು, ಹೆಚ್ಚಿನ ವರ್ಣನೆಯನ್ನು ಕೊಡದೆ, ಇಂಥ ಮನೆಗಳ "ಧಾರಣ ಮಾಡುವವನು" ಎಂದು ಕರೆದರೆ ಸಾಕು.

೬. ಆಕರಣೆಯ ಯಾದಿಯು ಪೂರ್ಣವಾದನಂತರ, ಪಂಚಾಯತಿಯ ಕಚೇರಿಯಲ್ಲಿ ಯಾದಿಯು ನೋಡುವದಕ್ಕಾಗಿ ಇಡಲ್ಪಟ್ಟರೆ, ಮತ್ತು ಆಕ್ಷೇಪಗಳು ಈ ನೋಟೀಸಿನ ತಾರೀಖಿನಿಂದ ೩೦ ದಿವಸಗಳೊಳಗಿರದ ಒಂದು ದಿವಸ ಪಂಚಾಯತದಿಂದ ವಿಚಾರಿಸಲ್ಪಡುವವು ಮತ್ತು ನಿರ್ಣಯಿಸಲ್ಪಡುವವು ಎಂದು ಗ್ರಾಮದಲ್ಲಿ ಡಂಗುರದಿಂದ ಒಂದು ನೋಟೀಸು ಪ್ರಸಿದ್ಧಿಸಲ್ಪಡಬೇಕು.

೭. ಯಾದಿಯಲ್ಲಿ ಹೆಸರಿಸ್ಪ ಪ್ರತಿಯೊಬ್ಬ ಮನುಷ್ಯನಿಗೆ, ಯಾವುದೇ ಆಸ್ತಿಯ ಒಡೆಯ ಅಥವಾ ಭೋಗವಟಿ ಮಾಡುವವನೆಂದು ಪ್ರತಿಪಾದಿಸುವ ಪ್ರತಿಯೊಬ್ಬ ಮನುಷ್ಯನಿಗೆ, ಯಾದಿಯಲ್ಲಿ ಸಮಾವೇಶಮಾಡಲ್ಪಟ್ಟ ಯಾವುದೇ ಆಸ್ತಿಯ ಸ್ವಾಧೀನತೆಯುಳ್ಳ ಪ್ರತಿಯೊಬ್ಬ ಮನುಷ್ಯನಿಗೆ ಮತ್ತು ಇಂಥ ಮನುಷ್ಯನ ಎಜಂಟನಿಗೆ ಹಣವಿಲ್ಲದೆ ಯಾದಿಯನ್ನು ಪರೀಕ್ಷಿಸಲು ಮತ್ತು ಅವರಿಂದ ಉತಾರಗಳನ್ನು ತಕ್ಕೊಳ್ಳಲು ಅಧಿಕಾರವಿದೆ.

೮. ಆಕರಣೆಯಬಗ್ಗೆ ಮಾಡಲ್ಪಟ್ಟ ಎಲ್ಲ ಆಕ್ಷೇಪಗಳು, ೬ನೇ ನಿಯಮದನ್ವಯ ಪ್ರಸಿದ್ಧ ಮಾಡಲ್ಪಟ್ಟ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ದಿವಸ ಅಥವಾ ಸಭೆಯು ಮುಂದೆ ಹಾಕಲ್ಪಟ್ಟ ನಂತರದ ದಿವಸ ಪಂಚಾಯತಿಯಿಂದ ವಿಚಾರಿಸಲ್ಪಡುವವು, ಮತ್ತು ನಿರ್ಣಯಿಸಲ್ಪಡುವವು, ಮತ್ತು ಪಂಚಾಯತದ ನಿರ್ಣಯವು ಆಕರಣೆಯನ್ನು ವಿರೋಧಿಸುವ ಮನುಷ್ಯನಿಗೆ ತಿಳಿಸಲ್ಪಡುವದು. ನಿರ್ಣಯವು ತಿಳಿಸಲ್ಪಟ್ಟ ೩೦ ದಿವಸಗಳೊಳಗಾಗಿ ಜಿಲ್ಹಾ ಲೋಕಲ್ ಬೋರ್ಡಿಗೆ ಅಪೀಲ ಮಾಡಬೇಕು, ಮತ್ತು ಜಿಲ್ಹಾ ಲೋಕಲ್ ಬೋರ್ಡಿನ ಆಜ್ಞೆಯು ಕೊನೆಯದಾಗುವದು. ಅಪೀಲು ಮಾಡಲ್ಪಟ್ಟಾಗ್ಗೆ ಜಿಲ್ಹಾ ಲೋಕಲ್ ಬೋರ್ಡಿನ ಆಜ್ಞೆಗನುಸರಿಸಿ ಮತ್ತು ಉಳಿದ ಪ್ರಸಂಗಗಳಲ್ಲಿ ಪಂಚಾಯತದ ನಿರ್ಣಯಕ್ಕನುಸರಿಸಿ ಆಕರಣೆಯ ಯಾದಿಯಲ್ಲಿ ಅವಶ್ಯಕವಿದ್ದ ತಿದ್ದುಪಡೆಗಳನ್ನು ಪಂಚಾಯತವು ಮಾಡಬೇಕು ಮತ್ತು ಅವು ನಿಜವಿರುವವೆಂಬುದಕ್ಕೆ ಅವುಗಳಮೇಲೆ ಸರಪಂಚನ ಸಹಿ ಇರಬೇಕು.

೯. ಇದರ ಹಿಂದಿನ ನಿಯಮದನ್ವಯ ನಿಜವಿರುವದೆಂದು ತಯಾರಾದ ಯಾದಿಯಲ್ಲಿಯ ದಾಖಲೆಗಳು ಹೇರಲ್ಪಡುವ ಕರದ ರಕಮಿಗೆ ನಿರ್ಣಾಯಕ ಪುರಾವೆಗಳಾಗುವವು.

೧೦. (೧) ಯಾವದೊಂದು ದಾಖಲೆಯು ಮೋಸದಿಂದ, ಆಕಸ್ಮಾತ್ತಾಗಿ ಅಥವಾ ದೋಷದಿಂದ ವರ್ಜಿಸಲ್ಪಟ್ಟಿದ್ದರೆ ಅಥವಾ ಅಶುದ್ಧವಾಗಿ ಮಾಡಲ್ಪಟ್ಟಿದ್ದರೆ, ಯಾವುದೇ ಆಸ್ತಿಯ ವಿಷಯದಲ್ಲಿ ದಾಖಲೆಯನ್ನು ಸೇರಿಸಿ, ಅಥವಾ ಬದಲಿಸಿ ಅಥವಾ ಆಕರಣೆಯ ಯಾದಿಯು ತಯಾರಿಸಲ್ಪಟ್ಟ ಬಳಿಕ ಯಾವುದೇ ಮನೆಯು ಸಂಪೂರ್ಣವಾಗಿ ಅಥವಾ ಅಂಶತಃ ರಚಿಸಲ್ಪಟ್ಟಿದ್ದರೆ,

ಮಾರ್ಪಡಿಸಲ್ಪಟ್ಟಿದ್ದರೆ, ಬೆಳಿಸಲ್ಪಟ್ಟಿದ್ದರೆ ಅಥವಾ ಪುನರ್ರಚಿಸಲ್ಪಟ್ಟಿದ್ದರೆ, ಇಂಥ ರಚಿಸಲ್ಪಟ್ಟ ಮಾರ್ಪಡಿಸಲ್ಪಟ್ಟ, ಬೆಳಿಸಲ್ಪಟ್ಟ ಅಥವಾ ಪುನರ್ರಚಿಸಲ್ಪಟ್ಟ ಮನೆಯ ಸಂಬಂಧದಲ್ಲಿ, ಆ ಯಾದಿಯ ಬದಲಾವಣೆಯಲ್ಲಿ ಹಿತಸಂಬಂಧವುಳ್ಳ ಯಾವನೇ ಮನುಷ್ಯನಿಗೆ, ಬದಲಾವಣೆಗಾಗಿ ಅವನು ತನ್ನ ಆಕ್ಷೇಪವನ್ನು ಯಾವ ತಾರೀಖಿನೊಳಗಾಗಿ ಕೊಡಬೇಕೋ ಆ ತಾರೀಖಿನ ನೋಟಿಸನ್ನು ಕೊಟ್ಟನಂತರ, ದಾಖಲೆಯನ್ನು ಸೇರಿಸಿ ಅಥವಾ ಬದಲಿಸಿ ಪಂಚಾಯತವು ಯಾವುದೇ ಕಾಲಕ್ಕೆ ಆಕರಣೆಯ ಯಾದಿಯನ್ನು ಬದಲಿಸಬಹುದು. ಸದರ ತಾರೀಖು ಅಂಥ ನೋಟೀಸು ಜಾರಿಮಾಡಲ್ಪಟ್ಟ ಒಂದು ತಿಂಗಳಿಗಿಂತ ಮೊದಲು ಇರಬಾರದು.

(೨) ಇಂಥ ಯಾವುದೇ ಬದಲಾವಣೆಯಲ್ಲಿ ಹಿತಸಂಬಂಧವುಳ್ಳ ಯಾವನೇ ಮನುಷ್ಯನು ಇಂಥ ನೋಟೀಸಿನಲ್ಲಿ ಗೊತ್ತುಪಡಿಸಿದ ಕಾಲಕ್ಕಿಂತ ಮೊದಲು ಮಾಡಿದ ಆಕ್ಷೇಪವು, ೭ನೇ ನಿಯಮದನ್ವಯ ಅರ್ಜಿ ಇದ್ದಂತೆಯೇ ಎಂದು ತಿಳಿದು ಎಲ್ಲ ವಿಷಯಗಳಲ್ಲಿ ವಿಚಾರಿಸಲ್ಪಡಬೇಕು.

(೩) ಈ ನಿಯಮದನ್ವಯ ಮಾಡಲ್ಪಟ್ಟ ದಾಖಲೆಯು ಅಥವಾ ಬದಲಾವಣೆಯು ರಚಿಸಲ್ಪಟ್ಟ, ಮಾರ್ಪಡಿಸಲ್ಪಟ್ಟ, ಬೆಳಿಸಲ್ಪಟ್ಟ ಅಥವಾ ಪುನರ್ರಚಿಸಲ್ಪಟ್ಟ ಮನೆಯ ಸಂಬಂಧದಲ್ಲಿ, ಇಂಥ ರಚನೆಯು, ಮಾರ್ಪಾಟು ಬೆಳಿಸೋಣವು ಅಥವಾ ಪುನರ್ರಚನೆಯು ಕೊನೆಗೊಂಡ ದಿವಸ ಅಥವಾ ಹೊಸ ರಚನೆಯು, ಮಾರ್ಪಾಟು, ಬೆಳಿಸೋಣವು ಅಥವಾ ಪುನರ್ರಚನೆಯು ಮೊದಲಿಗೆ ವ್ಯಾಪಿಸಲ್ಪಟ್ಟ (ಭೋಗವಟಿ ಮಾಡಲ್ಪಟ್ಟ) ದಿವಸ, ಇವುಗಳಲ್ಲಿ ಯಾವುದು ಮೊದಲು ಸಂಭವಿಸುವದೋ ಅಂಥ ದಿವಸ, ಅಥವಾ ಇತರ ವಿಷಯಗಳಲ್ಲಿ ಚಾಲೂ ಸರಕಾರಿ ವರ್ಷದಲ್ಲಿ ಯಾವ ಎಲ್ಲಕ್ಕೂ ಮೊದಲಿನ ದಿವಸ ಸದರೀ ದಾಖಲೆಯನ್ನು ಅಥವಾ ಬದಲಾವಣೆಯನ್ನು ಮಾಡುವದು ಸರಿಯೆನಿಸುವಂಥ ಪರಿಸ್ಥಿತಿ ಇತ್ತೋ ಆ ದಿವಸ ಮಾಡಲ್ಪಟ್ಟಂತೆಯೇ ಅಮಲಿನಲ್ಲಿ ಬರುವದು; ಮತ್ತು ಇಂಥ ವರ್ಷ ಪ್ರಸಂಗಾನುಸಾರವಾಗಿ ಕರವನ್ನು ಅಥವಾ ಹೆಚ್ಚಿಸಲ್ಪಟ್ಟ ಕರವನ್ನು, ಇಂಥ ದಿವಸದನಂತರ ಉಳಿದ ವರ್ಷ ಮತ್ತು ಇಡೀವರ್ಷ ಇವುಗಳಲ್ಲಿ ಇರುವ ಪ್ರಮಾಣಕ್ಕನುಸರಿಸಿ ಹೇರಬೇಕು.

೧೧. (೧) ಮನೆಗಳ ಮೇಲಿನ ಕರಕೊಡಲು ಪಾತ್ರವಿದ್ದ ಯಾವುದೇ ಮನೆಯು ಅಥವಾ ಮನೆಯ ಯಾವುದೇ ಭಾಗವು ಕೆಡವಲ್ಪಟ್ಟಾಗ್ಗೆ ಅಥವಾ ತೆಗೆಯಲ್ಪಟ್ಟಾಗ್ಗೆ ಸದರ ಕರವನ್ನು ಕೊಡಲು ಮೂಲತಃ ಪಾತ್ರನಿರುವ ಮನುಷ್ಯನು ಅದರ ಸಂಬಂಧ ಲೇಖೀ ನೋಟೀಸನ್ನು ಸರಪಂಚನಿಗೆ ಕೊಡಬೇಕು.

(೨) ಇಂಥ ನೋಟೀಸನ್ನು ಕೊಡುವವರೆಗೆ ಮೇಲೆ ಹೇಳಿದ ಮನುಷ್ಯನು, ಇಂಥ ಮನೆಯು ಅಥವಾ ಅದರ ಯಾವುದೇ ಭಾಗವು ಕೆಡವಲ್ಪಡದಿದ್ದರೆ ಅಥವಾ ತೆಗೆದು ಹಾಕಲ್ಪಡದಿದ್ದರೆ ಇಂಥ ಮನೆಯ ಸಂಬಂಧ ಕರವನ್ನು ಕೊಡಲಿಕ್ಕೆ ಪಾತ್ರನಿದ್ದಂತೆಯೇ, ಇಂಥ ಪ್ರತ್ಯೇಕ ಕರವನ್ನು ಇಂಥ ಮನೆಯ ಸಂಬಂಧದಲ್ಲಿ ಕೊಡಲು ಪಾತ್ರನಾಗಿರುವದು ಮುಂದುವರಿಯುವುದು.

ಆದರೆ ಗೊತ್ತುಪಡಿಸುವದೇನಂದರೆ, ಈ ನಿಯಮದಲ್ಲಿಯ ಯಾವುದೇ ವಿಷಯವು ಬಿದ್ದ ಅಥವಾ ಸುಡಲ್ಪಟ್ಟ ಯಾವುದೇ ಮನೆಗೆ ಅಥವಾ ಮನೆಯ ಭಾಗಕ್ಕೆ ಅನ್ವಯಿಸುವದಿಲ್ಲ.

೧೨. (೧) ಪ್ರತಿವರ್ಷ ಆಕರಣೆಯ ಹೊಸ ಯಾದಿಯನ್ನು ತಯಾರಿಸುವ ಅವಶ್ಯಕತೆಯಿಲ್ಲ. ಆಕರಣೆಯ ಯಾದಿಯ ಪ್ರತಿಯೊಂದು ಭಾಗವು ಪ್ರತಿ ಮೂರು ವರ್ಷಕ್ಕೆ ಒಂದಕ್ಕಿಂತ ಕಡಿಮೆಯಾಗದಷ್ಟು ಸಲ, ಸಂಪೂರ್ಣವಾಗಿ ತಿದ್ದಲ್ಪಡಬೇಕೆಂಬ ಕರಾರಿಗೆ ಒಳಪಟ್ಟು, ಪಂಚಾಯತವು ಒಂದು ವರ್ಷದ ಯಾದಿಯಲ್ಲಿರುವ ಬೆಲೆ ಮತ್ತು ಆಕರಣೆಗಳನ್ನು, ಅವಶ್ಯವೆಂದೆನಿಸಿದ ಬದಲಾವಣೆಗಳೊಂದಿಗೆ ಮುಂದಿನ ವರ್ಷಕ್ಕಾಗಿ ಸ್ವೀಕರಿಸಬಹುದು.

(೨) ಆದರೆ, ೪ರಿಂದ ೧೧ರ ವರೆಗಿನ ನಿಯಮಗಳ ಠರಾವುಗಳು ಸರಕಾರಿ ವರ್ಷದ ಪ್ರಾರಂಭಕ್ಕೆ ಕೊನೆಗೊಂಡ ಹೊಸ ಆಕರಣೆಯ ಯಾದಿಯಂತೆ ಪ್ರತಿವರ್ಷ, ಅನ್ವಯಿಸುವವು.

೧೩. ಕರವು, ಯಾವ ಮನೆಯಮೇಲೆ ಅಥವಾ ಭೂಮಿಯಮೇಲೆ ಆಕರಣೆ ಮಾಡಲ್ಪಟ್ಟಿದೆಯೋ ಆ ಮನೆಯ ಇಲ್ಲವೆ ಭೂಮಿಯ ಪ್ರತ್ಯಕ್ಷ ಭೋಗವಟಿ ಮಾಡುವವನ ಕಡೆಯಿಂದ,— ಇಂಥ ಭೋಗವಟಿ ಮಾಡುವವನು

ಅಂಥ ಮನೆಯ ಅಥವಾ ಭೂಮಿಯ ಒಡೆಯನಿದ್ದರೆ— ಪ್ರಥಮತಃ ವಸೂಲ ಮಾಡಲ್ಪಡಬೇಕು.

ಮನೆಯು ಅಥವಾ ಭೂಮಿಯು ಸ್ವತಃ ಒಡೆಯನಿಂದ ಭೋಗವಟಿ ಮಾಡಲ್ಪಡದಿದ್ದರೆ, ಕರವನ್ನು ಮುಖ್ಯವಾಗಿ

ಅ) ಆಸ್ತಿಯು ಭಾಡಿಗೆಯಿಂದ ಕೊಡಲ್ಪಟ್ಟಿದ್ದರೆ, ಭಾಡಿಗೆಗೆ ಕೊಡುವವನ ಕಡೆಯಿಂದ,

ಬ) ಆಸ್ತಿಯು ಪೋಟ ಭಾಡಿಗೆಯಿಂದ ಕೊಡಲ್ಪಟ್ಟಿದ್ದರೆ, ವರಿಷ್ಠ ಭಾಡಿಗೆಗೆ ಕೊಡುವವನಿಂದ,

ಕ) ಅದು ಭಾಡಿಗೆಯಿಂದ ಕೊಡಲ್ಪಡದಿದ್ದರೆ, ಅದನ್ನು ಭಾಡಿಗೆಯಿಂದ ಕೊಡುವ ಅಧಿಕಾರವಿದ್ದ ಮನುಷ್ಯನಿಂದ, ವಸೂಲ ಮಾಡಬೇಕು.

ಡ) ಭೂಮಿಯು ಇಲ್ಲವೆ ಮನೆಯ ಒಡೆಯನು ಗ್ರಾಮವನ್ನು ಬಿಟ್ಟು ಹೋಗಿದ್ದರೆ ಅಥವಾ ಅನ್ಯರೀತಿಯಿಂದ ಸಿಗದಿದ್ದರೆ, ಆ ಭೂಮಿಯು ಅಥವಾ ಮನೆಯು ಯಾವ ಮನುಷ್ಯನ ಸ್ವಾಧೀನವಾಗಿದೆಯೋ ಅವನಿಂದ ಕರವನ್ನು ವಸೂಲ ಮಾಡಬೇಕು.

ಮುಖ್ಯವಾಗಿ ಕರವನ್ನು ಕೊಡಲು ಪಾತ್ರನಿದ್ದ ಮನುಷ್ಯನಿಂದ ಇಂಥ ಕರದ ಸಂಬಂಧದಲ್ಲಿ ಯಾವುದೇ ಹಣವು ವಸೂಲಾಗದಿದ್ದರೆ, ಆ ಹಣದ ಭಾಗವನ್ನು, ನಿಜವೆಂದು ಹೇಳಲ್ಪಡುವ ಯಾದಿಯಲ್ಲಿಯ ಇಡೀ ಮನೆಯ ಮೇಲೆ ಆಕರಿಸಲ್ಪಟ್ಟ ಕರದ ಹಣದ ಪ್ರಮಾಣದ ಮೇಲಿಂದ, ಯಾವ ಮನೆಯ ಸಂಬಂಧ ಆ ಹಣವು ವಸೂಲಾಗತಕ್ಕದ್ದಿರುವದೋ ಆ ಮನೆಯ ಯಾವುದೇ ಭಾಗವನ್ನು ಭೋಗವಟಿ ಮಾಡುವ ಮನುಷ್ಯನಿಂದ ಸರಪಂಚನು ಗೊತ್ತು ಮಾಡುವ ಪ್ರಮಾಣದಲ್ಲಿ ವಸೂಲ ಮಾಡಬಹುದು.

ಈ ವಿಷಯದ ಸಂಬಂಧ ಕೊಡಲ್ಪಟ್ಟ ಸರಪಂಚನ ನಿರ್ಣಯದ ವಿರುದ್ಧ ಪಂಚಾಯತಿಗೆ ಅಪೀಲ ಮಾಡಲು ಬರುವದು, ಮತ್ತು ಪಂಚಾಯತಿಯ ನಿರ್ಣಯವು ಕೊನೆಯದಾಗುವದು.

೧೪. ಪ್ರತಿವರ್ಷ ಕೊಡಲ್ಪಡುವ ಕರವು ಯಾವ ಕಟ್ಟಡದ ಮೇಲೆ ಅಥವಾ ಭೂಮಿಯ ಮೇಲೆ ಯಾವ ವರ್ಷದ ಸಲುವಾಗಿ ಆಕರಿಸಲ್ಪಟ್ಟಿದೆಯೋ ಅಂಥ ಕಟ್ಟಡವು ಅಥವಾ ಭೂಮಿಯು ಇಡೀವರ್ಷ ಇಲ್ಲವೆ ವರ್ಷದ ಭಾಗದಲ್ಲಿ ಖಾಲಿಯಾಗಿ ಮತ್ತು ಭಾಡಿಗೆ ಬರದಲೆ ಉಳಿದಾಗ್ಗೆ ಪಂಚಾಯತವು, ಕಟ್ಟಡವು ಅಥವಾ ಭೂಮಿಯು ಯಾವ ಅವಧಿಗಾಗಿ ಖಾಲಿ ಇರುವದೋ ಆ ಅವಧಿಯ ಪ್ರಮಾಣಕ್ಕನುಸರಿಸಿ ಕರದ ರಕಮನ್ನು ಮಾಫ ಮಾಡಬೇಕು ಇಲ್ಲವೆ ತಿರುಗಿ ಕೊಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಮೇಲೆ ಹೇಳಿದಂತೆ ಕಟ್ಟಡವು ಅಥವಾ ಭೂಮಿಯು ಒಂದರಹಿಂದೊಂದರಂತೆ ೬೦ ದಿವಸಗಳಿಗಿಂತ ಕಡಿಮೆ ಯಲ್ಲದ ಅವಧಿಯ ವರೆಗೆ ಖಾಲಿ ಇರದಿದ್ದರೆ ಮತ್ತು ಭಾಡಿಗೆಯು ಬರದ ಸ್ಥಿತಿಯಲ್ಲಿರದಿದ್ದರೆ ಮತ್ತು ಆ ಕಟ್ಟಡವು ಅಥವಾ ಭೂಮಿಯು ಖಾಲಿ ಅದೆ ಅಥವಾ ಭಾಡಿಗೆಯು ಬರದ ಸ್ಥಿತಿಯಲ್ಲಿದೆ ಎಂಬ ಸಂಗತಿಯಬಗ್ಗೆ ಸರಪಂಚ ನಿಗೆ ಲೇಖೀ ನೋಟೀಸನ್ನು ಕೊಡದವಿನಃ ಇಂಥ ಯಾವುದೇ ಮಾಫಿಗೆ ಅಥವಾ ರಕಮನ್ನು ತಿರುಗಿಕೊಡುವದಕ್ಕೆ ಅಪ್ಪಣೆ ಕೊಡಬಾರದು.

ಮತ್ತೆ ಗೊತ್ತುಪಡಿಸುವದೇನಂದರೆ, ಸರಪಂಚನಿಗೆ ಇಂಥ ನೋಟೀಸು ಕೊಡಲ್ಪಟ್ಟ ತಾರೀಖಿನ ಹಿಂದಿನ ಯಾವುದೇ ಅವಧಿಗಾಗಿ ಯಾವುದೇ ಮಾಫಿಯು ಮಾಡಲ್ಪಡಬಾರದು ಇಲ್ಲವೆ ರಕಮು ತಿರುಗಿ ಕೊಡಲ್ಪಡಬಾರದು.

೧೫. ಕರವು ಸರಪಂಚನಿಂದ ಅಥವಾ ಪಂಚಾಯತದಿಂದ ಈ ಬಗ್ಗೆ ಅಧಿಕಾರ ಪಡೆದ ಯಾವನೇ ಮನುಷ್ಯನಿಂದ ವಸೂಲ ಮಾಡಲ್ಪಡಬೇಕು. ಹಣಪಡೆಯುವವನು ಅಂಥ ಪ್ರತಿಯೊಂದು ವಸೂಲಿಗಾಗಿ ಪಾವತಿಯನ್ನು ಕೊಡಬೇಕು.

೧೬. (೧) ಕರವನ್ನು ರೋಖ ಹಣದಿಂದ ಅಥವಾ ಕೆಲಸ ಮತ್ತು ಕೂಲಿ ಮಾಡಿ ಮುಟ್ಟಿಸಬಹುದು, ಆದರೆ ರೋಖ ಹಣದ ಬದಲಾಗಿ ಕೆಲಸ ಮತ್ತು ಕೂಲಿ ಮಾಡಲಾಗುವದೆಂದು ಸರಪಂಚನಿಗೆ ಲೇಖಿ ನೋಟಿಸನ್ನು ಕೊಡದಿದ್ದರೆ, ರೋಖ ಹಣವನ್ನು ಕೊಡಬೇಕು.

(೨) ನೋಟೀಸು "ಅ" ನಮೂನೆಯಲ್ಲಿರಬೇಕು. ಪಂಚಾಯತವು ನಮೂನೆಯ ಪ್ರತಿಗಳನ್ನು ಬೇಡಿದಾಗ್ಗೆ ಪುಕ್ಕಟೆಯಾಗಿ ಪೂರೈಸಬೇಕು.

(೩) ಇಂಥ ನೋಟೀಸು ಯಾವುದೇ ವರ್ಷ ಎಪ್ರಿಲ ೧ನೇ ತಾರೀಖಿನೊಳಗಾಗಿ ಅಥವಾ ಕರವು ಎಪ್ರಿಲ ೧ನೇ ತಾರೀಖನ್ನು ಬಿಟ್ಟು ಮತ್ತಾವದೊಂದು ದಿವಸ ಅಮಲಿನಲ್ಲಿ ಬಂದರೆ, ಅಮಲಿನಲ್ಲಿ ಬಂದ ದಿವಸಕ್ಕಿಂತ ಮೊದಲು ಕೊಡಲ್ಪಡದಿದ್ದರೆ, ಸರಪಂಚನು ಅನ್ಯಥಾ ಆಜ್ಞೆಮಾಡದವಿನಃ ಆ ನೋಟೀಸು ಕೂಡಲೆ ಮುಂಬರುವ ಎಪ್ರಿಲ ೧ನೇ ತಾರೀಖಿನಿಂದ ಅಮಲಿನಲ್ಲಿ ಬರುವದು.

(೪) ಇಂಥ ನೋಟೀಸು ಒಮ್ಮೆ ಕೊಡಲ್ಪಟ್ಟಬಳಿಕ, ಹಿಂತೆಗೆದುಕೊಳ್ಳಲ್ಪಡುವವರೆಗೆ ಅಥವಾ ಸರಪಂಚನಿಂದ ಮಾಡಲು ನೇಮಿಸಲ್ಪಟ್ಟ ಕೆಲಸವು ಅಥವಾ ಕೂಲಿ ನಿರಾಕರಿಸಲ್ಪಡುವವರೆಗೆ ಅಥವಾ ಕೂಲಿಯ ಬದಲು ಹಣವು ಕೊಡಲ್ಪಡುವವರೆಗೆ ಅಮಲಿನಲ್ಲಿರುವದು. ಇಂಥ ರೋಖ ಹಣವು ಕೊಡಲ್ಪಟ್ಟಾಗ್ಗೆ ಅದನ್ನು ಸ್ವೀಕರಿಸಬೇಕು.

(೫) ರೋಖ ಹಣದ ಬದಲು ಕೆಲಸ ಮತ್ತು ಕೂಲಿ ಮಾಡುವೆನೆಂದು ನೋಟೀಸ ಕೊಟ್ಟ ಕರಕೊಡಲು ಪಾತ್ರರಿದ್ದ ಎಲ್ಲ ಜನರ ಹೆಸರುಗಳನ್ನು ಸರಪಂಚನು ಒಂದು ರಜಿಸ್ಟರದಲ್ಲಿ ದಾಖಲ ಮಾಡಬೇಕು, ಮತ್ತು ಮಾಡಲ್ಪಡುವ ಕೆಲಸ ಮತ್ತು ಕೂಲಿ ಅದನ್ನು ಮಾಡುವ ವೇಳೆಯನ್ನು ಗೊತ್ತುಮಾಡಬೇಕು. ಅವನು, ಮಾಡಲ್ಪಡುವ ಕೆಲಸದ ಬೆಲೆಯನ್ನು, ಅದು ಮಾಡಲ್ಪಟ್ಟ ತಾರೀಖನ್ನು ಅಥವಾ ತಾರೀಖುಗಳನ್ನು ಮತ್ತು ಇಂಥ ತಾರೀಖಿನ ದಿವಸ ಅಥವಾ ಇಂಥ ತಾರೀಖಿನ ಪ್ರತಿಯೊಂದು ದಿವಸ ಮಾಡಲ್ಪಟ್ಟ ಕೆಲಸದ ಅಥವಾ ಕೂಲಿ ಬೆಲೆಯನ್ನು ಆ ರಜಿಸ್ಟರಿನಲ್ಲಿ ದಾಖಲ ಮಾಡಬೇಕು. ದಿನದ ಕೆಲಸದ ರೋಖ ಬೆಲೆಯು ಸರಪಂಚನಿಂದ ರಜಿಸ್ಟರದಲ್ಲಿ ಲೇಖಿಯಲ್ಲಿ ದಾಖಲ ಮಾಡಲ್ಪಡಬೇಕು. ಮಾಡಲ್ಪಟ್ಟ ಕೆಲಸದ ಬೆಲೆಯ ಸಂಬಂಧ ಸರಪಂಚನ ನಿರ್ಣಯವೇ ಕೊನೆಯದಾಗುವದು.

(೬) ಮಾರ್ಚ ೩೧ನೇ ತಾರೀಖಿಗೆ ಮುಗಿಯುವ ಅವಧಿಯಬಗ್ಗೆ ಕೊಡಲ್ಪಡುವ ಪೂರ್ಣ ಹಣದಷ್ಟು ಕೆಲಸವು ಅಥವಾ ಕೂಲಿ ಆ ಅವಧಿಯು ಮುಗಿಯುವ ಮೊದಲು ಮಾಡಲ್ಪಡದಿದ್ದರೆ, ಬಾಕಿ ಉಳಿದ ಹಣವು ಕೂಡಲೆ ರೋಖ ವಸೂಲ ಮಾಡಲ್ಪಡುವದು.

# ಪರಿಶಿಷ್ಟ

| | |
|---|---|
| ೧. ೧೯೪೩ನೇ ಇಸ್ವಿಯ ಜನೇವರಿ ೨೮ನೇ ತಾರೀಖಿನ ಮೊದಲು ಯಾವ ಗ್ರಾಮಪಂಚಾಯತಿಗಳು ಮನೆಯಮೇಲೆ ಕರ ಹೇರುತ್ತಿದ್ದವೋ ಅವು. | ೧೯೪೮ನೇ ಇಸ್ವಿಯ ಜುಲೈ ೧೩ನೇ ತಾರೀಖಿನ ಹೆಲ್ಥ ಮತ್ತು ಲೋಕಲ್ ಗವ್ಹರ್ನಮೆಂಟ ಡಿಪಾರ್ಟಮೆಂಟಿನ ಗವ್ಹರ್ನಮೆಂಟ ನೋಟೀಫಿಕೇಶನ್ ನಂ ಎಸ್ ೧೭೪/೧ (ಬ) ಇದರಲ್ಲಿ ಠರಾಯಿಸಿದ ಅತಿಹೆಚ್ಚಿನ ಮತ್ತು ಅತಿ ಕಡಿಮೆಯ ದರಗಳಿಗೊಳಪಟ್ಟು, ಸದರ ತಾರೀಖಿನ ತತ್ಪೂರ್ವದ ತಾರೀಖಿನ ದಿವಸ ಅಮಲಿನಲ್ಲಿದ್ದ ದರ. |
| ೨. ಇತರ ಎಲ್ಲ ಗ್ರಾಮ ಪಂಚಾಯತಗಳು... | ಭಂಡವಲಿನ ಕಿಮ್ಮತ್ತಿನ ಪ್ರತಿ ನೂರು ರೂಪಾಯಿಗೆ ಅಥವಾ ಅದರ ಭಾಗಕ್ಕೆ ರೂ. ೦-೪-೦ ಇಲ್ಲವೆ ವಾರ್ಷಿಕ ಭಾಡಿಗೆಯ ಕಿಮ್ಮತ್ತಿನ ಮೇಲೆ ನೂರಕ್ಕೆ ೬¼. |

## ನಮೂನೆ "ಅ"

(೧೬ನೇ ನಿಯಮ ನೋಡಿರಿ).

ಸರಪಂಚ*............... ಇವರಿಗೆ.

ನಾನು‡.................. ಮನೆಯ ಕರದ ಸಂಬಂಧ ಪಂಚಾಯತಿಗೆ ರೋಖ ಹಣ ಕೊಡುವ ಬದಲು ಕೆಲಸ ಮತ್ತು ಕೂಲಿ ಮಾಡಲಿಚ್ಛಿಸುತ್ತೇನೆ.

ಸ್ವೀಕರಿಸಲ್ಪಟ್ಟಿತು. ಸಹಿ.

ಸರಪಂಚ. ತಾರೀಖು.

---

* ಗ್ರಾಮದ ಹೆಸರು.

‡ ಕರ ಕೊಡುವವನ ಹೆಸರು.

# ಬೇಡಿಕೆಯ ಪತ್ರ (ರಿಟ್) ದ ನಮೂನೆ.

## ೯೧ನೇ ಕಲಮಿನ ೨ನೇ ಉಪಕಲಮಿನನ್ವಯ ತಪ್ಪುಗಾರನ ಮೇಲೆ ಜಾರಿಮಾಡತಕ್ಕ ಬೇಡಿಕೆಯ ಪತ್ರದ ನಮೂನೆಯನ್ನು ಗೊತ್ತುಮಾಡುವ ಸಂಬಂಧ ೧೧೮ (೧)ನೇ ಕಲಮಿನ (ನ೧) ರಕಮಿನನ್ವೆಯು ಮಾಡಲ್ಪಟ್ಟ ನಿಯಮವು.

ತಾ. ೩-೧-೪೦ನೇ ಇಸ್ವಿಯ ಗವ್ಹರ್ನಮೆಂಟ ಠರಾವ ನಂ ಎಸ್. ೧೭೪/೧೨/೧.

೯೧ನೇ ಕಲಮಿನ ೨ನೇ ಉಪಕಲಮಿನನ್ವಯ ತಪ್ಪುಗಾರನ ಮೇಲೆ ಜಾರಿ ಮಾಡತಕ್ಕ ಬೇಡಿಕೆಯ ಪತ್ರವು ಇದರಜೊತೆಗಿದ್ದ ನಮೂನೆಯಲ್ಲಿರಬೇಕು.

# ಬೇಡಿಕೆಯ ಪತ್ರದ ನಮೂನೆ.

ಅ. ಬ. ......................ವಾಸಸ್ಥಳ..........................ಇವರಿಗೆ.

ಈ ಮೂಲಕ ನಿಮಗೆ ಕೊಡುವ ನೋಟೀಸೇನಂದರೆ,...........ಗ್ರಾಮ ಪಂಚಾಯತವು, ತಾರೀಖು...........ಪ್ರಾರಂಭವಾಗಿ ತಾರೀಖು............ನೇ ದಿವಸ ಮುಗಿಯುವ ಅವಧಿಗಾಗಿ,............(ಇಲ್ಲಿ ಸಂಬಂಧದಿಂದ ಪ್ರಸಂಗಾನುಸಾರ ಸದರ ಕಾನೂನಿನನ್ವಯ ಅಥವಾ ನಿಯಮಗಳನ್ವಯ ಅಥವಾ ಉಪನಿಯಮಗಳನ್ವಯ ಪಂಚಾಯತಿಗೆ ಬರತಕ್ಕ ಕರದ ಅಥವಾ ರಕಮಿನ ವರ್ಣನೆಯನ್ನು ಬರೆಯಬೇಕು). ಬಗ್ಗೆ.... ಇವರ ಕಡೆಯಿಂದ ಸಲ್ಲತಕ್ಕ ಹಣವನ್ನು ಬೇಡಲಾಗಿದೆ, ಮತ್ತು ಈ ಬೇಡಿಕೆಯ ಪತ್ರವು ಜಾರಿಯಾದ ತಾರೀಖಿನಿಂದ ಮೂವತ್ತು ದಿವಸಗಳೊಳಗೆ ಸದರೀ ಹಣವನ್ನು ಈ ಬೇಡಿಕೆಯ ಪತ್ರದ ಫೀ ಎಂದು ರೂ.........ಆ.....ಪೈ.... ಸಹಿತವಾಗಿ............ಇಲ್ಲಿಯ ಗ್ರಾಮಪಂಚಾಯತದ ಕಚೇರಿಯಲ್ಲಿ ತುಂಬದಿದ್ದರೆ ಅಥವಾ ಸದರೀ ಹಣವನ್ನು ಕೊಡದಿರುವದಕ್ಕೆ ಸಾಕಷ್ಟು ಕಾರಣವನ್ನು ,ಗ್ರಾಮಪಂಚಾಯತಿಗೆ ತೃಪ್ತಿಯಾಗುವಂತೆ ತೋರಿಸಿ ಕೊಡದಿದ್ದರೆ, ಖರ್ಚು ಸಹಿತ ಸದರೀ ಹಣವನ್ನು ವಸೂಲ ಮಾಡುವದಕ್ಕೆ ಜಪ್ತಿಯ ವಾರಂಟನ್ನು ತೆಗೆಯಲಾಗುವದು.

ಈ ಹೊತ್ತು ತಾರೀಖು...........ಮಾಹೆ ೧೯೫....ನೇ ಇಸವಿ.

(ಸಹಿ).

.ಗ್ರಾಮ ಪಂಚಾಯತ ಅಪ್ಪಣೆಯ ಮೇರೆಗೆ.

## ೯೧ (೩)ನೇ ಕಲಮಿನನ್ವಯ ವಾರಂಟಿನ ನಮೂನೆಯನ್ನೂ, ತಪ್ಪುಗಾರನ ಜಂಗಮ ಆಸ್ತಿಯ ಜಪ್ತಿ, ಲಿಲಾವು ಮತ್ತು ಮಾರಾಟ ಇವುಗಳ ರೀತಿಯನ್ನೂ ಗೊತ್ತುಮಾಡುವದಕ್ಕೆ ೧೦೮ (೧)ನೇ ಕಲಮಿನ ೨ನೇ ರಕಮಿನನ್ವಯ ಮಾಡಲ್ಪಟ್ಟ ನಿಯಮಗಳು.

೧. ಯಾವ ಹಣದ ಬಗ್ಗೆ ಯಾವ ಮನುಷ್ಯನ ಮೇಲೆ ಬೇಡಿಕೆಯ ಪತ್ರವು ಜಾರಿಮಾಡಲ್ಪಟ್ಟಿರುವದೋ ಅಂಥ ಹಣವನ್ನು ಕೊಡಲಿಕ್ಕೆ ಪಾತ್ರ ನಿರುವ ಮನುಷ್ಯನು ಬೇಡಿಕೆಯ ಪತ್ರವು ಜಾರಿಮಾಡಲ್ಪಟ್ಟ ತಾರೀಖಿನಿಂದ ಮೂವತ್ತು ದಿವಸಗಳೊಳಗಾಗಿ,—

೧) ಸದರಿ ಬೇಡಿಕೆಪತ್ರದಲ್ಲಿ ಬೇಡಿದ ಹಣವನ್ನು ಕೊಡದಿದ್ದರೆ, ಅಥವಾ

೨) ಬೇಡಿದ ಹಣವನ್ನು ಕೊಡದಿರುವ ಬಗ್ಗೆ ಗ್ರಾಮಪಂಚಾಯತಕ್ಕೆ ತೃಪ್ತಿಯಾಗುವಂತೆ ಸಾಕಷ್ಟು ಕಾರಣಗಳನ್ನು ತೋರಿಸದಿದ್ದರೆ,

ಈ ನಿಯಮಗಳಿಗೆ ಜೋಡಿಸಿದ "ಅ" ನಮೂನೆಯಲ್ಲಿ ಒಂದು ಜಪ್ತಿಯ ವಾರಂಟನ್ನು ತೆಗೆದು ಅದನ್ನು ಅವನ ಮೇಲೆ ಜಾರಿಮಾಡಬೇಕು.

೨. ಇಂಥ ಪ್ರತಿಯೊಂದು ವಾರಂಟಿನ ಮೇಲೆ ಸರಪಂಚನು ಅಥವಾ ಉಪಸರಪಂಚನು ಸಹಿಮಾಡಬೇಕು; ಮತ್ತು ಅದನ್ನು ಪಂಚಾಯತವು ಈ ಬಗ್ಗೆ ಅಧಿಕಾರಕೊಡಬಹುದಾದಂಥ ಪಂಚಾಯತದ ಅಧಿಕಾರಿಯು ಜಾರಿಮಾಡಬೇಕು.

೩. ೨ನೇ ನಿಯಮದನ್ವಯ ವಾರಂಟನ್ನು ಜಾರಿಮಾಡಲು ಅಧಿಕಾರ ಪಡೆದ ಅಧಿಕಾರಿಯು ಈ ಕೆಳಗಿನ ಕರಾರುಗಳಿಗೆ ಮತ್ತು ಅಪವಾದಗಳಿಗೆ ಒಳಪಟ್ಟು, ವಾರಂಟಿನಲ್ಲಿ ಬರೆಯಲ್ಪಟ್ಟ ಮನುಷ್ಯನ ಯಾವುದೇ ಮಾಲನ್ನು ಅಥವಾ ಜಂಗಮ ಆಸ್ತಿಯನ್ನು ಸಿಕ್ಕಸ್ಥಳದಲ್ಲಿ ಜಪ್ತಮಾಡಬೇಕು.—

ಅ) ಕೆಳಗಿನ ಆಸ್ತಿಯನ್ನು ಜಪ್ತಮಾಡತಕ್ಕದ್ದಲ್ಲ:—

೧) ತಪ್ಪುಗಾರನ, ಅವನ ಹೆಂಡತಿಯ ಮತ್ತು ಮಕ್ಕಳ ಅವಶ್ಯಕ ಧರಿಸುವ ವಸ್ತ್ರಗಳು, ಅಡಿಗೆಯ ಪಾತ್ರೆಗಳು, ಮಂಚಗಳು ಮತ್ತು ಹಾಸಿಗೆಗಳು, ಮತ್ತು ಧಾರ್ಮಿಕ ಸಾಂಪ್ರದಾಯದ ಮೇರೆಗೆ ಯಾವಳೇ ಸ್ತ್ರೀಯಳು ತೆಗೆದುಕೊಡದಂಥ ಅವಳ ಮೈಮೇಲಿನ ಆಭರಣಗಳು. ೨) ಕೈಗಾರಿಕೆಯ ಕೆಲಸಮಾಡು ವವರ ಉಪಕರಣಗಳು, ಮತ್ತು ೩) ತಪ್ಪುಗಾರನು ಒಕ್ಕಲಿಗ ನಿದ್ದರೆ, ಅವನ ಒಕ್ಕಲತನದ ಸಾಧನಗಳು, ಬೀಜ, ಧಾನ್ಯ, ಮತ್ತು ಅವನ ಉಪಜೀವನವನ್ನು ಸಾಗಿಸಲಿಕ್ಕೆ ಅವಶ್ಯವಿರುಬಹು ದಾದಂಥ ದನಗಳು.

ಬ) ಜಪ್ತಮಾಡಲ್ಪಟ್ಟ ಆಸ್ತಿಯ ಬೆಲೆಯು, ವಾರಂಟಿನನ್ವಯ ವಸೂಲ ಮಾಡತಕ್ಕ ಹಣಕ್ಕೆ, ಆದಷ್ಟು ಮಟ್ಟಿಗೆ ಸರಿಯಾಗಿ ರಬೇಕು. ಮತ್ತು ೨ನೇ ನಿಯಮದನ್ವಯ ವಾರಂಟಿನ ಮೇಲೆ ಸಹಿ ಮಾಡಲಿಕ್ಕೆ ಅಧಿಕಾರ ಪಡೆದ ಮನುಷ್ಯನು, ಜಪ್ತಮಾಡ ಲ್ಪಟ್ಟ ಆಸ್ತಿಯು ಜಪ್ತಮಾಡಲ್ಪಡಬಾರದಾಗಿತ್ತೆಂದು ಅಭಿ ಪ್ರಾಯಪಟ್ಟರೆ, ಸದರೀ ಆಸ್ತಿಯು ಜಪ್ತಮಾಡುವ ಕಾಲಕ್ಕೆ ಯಾವನ ವಶದಲ್ಲಿತ್ತೋ ಅವನಿಗೆ ಕೂಡಲೇ ಅದನ್ನು ತಿರುಗಿ ಕೊಡಬೇಕು.

೪. ೧ನೇ ನಿಯಮದನ್ವಯ ತೆಗೆಯಲ್ಪಟ್ಟ ಜಪ್ತಿಯ ವಾರಂಟನ್ನು ಜಾರಿಮಾಡಲಿಕ್ಕೆ ೨ನೇ ನಿಯಮದನ್ವಯ ಅಧಿಕಾರ ಪಡೆದ ಅಧಿಕಾರಿಯು, ಇಂಥ ವಾರಂಟಿನನ್ವಯ ತಾನು ಜಪ್ತಮಾಡಿದ ಮಾಲಿನ ಮತ್ತು ಜಂಗಮ ಆಸ್ತಿಯ ಒಂದು ಯಾದಿಯನ್ನು ಕೂಡಲೇ ಮಾಡಬೇಕು. ಮತ್ತು ಜಪ್ತ ಮಾಡುವ ಕಾಲಕ್ಕೆ ಅವು ಯಾವ ಮನುಷ್ಯನ ವಶದಲ್ಲಿದ್ದವೋ ಆ ಮನುಷ್ಯ ನಿಗೆ ಈ ನಿಯಮಗಳಿಗೆ ಜೋಡಿಸಿದ ' ಬ ' ನಮೂನೆಯಲ್ಲಿ ಒಂದು ಲೇಖೀ ನೋಟೀಸನ್ನು ಅದೇ ಕಾಲಕ್ಕೆ ಕೊಡಬೇಕು; ಮತ್ತು ಆ ನೋಟಿಸಿನಲ್ಲಿ, ನೋಟೀಸಿನನ್ವಯ ವಸೂಲಾಗತಕ್ಕ ಹಣವನ್ನು ವಸೂಲಿಯ ವೆಚ್ಚ ಸಹಿತ, ಸದರೀ ನೋಟೀಸಿನ ತಾರೀಖಿನಿಂದ ಏಳು ದಿವಸಗಳಲ್ಲಿ ಗ್ರಾಪಂಚಾಯತದ

ಕಚೇರಿಯಲ್ಲಿ ಅವನು ಕೊಡಲಿಕ್ಕೆ ತಪ್ಪಿದರೆ, ಸದರೀ ಮಾಲನ್ನು ಮತ್ತು ಜಂಗಮ ಆಸ್ತಿಯನ್ನು ಮಾರಾಟ ಮಾಡಲಾಗುವದೆಂದು ಹೇಳಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಸದರ ಆಸ್ತಿಯು ಜಪ್ತಮಾಡಲ್ಪಟ್ಟ ನಂತರ ಮತ್ತು ಅದು ಒಯ್ಯಲ್ಪಡುವ ಮೊದಲು, ಸದರಿ ತಪ್ಪುಗಾರನಿಂದ ಬರತಕ್ಕ ಹಣ, ಬೇಡಿಕೆಯ ಪತ್ರವನ್ನು ಮತ್ತು ವಾರಂಟನ್ನು ಜಾರಿ ಮಾಡುವದಕ್ಕೆ ಮತ್ತು ಸದರಿ ಆಸ್ತಿಯನ್ನು ಜಪ್ತಮಾಡುವದಕ್ಕೆ ಆನುಷಂಗಿಕವಾದ ಎಲ್ಲ ವೆಚ್ಚಗಳು ಸಹಿತ ಕೊಡಲ್ಪಟ್ಟರೆ, ವಾರಂಟನ್ನು ತೆಗೆಯಲು ಅಧಿಕಾರ ಪಡೆದ ಅಧಿಕಾರಿಯು ಸದರೀ ವಾರಂಟನ್ನು ತಹಕೂಬ ಇಡಬಹುದು ಇಲ್ಲವೆ ತೆಗೆದುಹಾಕಬಹುದು.

೫. ೪ನೇ ನಿಯಮದನ್ವಯ ಕೊಡಲ್ಪಟ್ಟ ನೋಟೀಸಿನ ಒಂದು ಪ್ರತಿಯನ್ನು ಗ್ರಾಮಪಂಚಾಯತದ ಕಚೇರಿಯಲ್ಲಿ ಹಚ್ಚಬೇಕು.

೬. ಜಪ್ತಮಾಡಲ್ಪಟ್ಟ ಮಾಲನ್ನು ಮತ್ತು ಜಂಗಮ ಆಸ್ತಿಯನ್ನು ೪ನೇ ನಿಯಮದನ್ವಯ ಜಾರಿಮಾಡಲ್ಪಟ್ಟ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಅವಧಿಯು ಮುಗಿದ ನಂತರ, ಗ್ರಾಮಪಂಚಾಯತಿಯು, ಗ್ರಾಮಪಂಚಾಯತಿಯ ಕಚೇರಿಯಲ್ಲಿ ಜಾಹೀರ ಲಿಲಾವಿನಿಂದ ಮಾರಾಟ ಮಾಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಗ್ರಾಮಪಂಚಾಯತದ ಯಾವನೇ ಸೇವಕನಿಗೆ ಅಥವಾ ಅಧಿಕಾರಿಗೆ ಇಂಥ ಲಿಲಾವಿನಲ್ಲಿ ಬೇಡಲಿಕ್ಕೆ ಅಪ್ಪಣೆಯಿಲ್ಲ.

೭. ಜಪ್ತಮಾಡಿದ ಮಾಲಿನ ಮಾರಾಟದ ಹಣದಲ್ಲಿ ಗ್ರಾಮಪಂಚಾಯತಕ್ಕೆ ಸಲ್ಲತಕ್ಕ (ಮಾಗಣಿ) ಹಣವನ್ನು ವಜಾಮಾಡಿದ ಬಳಿಕ ಏನಾದರೂ ಶಿಲ್ಕು ಉಳಿದರೆ, ಅದನ್ನು ಗ್ರಾಮಪಂಚಾಯತದ ಫಂಡಿಗೆ ಜಮಾ ಮಾಡಬೇಕು. ಆದರೆ, ಸದರಿ ಮಾರಾಟದ ತಾರೀಖಿನಿಂದ ಒಂದು ವರ್ಷದೊಳಗಾಗಿ, ಇಂಥ ಶಿಲ್ಕು ಉಳಿದ ಹಣದ ಬಗ್ಗೆ ಗ್ರಾಮಪಂಚಾಯತಿಗೆ ಲೇಖಿ ಅರ್ಜಿಮಾಡಿ ಹಕ್ಕು ಸಾಧಿಸಲ್ಪಟ್ಟರೆ, ಜಪ್ತಿಯ ಕಾಲಕ್ಕೆ ಸದರಿ ಮಾಲು ಮತ್ತು ಜಂಗಮ ಆಸ್ತಿಗಳು ಯಾರ ವಶದಲ್ಲಿದ್ದವೋ ಆ ಮನುಷ್ಯನಿಗೆ ಆ ಶಿಲ್ಕು ಉಳಿದ ಹಣವನ್ನು ತಿರುಗಿ ಕೊಡಬೇಕು.

# ನಮೂನೆ ಅ.

## ಜಪ್ತಿ ವಾರಂಟಿನ ನಮೂನೆ

(೧ನೇ ನಿಯಮವನ್ನು ನೋಡಿರಿ).

(ವಾರಂಟನ್ನು ಜಾರಿಮಾಡುವ ಅಧಿಕಾರ ಪಡೆದ ಅಧಿಕಾರಿಯ ಹೆಸರನ್ನು ಇಲ್ಲಿ ಬರೆಯಬೇಕು).

ಈ ಗ್ರಾಮದ ಅ. ಬ. ಇವನು/ಇವಳು ಯಾವು ದರ ಬಗ್ಗೆ ಅವನ/ಅವಳ ಮೇಲೆ ತಾ............ ಮಾಹೆ...........೧೯೫....ಇಸ್ವಿಯ ದಿವಸ ಜಾರಿ ಮಾಡಿತ್ತೋ ಆ ರಕಾನೆಯಲ್ಲಿ ಹೇಳಿದ ಕರದ/ಫೀಯ ಬಗ್ಗೆ ಬರತಕ್ಕ ಹಣ ರೂ........ ಕೊಟ್ಟಿರುವದಿಲ್ಲ. ಅಥವಾ ಅದನ್ನು ಕೊಡದಿದ್ದದ್ದರ ಬಗ್ಗೆ ನನಗೆ ತೃಪ್ತಿಯಾಗುವಂತೆ, ಸಾಕಷ್ಟು ಕಾರಣವನ್ನು ತೋರಿಸಿರುವದಿಲ್ಲ;

ಮತ್ತು ಆ ಹಣದ ಬೇಡಿಕೆಯ ಪತ್ರವು ಅವನ/ಅವಳ ಮೇಲೆ ಜಾರಿ ಮಾಡಲ್ಪಟ್ಟ ದಿನದಿಂದ ಮೂವತ್ತು ದಿವಸಗಳು ಮುಗಿದದ್ದರಿಂದ;

ಈ ಮೂಲಕ ನಿಮಗೆ ಆಜ್ಞೆಮಾಡುವದೇನಂದರೆ, ನೀವು ಸದರಿ ಅ. ಬ. ಇವನ/ಇವಳ ಕಡೆಯಿಂದ, ಈ ಕೆಳಗಿನಂತೆ ಅಂದರೆ:-

ರೂ. ಆ. ಪೈ

ಸದರ ಕರದ/ಫೀಯ ಬಗ್ಗೆ .... ....

ಬೇಡಿಕೆಯ ಪತ್ರವನ್ನು ಜಾರಿಮಾಡಿದ ಬಗ್ಗೆ....

ಒಟ್ಟು

ಹೀಗೆ ಬರತಕ್ಕದ್ದಿದ್ದು ಸದರಿ...........ರೂಪಾಯಿಗಳ ಹಣದ ಬೆಲೆಯ ವರೆಗೆ ಅವನ/ಅವಳ ಮಾಲನ್ನು ಮತ್ತು ಜಂಗಮ ಆಸ್ತಿಯನ್ನು ಜಪ್ತಮಾಡ

ಬೇಕು.; ಮತ್ತು ನೀವು ಈ ವಾರಂಟಿನನ್ವಯ ಜಪ್ತಮಾಡಿದ ಮಾಲಿನ ಎಲ್ಲ ವಿವರಗಳ ದಾಖಲೆಯನ್ನು ವಾರಂಟ ಸಹಿತ ಕೂಡಲೆ ನನ್ನ ಕಡೆಗೆ ಕಳುಹಿಸಬೇಕು.

ಈ ಹೊತ್ತು ತಾರೀಖು.......ನೇ.......೧೯೫....ನೇ ಇಸವಿ.

(ಸಹಿ).

ಸರಪಂಚ (ಅಥವಾ, ಪ್ರಸಂಗಾನುಸಾರ, ಉಪಸರಪಂಚ).

# ನಮೂನೆ ಬ

## ಯಾದಿ ಮತ್ತು ನೋಟೀಸಿನ ನಮೂನೆ

(೪ನೇ ನಿಯಮವನ್ನು ನೋಡಿರಿ).

ಅ. ಬ. .ವಾಸಸ್ಥಳ...............ಇವರಿಗೆ.

ಈ ಮೂಲಕ ನಿಮಗೆ ಕೊಡುವ ನೋಟೀಸೇ ನಂದರೆ, ರಕಾನೆಯಲ್ಲಿ ಹೇಳಿದ ಕರದ/ಫೀಯ ಬಗ್ಗೆ ಬರತಕ್ಕ...............ಬೆಲೆಯ ಸಂಬಂಧ ಮತ್ತು ಬೇಡಿಕೆಯ ಪತ್ರದ ಜಾರಿಗಾಗಿ ಫೀ ಯೆಂದು ಬರತಕ್ಕ ರೂಪಾಯಿಗಳಿಗಾಗಿ ಈ ಕೆಳಗಿನ ಯಾದಿಯಲ್ಲಿ ಹೇಳಿದ ಮಾಲನ್ನು ಮತ್ತು ಜಂಗಮ ಆಸ್ತಿಯನ್ನು ನಾನು ಇಂದು ಜಪ್ತಮಾಡಿರುತ್ತೇನೆ; ಮತ್ತು ಈ ನೋಟೀಸಿನ ತಾರೀಖಿ ನಿಂದ ಏಳು ದಿವಸಗಳೊಳಗಾಗಿ ನೀವು...............ಗ್ರಾಮಪಂಚಾಯತದ

ಕಚೇರಿಯಲ್ಲಿ ಸದರ ಹಣವನ್ನು ವಸೂಲಿಯ ವೆಚ್ಚಸಹಿತವಾಗಿ, ಕೊಡದಿದ್ದರೆ ಸದರೀ ಮಾಲನ್ನು ಮತ್ತು ಜಂಗಮ ಆಸ್ತಿಯನ್ನು ಮಾರಾಟ ಮಾಡಲಾಗುವದು.

ಈ ಹೊತ್ತು ತಾರೀಖು...........ಮಾಹೇ...........೧೯೫....ಇಸವಿ.

( ವಾರಂಟನ್ನು ಜಾರಿಮಾಡುವ ಅಧಿಕಾರಿಯ ಸಹಿ ).

ಯಾದಿ

(ಜಪ್ತಮಾಡಿದ ಮಾಲಿನ ಮತ್ತು ಜಂಗಮ ಆಸ್ತಿಯ ವಿವರಗಳನ್ನು ಇಲ್ಲಿ ಬರೆಯಬೇಕು).

## ೯೧ (೪)ನೇ ಕಲಮಿನನ್ವಯ ಫೀ ದರಗಳನ್ನು ಗೊತ್ತುಪಡಿಸುವದಕ್ಕಾಗಿ ೧೦೪ (೧)ನೇ ಕಲಮಿನ (೬) ರಕಮಿನನ್ವಯ ಮಾಡಲ್ಪಟ್ಟ ನಿಯಮಗಳು.

### ೧. ಬೇಡಿಕೆಯ ಪತ್ರ (ರಿಟ್ಸ):—

ಸದರ ಆಕ್ಟಿನ ೯೧ನೇ ಕಲಮಿನ ೨ನೇ ಉಪಕಲಮಿನನ್ವಯ ಹೊರಡಿಸಲ್ಪಟ್ಟ ಪ್ರತಿಯೊಂದು ಬೇಡಿಕೆಯ ಪತ್ರದಬಗ್ಗೆ ಈ ಕೆಳಗಿನ ದರದಂತೆ ಫೀ ಆಕರಣೆ ಮಾಡಬೇಕು:—

(೧) ಬೇಡಿಕೆಯ ರಕಮು ೫ ರೂಪಾಯಿಗಿಂತ ಹೆಚ್ಚಿರದಿದ್ದಾಗ್ಗೆ ೦–೧–೦

(೨) ಬೇಡಿಕೆಯ ರಕಮು ೫ ರೂಪಾಯಿಗಿಂತ ಹೆಚ್ಚಿದ್ದು, ೨೫ ರೂಪಾಯಿಗಿಂತ ಹೆಚ್ಚಿರದಿದ್ದಾಗ್ಗೆ ೦–೨–೦

(೩) ಬೇಡಿಕೆಯ ರಕಮು ೨೫ ರೂಪಾಯಿಗಿಂತ ಹೆಚ್ಚಿದ್ದು ೧೦೦ ರೂಪಾಯಿಗಿಂತ ಹೆಚ್ಚಿರದಿದ್ದಾಗ್ಗೆ ೦-೪-೦

(೪) ಬೇಡಿಕೆಯ ರಕಮು ೧೦೦ ರೂಪಾಯಿಗಿಂತ ಹೆಚ್ಚಿದ್ದಾಗ್ಗೆ ಮೊದಲಿನ ೧೦೦ ರೂಪಾಯಿಗಳಿಗೆ ೪ ಆಣೆ ಮತ್ತು ಹೆಚ್ಚಿನ ಪ್ರತಿ ೨೫ ರೂಪಾಯಿಗಳ ರಕಮಿನ ಅಥವಾ ಅದರ ಭಾಗಕ್ಕೆ ೦-೧-೦

೨. ಜಪ್ತಿಯ ವಾರಂಟುಗಳು:—

೯೧ನೇ ಕಲಮಿನ ೩ನೇ ಉಪಕಲಮಿನನ್ವಯ ಮಾಡಲ್ಪಡುವ ಪ್ರತಿಯೊಂದು ಜಪ್ತಿಯ ಸಂಬಂಧ ಫೀಯನ್ನು, ಜಪ್ತಿಯಿಂದ ವಸೂಲಮಾಡಲ್ಪಡುವ ಪ್ರತಿ ೫ ರೂಪಾಯಿಗಳ ರಕಮಿಗಾಗಿ ಅಥವಾ ಅದರ ಭಾಗಕ್ಕಾಗಿ ೨ ಆಣೆ ದರದಂತೆ ಆಕರಣೆ ಮಾಡಬೇಕು.

೩. ಜಪ್ತ ಮಾಡಲ್ಪಟ್ಟ ಪ್ರಾಣಿಗಳ ಪೋಷಣೆಯ ವೆಚ್ಚ:—

ಸದರ ಆಕ್ಟಿನ ೯೧ನೇ ಕಲಮಿನ ೩ನೇ ಉಪಕಲಮಿನನ್ವಯ ಜಪ್ತ ಮಾಡಲ್ಪಟ್ಟ ಯಾವುದೇ ಪ್ರಾಣಿಯ ಪೋಷಣೆಯ ವೆಚ್ಚವನ್ನು ಈ ಕೆಳಗಿನ ದರದಂತೆ ಆಕರಣೆ ಮಾಡಬೇಕು.

(೧) ಪ್ರತಿಯೊಂದು ಆನೆಗೆ ಪ್ರತಿ ದಿವಸಕ್ಕೆ ೦-೮-೦

(೨) ಪ್ರತಿಯೊಂದು ಒಂಟೆಗೆ, ಅಥವಾ ಎಮ್ಮೆ ಅಥವಾ ಕೋಣಕ್ಕೆ ಪ್ರತಿ ದಿವಸಕ್ಕೆ ೦-೬-೦

(೩) ಪ್ರತಿಯೊಂದು ಗಂಡು ಕುದುರೆ, ಹೆಣ್ಣು ಕುದುರೆಗೆ ಕಸಿಮಾಡಿದ ಕುದುರೆಗೆ, ತಟ್ಟು ಕುದುರೆಗೆ, ಹೋರಿಗೆ, ಎತ್ತಿಗೆ ಅಥವಾ ಆಕಳಕ್ಕೆ ಪ್ರತಿ ದಿವಸಕ್ಕೆ ೦-೪-೦

(೪) ಪ್ರತಿಯೊಂದು ಕುದುರೆಯ ಮರಿಗೆ, ಆಕಳ ಕರುವಿಗೆ, ಮಣಕಕ್ಕೆ, ಹೇಸರಗತ್ತಿಗೆ ಅಥವಾ ಕತ್ತಿಗೆ ಪ್ರತಿ ದಿವಸಕ್ಕೆ ೦-೨-೦

(ಇ) ಪ್ರತಿಯೊಂದು ಟಗರಿಗೆ, ಕುರಿಗೆ, ಹಂದಿಗೆ, ಪಕ್ಷಿಗೆ, ಕುರಿಮರಿಗೆ, ಆಡಿಗೆ, ಅಥವಾ ಆಡಿನಮರಿಗೆ ೦–೧–೦

**ವಿವರಣೆ** ಈ ನಿಯಮದ ಉದ್ದೇಶಗಳಿಗಾಗಿ, ಯಾವದೊಂದು ಕುದುರೆಯಮರಿಯು (ಗಂಡಾಗಲಿ ಇಲ್ಲವೆ ಹೆಣ್ಣಾಗಲಿ) ತನ್ನ ವಯಸ್ಸಿನ ಮೂರು ವರ್ಷಗಳನ್ನು ಮುಗಿಸಿದಮೇಲೆ, ಅದನ್ನು ಗಂಡು ಇಲ್ಲವೆ ಹೆಣ್ಣು ಕುದುರೆ ಎಂದು ತಿಳಿಯಬೇಕು. ಯಾವದೊಂದು ಮಣಕವು........ಅದನ್ನು ಆಕಳವೆಂದು ತಿಳಿಯಬೇಕು.

## ಗ್ರಾಮ ಪಂಚಾಯತಿಯ ಕರ ಮತ್ತು ಫೀಗಳ ಸಂಬಂಧ ನಿಯಮಗಳು.

೮೯ (೨)ನೇ ಕಲಮಿನನ್ವಯ ಕರ ಮತ್ತು ಫೀಗಳನ್ನು ಕೂಡ್ರಿಸತಕ್ಕ ದರ ಮತ್ತು ರೀತಿಯನ್ನು ಗೊತ್ತುಮಾಡುವ ವಿಷಯದಲ್ಲಿ ೧೦೮ (೧)ನೇ ಕಲಮಿನ (ಮ) ಮತ್ತು (ಸ) ರಕಮುಗಳನ್ವಯ ಮಾಡಿದ ನಿಯಮಗಳು.

ತಾ. ೪ನೇ ಜನೇವರಿ ೧೯೪೬ನೇ ಇಸ್ವಿಯ ನೋಟಿಫಿಕೇಶನನ್ವಯ ತಿದ್ದುಪಡಿಯಾದದ್ದು.



# ೧ನೇ ಭಾಗ— ಸಾಮಾನ್ಯ ನಿಯಮಗಳು.

೧. ಈ ನಿಯಮಗಳಿಗೆ ೧೯೪೪ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತಿಯ ಕರ ಮತ್ತು ಫೀ ಸಂಬಂಧದ ನಿಯಮಗಳೆಂದು ಕರೆಯಬಹುದು.

೨. ಪ್ರತಿಯೊಂದು ಪಂಚಾಯತವು ೧೯೩೩ನೇ ಇಸ್ವಿಯ ಮುಂಬಯಿ ಗ್ರಾಮ ಪಂಚಾಯತ ಕಾನೂನಿನನ್ವಯ ಕರ ಅಥವಾ ಫೀಯನ್ನು ಕೂಡ್ರಿಸುವದನ್ನು ಅಥವಾ ಹೆಚ್ಚಿಸುವವದನ್ನು ಠರಾಯಿಸುವ ಮೊದಲು ಈ ಕೆಳಗಿನ ಕೆಲಸವನ್ನು ನಡಿಸುವ ರೀತಿಯನ್ನು ಅನುಸರಿಸಬೇಕು:—

ಅ) ಪಂಚಾಯತಿಯು ಹೇರಬೇಕೆಂದು ಅಥವಾ ಹೆಚ್ಚಿಸಬೇಕೆಂದು ಯೋಚಿಸಿದ ಕರವನ್ನು ಅಥವಾ ಫೀಯನ್ನು ಪಂಚಾಯತಿಯ ಸಭೆಯಲ್ಲಿ ಠರಾವ ಪಾಸುಮಾಡಿ, ಅರಿಸಿ ಕೊಳ್ಳಬೇಕು.

ಬ) ಪಂಚಾಯತಿಯು ಯಾವ ಕರವನ್ನು ಅಥವಾ ಫೀಯನ್ನು ಹೇರುವ ಯೋಜನೆಯನ್ನು ಸಂಬಂಧಿಸಿದ ನಿಯಮದೊಂದಿಗೆ ಗ್ರಾಮದಲ್ಲಿ ಡಂಗುರದಿಂದ ಸಾರಿ, ಪಂಚಾಯತಿಯ ಕಚೇರಿಯಲ್ಲಿ ಅಥವಾ ಗ್ರಾಮದ ಚಾವಡಿಯಲ್ಲಿ ನೋಟೀಸನ್ನು ಹಚ್ಚಿ ಪ್ರಸಿದ್ಧ ಮಾಡಬೇಕು ಮತ್ತು ಆ ನೋಟೀಸಿನಲ್ಲಿ ಇಂಥ ಪ್ರಕಟನೆಯ ತಾರೀಖಿನಿಂದ ಒಂದು ತಿಂಗಳಿಗಿಂತ ಬೇಗ ಅಲ್ಲದ ಯಾವ ತಾರೀಖಿನ ದಿವಸ ಅಥವಾ ಯಾವ ತಾರೀಖಿನ ನಂತರ ಪಂಚಾಯತವು ಸದರ ಯೋಜನೆಯನ್ನು ವಿಚಾರಿಸುವದೆಂಬುದನ್ನು ನಿರ್ದಿಷ್ಟ ಮಾಡಬೇಕು.

ಕ) ಪಂಚಾಯತಿಯು ಯೋಚಿಸಿದ ಕರವನ್ನು ಅಥವಾ ಫೀಯನ್ನು ಹೇರಲಿಕ್ಕೆ ಇಲ್ಲವೆ ಹೆಚ್ಚಿಸಲು ವಿರೋಧಮಾಡುವ ಗ್ರಾಮದ ಯಾವನೇ ರಹವಾಸಿಯು, ೩ನೇ ನಿಯಮದನ್ವಯ ಪ್ರಸಿದ್ಧ ಮಾಡಲ್ಪಟ್ಟ ನೋಟೀಸಿನಲ್ಲಿ ನಿರ್ದಿಷ್ಟಮಾಡಿದ ತಾರೀಖಿನ ದಿವಸ ಅಥವಾ ಅದಕ್ಕೂ ಮೊದಲು ಲೇಖಿಯಿಂದ ಇಲ್ಲವೆ

ಪಂಚಾಯತವು ಸದರೀ ಯೋಜನೆಯನ್ನು ವಿಚಾರಿಸುವ ದಿನ ಅಥವಾ ದಿನಗಳಲ್ಲಿ ಬಾಯಿಯಿಂದ ಯಾವುದೇ ವಿರೋಧ ಅಥವಾ ಸೂಚನೆಯನ್ನು ಮಾಡಬಹುದು.

ಡ) ಪಂಚಾಯತವು ೩ನೇ ನಿಯಮದನ್ವಯ ಗೊತ್ತುಮಾಡಿದ ತಾರೀಖಿನ ದಿವಸ ಮತ್ತು ಅವಶ್ಯಕಂಡರೆ ನಂತರದ ದಿವಸಗಳಲ್ಲಿ (ಕ) ರಕಮಿನನ್ವಯ ಮಾಡಲ್ಪಟ್ಟ ಎಲ್ಲ ವಿರೋಧಗಳನ್ನು ಅಥವಾ ಸೂಚನೆಗಳನ್ನು ವಿಚಾರಮಾಡಬೇಕು. ಮತ್ತು ಅದು ಸದರೀ ಯೋಜನೆಯನ್ನು ಮಂಜೂರ ಮಾಡಬಹುದು, ಅದರಲ್ಲಿ ತಿದ್ದುಪಡೆ ಮಾಡಬಹುದು ಇಲ್ಲವೆ ತಿರಸ್ಕರಿಬಹುದು.

೩. ಪಂಚಾಯತವು ೮೯ನೇ ಕಲಮಿನ ೨ನೇ ಉಪಕಲಮಿನಲ್ಲಿ ನಿರ್ದಿಷ್ಟ ಮಾಡಲ್ಪಟ್ಟ ಯಾವುದೇ ಕರ ಅಥವಾ ಫೀಯನ್ನು ಹೇರುವದನ್ನು ಅಥವಾ ಹೆಚ್ಚಿಸುವದನ್ನು ಠರಾಯಿಸಿದಾಗ್ಗೆ, ಸದರ ಕರ ಅಥವಾ ಫೀಗೆ ಸಂಬಂಧಿಸಿದ ನಿಯಮುಸಹಿತವಾಗಿ ಅದರಲ್ಲಿ ನಿರ್ದಿಷ್ಟಪಡಿಸಿದ ದರದಂತೆ ಮತ್ತು ಠರಾಯಿಸಿದ ಕರ ಅಥವಾ ಫೀಯನ್ನು ಹೇರಲಾಗುವದು ಅಥವಾ ಹೆಚ್ಚಿಸಲಾಗುವದೆಂಬ ನೋಟೀಸನ್ನು, ಅದರ ಪ್ರತಿಯನ್ನು ಪಂಚಾಯತಿಯ ಕಚೇರಿಯಲ್ಲಿ ಹಚ್ಚಿ ಪ್ರಸಿದ್ಧ ಮಾಡಬೇಕು. ಮತ್ತು ಇಂಥ ಪ್ರಕಟನೆಯನ್ನು ಗ್ರಾಮದಲ್ಲಿ ಡಂಗುರದಿಂದ ಸಾರಿ ಹೇಳಬೇಕು ಸದರ ಕರವು ಅಥವಾ ಫೀಯು, ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದಂಥ ಮತ್ತು ನೋಟೀಸು ಪ್ರಕಟಿಸಲ್ಪಟ್ಟ ತಾರೀಖಿನಿಂದ ಒಂದು ತಿಂಗಳೊಳಗಿರದ ತಾರೀಖಿನಿಂದ ಹೇರಲ್ಪಡುವದು.

೪. ಯಾವುದೇ ಕರದ ಅಥವಾ ಫೀಯ ಆಕರಣೆ, ಅದನ್ನು ಹೇರುವದು, ಅಥವಾ ಹೆಚ್ಚಿಸುವದು ಅಥವಾ ವಸೂಲ ಮಾಡುವದು ಇದರ ವಿರುದ್ಧ ಅಪೀಲನ್ನು, ಪಂಚಾಯತವು ಸದರ ಕರದ ಅಥವಾ ಫೀಯ ಆಕರಣೆಯನ್ನು, ಅದನ್ನು ಹೇರುವದನ್ನು, ಅಥವಾ ಹೆಚ್ಚಿಸುವದನ್ನು ಅಥವಾ ವಸೂಲಮಾಡುವದನ್ನು ನಿರ್ಣಯಿಸಿದನಂತರ ೩೦ ದಿವಸಗಳೊಳಗಾಗಿ ಜಿಲ್ಹಾ ಲೋಕಲ್ ಬೋರ್ಡಿಗೆ ಮಾಡಬೇಕು.

# ೨ನೇ ಭಾಗ ಯಾತ್ರಿಕರಮೇಲೆ ಕರ.

೫. ಈ ಭಾಗದಲ್ಲಿ "ಯಾತ್ರಿಕ" ನೆಂದರೆ, ಗ್ರಾಮದ ಹದ್ದಿಯಲ್ಲಿ ಯಾವುದೇ ಪೂಜಾ ಸ್ಥಾನದಲ್ಲಿ ಧಾರ್ಮಿಕ ಪೂಜಾ ಮಾಡುವದಕ್ಕಾಗಿ ಯಾವನು ಗ್ರಾಮದ ಹದ್ದಿಯಲ್ಲಿ ಪ್ರವೇಶಮಾಡುವನೋ ಅವನು ಎಂದರ್ಥ ವಾಗುತ್ತದೆ. ಆದರೆ "ಯಾತ್ರಿಕ" ಈ ಶಬ್ದದಲ್ಲಿ ಈ ವಿಧವಾಗಿ ಹದ್ದಿಯಲ್ಲಿ ಪ್ರವೇಶಮಾಡುವ ೧೨ ವರ್ಷಗಳಿಗಿಂತ ವಯಸ್ಸಿನವ ಅಥವಾ ಗ್ರಾಮದ ರಹವಾಸಿ ಅಥವಾ ಸಾಧು, ಬೈರಾಗಿ ಫಕೀರ ಇತ್ಯಾದಿ ಇವರ ಸಮಾವೇಶ ವಾಗುವದಿಲ್ಲ. ಯಾವನೊಬ್ಬನು ಯಾತ್ರಿಕನಿರುವನೋ ಇಲ್ಲವೋ ಎಂಬ ಪ್ರಶ್ನೆ ಉದ್ಭವಿಸಿದರೆ, ಅದರ ಸಂಬಂಧ ಸರಪಂಚನು ಕೊಟ್ಟ ನಿರ್ಣಯವು ಕೊನೆಯದಾಗುವದು.

೬. (೧) ಯಾತ್ರಿಕರಮೇಲೆ ಕರ ಹೇರುವದನ್ನು ನಿರ್ಣಯಿಸುವ ಪಂಚಾಯತ, ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟನ ಮಂಜೂರಿಯಿಂದ, ಪಂಚಾಯತಿಯಿಂದ ಗೊತ್ತುಮಾಡಲ್ಪಡುವಂಥ ಅವಧಿಯಲ್ಲಿ ಗ್ರಾಮವನ್ನು ಪ್ರವೇಶಿಸುವ ಪ್ರತಿಯೊಬ್ಬ ಯಾತ್ರಿಕನಮೇಲೆ ೬ ಆಣೆ ದರದಂತೆ ಕರ ಹೇರಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಈ ನಿಯಮವನ್ನು ಮಾಡುವ ತಾರೀಖಿನ ತತ್ಪೂರ್ವದಲ್ಲಿ ಪಂಚಾಯತಿಯು ಇಂಥ ಕರವನ್ನು ಹೇರಿದ್ದರೆ, ಅದು ಸದರ ಕರವನ್ನು ಸದರ ತಾರೀಖಿನ ಪೂರ್ವದಲ್ಲಿ ಅಮಲಿನಲ್ಲಿದ್ದ ದರದಂತೆ ಹೇರಬೇಕು.

(೨) ೧ನೇ ಉಪನಿಯಮದಲ್ಲಿ ಉಲ್ಲೇಖಮಾಡಿದ ದರವು ತಾರೀಖು ೨೫-೨-೧೯೪೩ನೇ ಇಸ್ವಿಯ ಸರಕಾರಿ ಪ್ರಕಟನೆ ನಂ ಎಸ್ ೧೬೪/೧ ಇದರ ಸ್ವಯ ತಿದ್ದುಪಡಿಯಾದ ತಾರೀಖು ೧೮-೧೨-೧೯೩೪ನೇ ಇಸ್ವಿಯ ಜನರಲ್ ಡಿಪಾರ್ಟಮೆಂಟಿನ ಸರಕಾರಿ ಪ್ರಕಟನೆ ನಂ ಎಸ್ ೧೬೪/೧ ಇದರಲ್ಲಿ ಗೊತ್ತು ಮಾಡಿದ ಪರಮಾವಧಿ ದರವನ್ನು ಮೀರಬಾರದು.

೭. ಸದರ ಕರವು ಕೊಡಲ್ಪಟ್ಟನಂತರ ಪ್ರತಿಯೊಬ್ಬ ಯಾತ್ರಿಕನಿಗೆ ಒಂದು ಅಪ್ಪಣೆ ಚೀಟಿ (ಪಾಸ) ಯನ್ನು ಕೊಡಬೇಕು.

೮. ೬ನೇ ನಿಯಮದನ್ವಯ ಗೊತ್ತುಮಾಡಿದ ಸಂಪೂರ್ಣ ಅವಧಿಯ ವರೆಗೆ ಕ್ರಮಬದ್ಧವಿರುವದು.

೯. ಪಂಚಾಯತಿಯು ಅಪ್ಪಣೆ ಚೀಟಿಯ ಆಕಾರ, ನಮೂನೆ ಮತ್ತು ಬಣ್ಣಗಳನ್ನು ಗೊತ್ತುಮಾಡಿ ಅಂಥ ಅಪ್ಪಣೆ ಚೀಟಿಗಳನ್ನು ಮುದ್ರಿಸಬೇಕು.

೧೦. ಪಂಚಾಯತಿಯು ಸದರ ಕಾರಣಕ್ಕಾಗಿ ಗೊತ್ತು ಮಾಡ ಬಹುದಾದ ಒಂದು ಸ್ಥಳದಲ್ಲಿ ಅಥವಾ ಅನೇಕ ಸ್ಥಳಗಳಲ್ಲಿ ಸದರ ಕರವನ್ನು ವಸೂಲ ಮಾಡಬೇಕು.

## ೩ನೇ ಭಾಗ ಜಾತ್ರೆ ಮತ್ತು ಉತ್ಸವಗಳ ಮೇಲೆ ಕರ.

೧೧. (೧) ಜಾತ್ರೆ ಮತ್ತು ಉತ್ಸವಗಳಮೇಲೆ ಕರವನ್ನು ಹೇರ ಬೇಕೆಂದು ಗೊತ್ತುಮಾಡುವ ಪಂಚಾಯತಿಯು ಈ ಭಾಗಕ್ಕೆ ಜೋಡಿಸಿದ್ದ ಪರಿಶಿಷ್ಟದಲ್ಲಿ ನಿರ್ದಿಷ್ಟಮಾಡಿದ ದರದಂತೆ ಆ ಕರವನ್ನು ಹೇರಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಈ ನಿಯಮವನ್ನು ಮಾಡುವ ತಾರೀಖಿನ ತತ್ಪೂರ್ವದಲ್ಲಿ ಪಂಚಾಯತಿಯು ಇಂಥ ಕರವನ್ನು ಕೂಡ್ರಿಸಿದ್ದರೆ, ಅದು ಸದರ ಕರವನ್ನು ಸದರ ತಾರೀಖಿನ ಮೊದಲು ಅಮಲಿನಲ್ಲಿದ್ದ ದರದಂತೆ ಹೇರಬೇಕು.

(೨) ೧ನೇ ಉಪನಿಯಮದಲ್ಲಿ ಉಲ್ಲೇಖಮಾಡಿದ ದರವು ತಾರೀಖು ೨೩-೨-೧೯೪೩ನೇ ಇಸ್ವಿಯ ಸರಕಾರಿ ಪ್ರಕಟನೆ ನಂ ಎಸ್ ೧೭೪/೧ ಇದರ ನ್ವಯ ತಿದ್ದುಪಡೆಯಾದ ತಾ ೧೮-೧೨-೧೯೩೪ನೇ ಇಸ್ವಿಯ ಜನರಲ್ ಡಿಪಾರ್ಟಮೆಂಟಿನ ಸರಕಾರಿ ಪ್ರಕಟನೆ ನಂ ಎಸ್ ೧೭೪/೧ ಇದರಲ್ಲಿ ಗೊತ್ತು ಮಾಡಿದ ಪರಮಾವಧಿದರವನ್ನು ಮೀರಬಾರದು.

೧೨. ಪಂಚಾಯತಿಯು ಜಿಲ್ಹಾ ಮ್ಯಾಜಿಸ್ಟ್ರೇಟನ ಅನುಮತಿಯಿಂದ ಸದರ ಕರವನ್ನು ಹೇರಬಹುದಾದ ಅವಧಿ ಅಥವಾ ಅವಧಿಗಳನ್ನು ಮತ್ತು ಪ್ರದೇಶದ ಮೇರೆಗಳನ್ನು ಗೊತ್ತುಮಾಡಬೇಕು.

೧೩. ಯಾವನೇ ಮನುಷ್ಯನು ಅಂಗಡಿ, ಚಪ್ಪರ ಅಥವಾ ಮಳಿಗೆ ಯನ್ನು ಹಾಕುವ ಉದ್ದೇಶಕ್ಕಾಗಿ ಅಥವಾ ಯಾವುದೇ ವಿಧದ ವ್ಯಾಪಾರವನ್ನು ಮಾಡುವದಕ್ಕಾಗಿ ಇಲ್ಲವೆ ಸಿನೇಮಾ, ಸರ್ಕಸ ಅಥವಾ ಇತರ ಮನರಂಜನೆ ಗಾಗಿ ಪಂಚಾಯತಿಯಿಂದ ತನಗೆ ಅಪ್ಪಣೆ ಸಿಗದವಿನಃ ೧೨ನೇ ನಿಯಮ ದನ್ವಯ ಗೊತ್ತುಮಾಡಿದ ಅವಧಿಯಲ್ಲಿ ಮತ್ತು ಹದ್ದಿಯಲ್ಲಿ ಯಾವುದೇ ಖಾಲಿ ಜಾಗೆಯನ್ನು ಅಥವಾ ಪ್ಲಾಟನ್ನು ಉಪಯೋಗ ಮಾಡಬಾರದು.

೧೪. ಪಂಚಾಯತಿಯಿಂದ ಇದರಬಗ್ಗೆ ಅಧಿಕಾರಪಡೆದ ಮನುಷ್ಯನು ಸದರ ಕರದ ಹಣವನ್ನು ತಕ್ಕೊಂಡು ಅದರಬಗ್ಗೆ ಪಾವತಿಯನ್ನು ಕೊಟ್ಟ ನಂತರ, ಅಪ್ಪಣೆಯನ್ನು ಕೊಡಬೇಕು.

೧೫. ಅಪ್ಪಣೆಯು ೧೨ನೇ ನಿಯಮದನ್ವಯ ಗೊತ್ತುಮಾಡಲ್ಪಟ್ಟ ಸಂಪೂರ್ಣ ಅವಧಿಯಲ್ಲಿ ಕ್ರಮಬದ್ಧವಿರುವದು.

೧೬. ಪಂಚಾಯತಿಯು ೧೪ನೇ ನಿಯಮದನ್ವಯ ಕೊಡುವ ಪಾವ ತಿಯ ಮತ್ತು ಅಪ್ಪಣೆಯ ನಮೂನೆಯನ್ನು ಗೊತ್ತುಮಾಡಬೇಕು.

೧೬ ಅ. ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವುದೇ ಬಾಧೆಬರದಿದ್ದರೆ,

(೧) "ಮನರಂಜನೆ" ಎಂದರೆ, ಯಾವ ನಾಟಕ, ಸಿನೇಮಾ, ಸರ್ಕಸ, ಪ್ರದರ್ಶನ, ವಿನೋದ, ಆಟ ಇಲ್ಲವೆ ಕ್ರೀಡೆ ಇವುಗಳಿಗೆ ಹಣಕೊಟ್ಟರೆ ಜನರಿಗೆ ಪ್ರವೇಶ ಸಿಗುವದೋ ಅವು ಎಂದರ್ಥ ಮತ್ತು "ಮನರಂಜನೆ" ಈ ಶಬ್ದದಲ್ಲಿ ಇವುಗಳ ಸಮಾವೇಶವಾಗುತ್ತದೆ.

(೨) "ಪ್ರವೇಶಕ್ಕಾಗಿ ಹಣ ಕೊಡುವದು" ಅಂದರೆ, (ಅ) ಮನರಂಜ ನೆಯ ಸ್ಥಳದಲ್ಲಿ ಆಸನ (ಕೂಡ್ರುವಸ್ಥಾನ) ಗಳಿಗೆ ಅಥವಾ ಇತರ ಸ್ಥಳಾವಕಾ ಶಕ್ಕೆ ಹಣಕೊಡುವದು ಮತ್ತು (ಬ) ಮನರಂಜನೆಯ ಕಾರ್ಯಕ್ರಮಕ್ಕಾಗಿ ಹಣಕೊಡುವದು ಎಂದರ್ಥ ಮತ್ತು (ಅ) ಮತ್ತು (ಬ) ಇವು ಅದರಲ್ಲಿ ಸಮಾವೇಶವಾಗುತ್ತವೆ.

(೩) ಯಾವುದೇ ಮನರಂಜನೆಗೆ ಸಂಬಂಧಪಟ್ಟ "ಒಡೆಯ" ಈ ಶಬ್ದ ದಲ್ಲಿ ಯಜಮಾನ, ಮ್ಯಾನೇಜರ, ಎಜಂಟ ಅಥವಾ ಅದರ ಆಡಳಿತೆಗೆ ಹೊಣೆ ಗಾರನಾದ ಯಾವನೇ ಮನುಷ್ಯನ ಸಮಾವೇಶವಾಗುತ್ತದೆ.

(೪) "ಮನರಂಜನೆಗೆ ಪ್ರವೇಶ" ಇದರಲ್ಲಿ ಮನರಂಜನೆಯು ನಡೆದ ಯಾವುದೇ ಸ್ಥಳದ ಪ್ರದೇಶವು ಸಮಾವೇಶವಾಗುತ್ತದೆ.

೧೬ ಬ. ಮನರಂಜನೆಗಳ ಕರಹೇರಬೇಕೆಂದು ನಿರ್ಣಯಿಸುವ ಪಂಚಾಯತ ಈ ಕೆಳಗಿನ ದರದಂತೆ ಕರವನ್ನು ಹೇರಬೇಕು.

೧. ಪ್ರದರ್ಶನ, ವಿನೋದ, ಆಟ ಅಥವಾ ಕ್ರೀಡೆಗೆ......ರೂ ೧-೦-೦

೨. ನಾಟಕ, ಸರ್ಕಸ, ಸಿನೇಮಾ ಪ್ರತಿಯೊಂದು ಆಟಕ್ಕೆ ರೂ ೧-೮-೦

ಆದರೆ ಗೊತ್ತುಪಡಿಸುವದೇನಂದರೆ, ಪರೋಪಕಾರಕ ಅಥವಾ ಧಾರ್ಮಿಕ ಯಾವ ಮನರಂಜನೆಯು ಪರೋಪಕಾರದ ಅಥವಾ ದಾನ ಧರ್ಮದ ಉದ್ದೇಶ ಗಳಿಗಾಗಿ ನಡೆಯುವದೋ ಮತ್ತು ಅದರಿಂದ ಬಂದ ಉತ್ಪನ್ನ ಅಂಥ ಉದ್ದೇಶ ಗಳಿಗಾಗಿ ಕೊಡಲ್ಪಡುವದು ಅಂಥ ಮನರಂಜನೆಯು ಕರದಿಂದ ಮುಕ್ತವಾಗು ತ್ತದೆ.

೧೬ ಕ. ಪ್ರತಿಯೊಂದು ಮನರಂಜನೆಯು ಪ್ರಾರಂಭವಾಗುವ ಮೊದಲು ಪ್ರತಿಸಲ ಕರವನ್ನು ಕೊಡಬೇಕಾಗುವದು. ಅದನ್ನು "ಒಡೆಯ" ನಿಂದ ವಸೂಲ ಮಾಡಬೇಕು.

೧೬ ಡ. ಪಂಚಾಯತಿಯ ಸೆಕ್ರೆಟರಿಯು ಅಥವಾ ಈ ಬಗ್ಗೆ ಪಂಚಾಯತಿಯಿಂದ ಅಧಿಕಾರ ಪಡೆದವನು ಕರದ ಹಣವನ್ನು ವಸೂಲ ಮಾಡಬೇಕು ಮತ್ತು ಅದಕ್ಕಾಗಿ ಪಾವತಿಯನ್ನು ಕೊಡಬೇಕು.

೧೬ ಈ. ಪಂಚಾಯತು ಕಲೆಕ್ಟರನ ಅನುಮತಿಯಿಂದ ಪಾವತಿಯ ನಮೂನೆಯನ್ನು ನಿರ್ಧರಿಸಬೇಕು.

೧೬ ಫ. ಕರವು ಕೊಡಲ್ಪಟ್ಟಮೇಲೆ, ತ್ಯಜಿಸುವಂಥ ಅಥವಾ ಅನಿವಾರ್ಯ ಪರಿಸ್ಥಿತಿಯಮೂಲಕ ಮನರಂಜನೆಯು ನಡೆಯದಿದ್ದರೆ ಕರದ ಹಣವನ್ನು

ಕೊಟ್ಟವನು, ಹಣಕೊಟ್ಟ ೪೮ ತಾಸುಗಳಲ್ಲಿ ಹಣವನ್ನು ತಿರುಗಿಕೊಡಲು ಅರ್ಜಿಮಾಡಿಕೊಂಡರೆ, ಅವನಿಗೆ ಆ ಹಣವನ್ನು ತಿರುಗಿ ಕೊಡಬೇಕು.

## ಪರಿಶಿಷ್ಟ

(೧೧ನೇ ನಿಯಮವನ್ನು ನೋಡಿರಿ).

### ಜಾತ್ರೆ ಮತ್ತು ಉತ್ಸವಗಳ ಅವಧಿಯಲ್ಲಿಯ ಕರದ ದರ.

(೧) ಅಂಗಡಿ, ಅಥವಾ ಚಪ್ಪರ, ಅಥವಾ ಮಳಿಗೆಗಾಗಿ ಇಲ್ಲವೆ ಯಾವದೇ ವಿಧದ ವ್ಯಾಪಾರವನ್ನು ಮಾಡುವದರ ಸಲುವಾಗಿ ಉಪಯೋಗಿಸುವ ೯ ಚೌರಸ ಫೂಟಿಗಿಂತ ಹೆಚ್ಚಿನ ಕ್ಷೇತ್ರವಿಲ್ಲದ ಪ್ರತ್ಯೇಕ ಪ್ಲಾಟಿಗೆ ಜಾತ್ರೆಯ ಅಥವಾ ಉತ್ಸವದ ಅವಧಿಗಾಗಿ ರೂ ೦-೪-೦ ಮತ್ತು ೯ ಚೌರಸ ಫೂಟಿನ ಪ್ರತಿಯೊಂದು ಹೆಚ್ಚಿನ ಪ್ಲಾಟಿಗೆ ಇಲ್ಲವೆ ಅದರ ಭಾಗಕ್ಕೆ ೬ ಪೈಗಳು.

(೨) ಸಿನೇಮಾ, ಸರ್ಕಸ, ಅಥವಾ ಇತರ ಮನರಂಜನೆಗಾಗಿ ತೆಗೆದುಕೊಂಡ ಸ್ಥಳಕ್ಕೆ ಪ್ರತಿದಿನವ ೧ ಗುಂಠೆಗೆ ರೂ ೧-೦-೦ ಮತ್ತು ಉಪಯೋಗಿಸುವ ಗುಂಠೆಯ ಭಾಗಕ್ಕೆ ಗುಂಠೆಯ ದರದಂತೆ ಆಕರಣೆ ಮಾಡಬೇಕು.

## ೪ನೇ ಭಾಗ— ಆಕ್ಟ್ರಾಯ.

೧೭. ಪಂಚಾಯತಿಯು ಕಲೆಕ್ಟರನ ಅನುಮತಿಯಿಂದ, ಆಕ್ಟ್ರಾಯಿಯ ಮೇರೆಗಳನ್ನು ಆಕ್ಟ್ರಾಯ ನಾಕೆಗಳ ಸಂಖ್ಯೆಯನ್ನು ಮತ್ತು ಸ್ಥಳಗಳನ್ನು ಗೊತ್ತುಮಾಡಬೇಕು.

೧೮. (೧) ಆಕ್ಟ್ರಾಯ ಕೂಡ್ರಿಸಬೇಕೆಂದು ನಿರ್ಣಯಿಸುವ ಪಂಚಾಯತಿಯು, ಈ ಭಾಗಕ್ಕೆ ಜೋಡಿಸಿದ ಪರಿಶಿಷ್ಟದ ಮೊದಲನೇ ಆಸನದಲ್ಲಿ ನಿರ್ದಿಷ್ಟಮಾಡಿದ, ಆಕ್ಟ್ರಾಯ ಮೇರೆಯೊಳಗೆ ಬಳಿಕೆಗಾಗಿ, ಉಪಯೋಗಕ್ಕಾಗಿ

ಅಥವಾ ಮಾರಾಟಕ್ಕಾಗಿ ಆಯಾತಮಾಡಿದ ಎಲ್ಲ ಸರಕುಗಳ ಮೇಲೆ ಸದರ ಪರಿಶಿಷ್ಟದ ೨ನೇ ಆಸನದಲ್ಲಿ ನಿರ್ದಿಷ್ಟಮಾಡಿದ ಸಂಬಂಧಪಟ್ಟ ದರದಂತೆ ಆಕ್ಟ್ರಾಯ ಹೇರಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಈ ನಿಯಮಗಳು ಮಾಡಲ್ಪಡುವ ತಾರೀಖಿನ ತತ್ಪೂರ್ವದಲ್ಲಿ ಪಂಚಾಯತಿಯು ಸದರ ಸರಕುಗಳಲ್ಲಿ ಯಾವುದೇ ಸರಕುಗಳಮೇಲೆ ಆಕ್ಟ್ರಾಯ ಕೂಡ್ರಿಸಿದ್ದಾದರೆ, ಅದು ಅಂಥ ಸರಕುಗಳಮೇಲೆ ಸದರ ತಾರೀಖಿನ ಮೊದಲು ಅಮಲಿನಲ್ಲಿದ್ದ ದರದಂತೆ ಆಕ್ಟ್ರಾಯ ಹೇರಬೇಕು.

(೨) ೧ನೇ ಉಪನಿಯಮದಲ್ಲಿ ಉಲ್ಲೇಖಮಾಡಿದ ದರವು ತಾ ೧೮-೧೨-೩೪ನೇ ಇಸ್ವಿಯ ಜನರಲ್ ಡಿಪಾರ್ಟಮೆಂಟಿನ ಸರಕಾರಿ ಪ್ರಕಟನೆ ನಂ ಎಸ್ ೧೭೪/೧ ಇದರಲ್ಲಿ ಗೊತ್ತುಮಾಡಿದ ಪರಾಕಾಷ್ಟದರವನ್ನು ಮೀರಬಾರದು.

**ವಿವರಣೆ:**– ಈ ನಿಯಮದ ಉದ್ದೇಶಗಳಿಗಾಗಿ, ಆಯಾತಮಾಡಿದ ಸರಕುಗಳು ಆಯಾತದ ೩ ದಿವಸಗಳೊಳಗಾಗಿ ನಿರ್ಯಾತವಾಗದಿದ್ದರೆ, ಅವು ಬಳಿಕೆಗಾಗಿ, ಉಪಯೋಗಕ್ಕಾಗಿ ಅಥವಾ ಮಾರಾಟಕ್ಕಾಗಿ ಆಕ್ಟ್ರಾಯ ಮೇರೆ ಯೊಳಗೆ ಆಯಾತವಾದವೆಂದು ತಿಳಿಯಬೇಕು.

೧೯. ಆಕ್ಟ್ರಾಯನ್ನು ಆಕ್ಟ್ರಾಯ ನಾಕೆಯಲ್ಲಿ ಕೊಡಬೇಕು.

೧೯ ಅ. ೧೯ನೇ ನಿಯಮದಲ್ಲಿ ಗೊತ್ತುಮಾಡಿದಂತೆ, ನಾಕೆಯಲ್ಲಿ ಆಕ್ಟ್ರಾಯನ್ನು ಬೇಡಿದಮೇಲೆ ಕೊಡದಿದ್ದರೆ ನಾಕಾ ಕಾರಕೂನನು ತದ್ವಿರುದ್ಧ ವಿಶೇಷ ಕಾರಣಗಳು ಇರದವಿನಃ ಆಕ್ಟ್ರಾಯ ಆಕರಿಸಲ್ಪಟ್ಟ ಸರಕುಗಳನ್ನು ಇಲ್ಲವೆ (ಆಕ್ಟ್ರಾಯ) ಬೇಡಿಕೆಗೆ ಸರಿಯಾಗುವಷ್ಟು ಬೆಲೆಯ ಸರಕುಗಳ ಭಾಗ ವನ್ನು ಜಪ್ತಮಾಡಿ ಹಿಡಿದಿಡಬೇಕು. ಟೋಲ ಕೊಡಲು ತಪ್ಪಿದ್ದಕ್ಕೆ ಜಪ್ತ ಮಾಡಿದ ಆಸ್ತಿಯನ್ನು ಮಾರಾಟದಿಂದ ಅಥವಾ ಬೇರೆ ರೀತಿಯಿಂದ ಕೊಟ್ಟು ಬಿಡಲಿಕ್ಕೆ ಗೊತ್ತುಮಾಡಿದ, ತಾ ೯-೩-೧೯೪೪ನೇ ಇಸ್ವಿ ದಿವಸ ಮುಂಬಯಿ ಸರಕಾರದ ಗ್ಯಾಝೆಟಿನ ೪-ಕ ಭಾಗದ ೨೨೩ರಿಂದ ೨೨೭ನೇ ಪುಟಗಳಲ್ಲಿ

ಪ್ರಕಟಿಸಲ್ಪಟ್ಟ ಟೋಲ ನಿಯಮ (Tou Rules) ಗಳ ೫ಂನೇ ನಿಯಮದಲ್ಲಿ ಗೊತ್ತುಮಾಡಿದ ರೀತಿಯು ಆಕ್ಟ್ರಾಯ ಕೊಡದ್ದಕ್ಕೆ ಜಪ್ತುಮಾಡಲ್ಪಟ್ಟ ಹಿಡಿದಿಡಲ್ಪಟ್ಟ ಆಸ್ತಿಯ ವ್ಯವಸ್ಥೆಗೆ ಅನ್ವಯಿಸುವದು.

---

## ಆಕ್ಟ್ರಾಯ (ರಿಫಂಡ) ತಿರುಗಿ ಕೊಡುವದು.

೧೯ ಬ. ಯಾವ ಸರಕುಗಳಿಗೆ ಆಕ್ಟ್ರಾಯ ಕೊಡಲ್ಪಟ್ಟಿದೆಯೋ ಆ ಸರಕುಗಳನ್ನು ಆಯಾತ ಮಾಡಿದವನು ಸರಕುಗಳ ಪ್ರಮಾಣವನ್ನು ಕಡಿಮೆ ಮಾಡದೆ ಆಕ್ಟ್ರಾಯ ಮೇರೆಯಹೊರಗೆ ಸದರ ಸರಕುಗಳ ನಿರ್ಯಾತವಮೇಲೆ ಹೀಗೆ ಕೊಡಲ್ಪಟ್ಟ (ಆಕ್ಟ್ರಾಯ) ಹಣವನ್ನು ತಿರುಗಿ ಪಡೆಯಲು ಪಾತ್ರನಾಗುವನು.

೧೯ ಕ. ಈ ನಿಯಮಗಳನ್ವಯ ತಿರುಗಿಕೊಡಲ್ಪಟ್ಟ ಆಕ್ಟ್ರಾಯ ಹಣಗಳನ್ನು ಗ್ರಾಮಪಂಚಾಯತಿಯ ಫಂಡಿನಲ್ಲಿ ಖರ್ಚು ಹಾಕಬೇಕು.

೧೯ ಡ. ಹಣವನ್ನು ತಿರುಗಿ ಪಡೆಯುವ ಬೇಡಿಕೆಯನ್ನು ಮಾನ್ಯ ಮಾಡದಿರಲು ಸಾಕಷ್ಟು ಕಾರಣಗಳಿರದಿದ್ದರೆ, ಸರಪಂಚನು ಅಥವಾ ಅವನ ಗೈರಹಾಜರಿಯಲ್ಲಿ ಉಪಸರಪಂಚನು,

(೧) ನಿರ್ಯಾತದ ತಾರೀಖಿನಿಂದ ೩ ದಿವಸಗಳೊಳಗಾಗಿ ಸರಪಂಚನಿಗೆ ಲೇಖಿಯಿಂದ ಅರ್ಜಿಮಾಡಿಕೊಂಡರೆ, ಮತ್ತು

(೨) ರಿಫಂಡ ಬೇಡುವವನು ಆಕ್ಟ್ರಾಯ ಕೊಟ್ಟಕಾಲಕ್ಕೆ ತನಗೆ ನಾಕಾ ಕಾರಕೂನನು ಸಹಿಮಾಡಿಕೊಟ್ಟ ಪಾವತಿಯನ್ನು ಹಾಜರ ಮಾಡಿದರೆ ಮಾತ್ರ, ರಿಫಂಡಿಗಾಗಿ ಒಪ್ಪಿಗೆ ಕೊಡಬೇಕು.

೧೯ ಈ. ರಿಫಂಡಿನ ಬೇಡಿಕೆಯನ್ನು ತಿರಸ್ಕರಿಸಿದ ಸಂಬಂಧದಲ್ಲಿಯ ಸರಪಂಚನ ಇಲ್ಲವೆ ಉಪಸರಪಂಚನ ಆಜ್ಞೆಯ ವಿರುದ್ಧ ಪಂಚಾಯತಿಗೆ ಅಪೀಲ ಮಾಡಬೇಕು. ಮತ್ತು ಅದರ ನಿರ್ಣಯವು ಕೊನೆಯದಾಗುವದು.

೨೦. ಹಣಕೊಟ್ಟದ್ದಕ್ಕೆ ಪಾವತಿಯನ್ನು ಕೊಡಬೇಕು. ಪಾವತಿಯು ಪಂಚಾಯತಿಯಿಂದ ಗೊತ್ತುಮಾಡಲ್ಪಟ್ಟ ನಮೂನೆಯಲ್ಲಿರಬೇಕು,

# ಪರಿಶಿಷ್ಟ

## (೧೮ನೇ ನಿಯಮವನ್ನು ನೋಡಿರಿ).

| ಸರಕುಗಳು. | | ಕರದ ದರ. |
|---|---|---|
| ಅ) ಕಟ್ಟಡದ ಸಾಮಾನುಗಳು:— | | ರೂ. ಆ. ಪೈ |
| ಇಟ್ಟಂಗಿಗಳು | ಪ್ರತಿ ಸಾವಿರಕ್ಕೆ | ೧–೦–೦ |
| ತಗಡುಗಳು | ಪ್ರತಿ ಮುಂಬಯಿ ಮಣಕ್ಕೆ | ೦–೬–೦ |
| ಮಂಗಳೂರ, ದೇಶಿ ಮತ್ತು ನೆಲಕ್ಕೆ ಹಾಕುವ-ಹಂಚುಗಳು | ಪ್ರತಿ ೧೦೦ ರೂ. ಬೆಲೆಗೆ | ೧–೯–೦ |
| ಸಿಮೆಂಟ ಮತ್ತು ಸಿಮೆಂ-ಟಿನ ಸಾಮಾನುಗಳು | ,, | ೧–೯–೦ |
| ಸುಣ್ಣ, ಸುಣ್ಣದಕಲ್ಲು | ,, | ೧–೯–೦ |
| ಕಟ್ಟಡದ ಉದ್ದೇಶಗಳಿಗಾಗಿ ಉಸುಕು ಮತ್ತು ಹರಳುಗಳು | ,, | ೧–೯–೦ |
| ಕಟ್ಟಡ ದಉದ್ದೇಶಗಳಿಗಾಗಿ ಕಬ್ಬಿಣ, ಉಕ್ಕು ಅಥವಾ ಕಬ್ಬಿಣ ಅಥವಾ ಉಕ್ಕಿನ ಸಾಮಾನುಗಳು | ,, | ೨–೦–೦ |
| ಎಲ್ಲ ನಮೂನೆಯ ಬಣ್ಣಗಳು ಮತ್ತು ಬಣ್ಣದ ಎಣ್ಣೆಗಳು | ,, | ೧–೯–೦ |
| ಸಾಗವಾನಿ ಕಟ್ಟಿಗೆ | ,, | ೧–೯–೦ |

| | | ರೂ. ಆ. ಪೈ |
|---|---|---|
| ಬ) ಅರಿವೆ:— | | |
| ನೂಲಿನದು | ” | ೧-೯-೦ |
| ರೇಶಿಮೆಯದು | ” | ೨-೦-೦ |
| ಉಣ್ಣೆಯದು | ” | ೨-೮-೦ |
| ಹತ್ತಿಯ, ರೇಶಿಮೆಯ, ಕೃತ್ರಿಮ ರೇಶಿಮೆಯ ಮತ್ತು ಉಣ್ಣೆಯ ನೂಲು | ” | ೦-೧೨-೬ |
| ಕ) ಇದ್ದಲಿ | ಪ್ರತಿ ಟನ್ನಿಗೆ | ೦-೪-೦ |
| ಕಲ್ಲಿದ್ದಲಿ | ” | ೦-೭-೦ |
| ಡ) ಎಲ್ಲ ನಮೂನೆಯ ಮಿಠಾಯಿ ಮತ್ತು ಸಿಹಿ ಪದಾರ್ಥಗಳು | ಪ್ರತಿ ೧೦೦ ರೂ. ಬೆಲಿಗೆ | ೧-೯-೦ |
| ಈ) ಟೆಂಗಿನಕಾಯಿ ಮತ್ತು ಖೊಬ್ರಿ | ” | ೦-೧೨-೬ |
| ಫ) ಚೂರಿ, ಚಾಕು, ಕತ್ತರಿ ಮೊದಲಾದವು ಮತ್ತು ಕಬ್ಬಿಣಸಾಮಾನುಗಳು | ” | ೨-೦-೦ |
| ಗ) ಹತ್ತಿಯ ಮತ್ತು ಇತರ ಎಣ್ಣೆಕಾಳುಗಳು | ಪ್ರತಿ ಬ. ಮ:.ಕ್ಕೆ | ೦-೨-೦ |
| ಹ) ನೂಲಿನ, ರೇಶಿಮೆಯ ಅಥವಾ ಉಣ್ಣೆಯ ಹೆಣೆದ ಸಾಮಾನುಗಳು (ಟೊಪ್ಪಿಗೆ ಮತ್ತು ತಯಾರಿ ಬಟ್ಟೆಗಳನ್ನೊಳಗೊಂಡು) | ಪ್ರತಿ ೧೦೦ ರೂ. ಬೆಲಿಗೆ | ೨-೦-೦ |
| ಇ) ಚಿಮಣಿ ಎಣ್ಣೆ | ಪ್ರತಿ ಡಬ್ಬಿಗೆ | ೦-೩-೦ |
| ಜ) ಅಡಿಕೆ ಮತ್ತು ಉತ್ಪತ್ತಿ | ಪ್ರತಿ ೧೦೦ ರೂ. ಬೆಲಿಗೆ | ೧-೯-೦ |
| ಕ) ಎಣ್ಣೆಗಳು:— | | |
| ಖೊಬ್ರಿ ಎಣ್ಣೆ<br>ಸೇಂಗಾ ಎ”<br>ಕುಸುಬಿ ಎ<br>ಎಳ್ಳೆಣ್ಣೆ<br>ಔಡಲ ಎ | ಪ್ರತಿ ೧೦೦ ರೂ. ಬೆಲಿಗೆ | ೦-೪-೦ |

ಲ) ಸಿಗಾರ, ಸಿಗರೇಟ ಮತ್ತು ,, ೧–೯–೦
ಬೀಡಿಗಳು

ವ) ಇತರ ವಸ್ತುಗಳು:—
ಒಣಮೆಣಸಿನಕಾಯಿ, ಬಳ್ಳೊಳ್ಳಿ, ಪ್ರತಿ ಮುಂಬಯಿ ೦–೨–೦
ಉಳ್ಳೇಗಡ್ಡಿ, ಅಂಟು, ಅರಿಷಿಣ, ಮಣಕ್ಕೆ
ಮಸಾಲೆಸಾಮಾನುಗಳು ಇತ್ಯಾದಿ.

ಸ) ಕಡ್ಡಿಪೆಟ್ಟಿಗೆ
ನಾಶಿಪುಡಿ } ಪ್ರತಿ ೧೦೦ ರೂ. ಬೆಲೆಗೆ ೦.೧೨.೬
ಸಾಬಾಣಗಳು

ಓ) ಎಲ್ಲ ವಿಧದ ಸಕ್ಕರೆ
ಸಕ್ಕರೆಯ ಪದಾರ್ಥ } ಪ್ರತಿ ಮುಂಬೈ ಮಣಕ್ಕೆ ೬–೬–೦
ಗಳು, ಬೆಲ್ಲ

ಪ) ಚಹ, ಕಾಫಿ, ಕೋಕೊ ಪ್ರತಿ ೧೦೦ ರೂ. ಬೆಲೆಗೆ ೧–೯–೦

**ಟಿಪ್ಪಣಿ ೧**— (ಅಪವಾದಗಳು)—

೧) ಸರಕಾರದ ಇಲ್ಲವೆ ಸ್ಥಾನಿಕ ಸಂಸ್ಥೆಗಳ (ಲೋಕಲ್ ಫಂಡಿನ ಉದ್ದೇಶಗಳಿಗಾಗಿ) ಎಲ್ಲ ಸಂಗ್ರಹಗಳು.

೨) ಸರಕಾರಿ ಅಥವಾ ಸ್ಥಾನಿಕ ಸಂಸ್ಥೆಗಳ ಸೇವಕರ ಸ್ವಂತ ಆಸ್ತಿ (ವಸ್ತುಗಳು).

೩) ಕೈನೂಲಿನ ಮತ್ತು ಕೈಮಗ್ಗದ ಖಾದಿ.

ಇವು ಆಕ್ಟ್ರಾಯದಿಂದ ಮುಕ್ತವಿರುತ್ತವೆ.

**ಟಿಪ್ಪಣಿ ೨**—

ಆಕ್ಟ್ರಾಯ ಮೇರೆಯೊಳಗೆ ಆಯಾತಮಾಡಿದ ಸರಕುಗಳಿಗಾಗಿ ಆಯಾತ ಮಾಡಿದವನು ಆಕ್ಟ್ರಾಯ ಸಂಬಂಧ ಕೊಡಬೇಕಾದ ಹಣದ ಬಗ್ಗೆ ಭಿನ್ನಾಭಿಪ್ರಾಯವಾದರೆ, ಆಕ್ಟ್ರಾಯ ನಾಕಾದಲ್ಲಿದ್ದ ನಾಕೆದಾರನು, ಕೊಡತಕ್ಕ

ಕರದ ಹಣವನ್ನು ನಿರ್ಧರಿಸುವದಕ್ಕೆ ಆ ಸರಕುಗಳನ್ನು ಸರಪಂಚನ ಅಥವಾ ಈ ಸಂಬಂಧದಲ್ಲಿ ಅಧಿಕಾರ ಪಡೆದ ಪಂಚಾಯತಿಯ ಸೇವಕನ ಮುಂದೆ, ಆಯಾತಮಾಡುವವನು ಒಯ್ಯುವಂತೆ ಮಾಡಬೇಕು.

## ಭಾಗ ೫. ಮದುವೆ, ದತ್ತಕ ಮತ್ತು ಮೇಜವಾನಿಗಳ ಮೇಲೆ ಕರ.

೨೧. ೧) ಮದುವೆ, ದತ್ತಕ ಮತ್ತು ಮೇಜವಾನಿಗಳ ಕರ ಹೇರ ಬಯಸುವ ಪಂಚಾಯತವು ಈ ಭಾಗಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟ ಪಡಿಸಿದ ವರ್ಗಗಳಿಗನುಸರಿಸಿ ಮತ್ತು ಆ ವರ್ಗಗಳಿಗೆ ಸಂಬಂಧಿಸಿದ ದರಗಳಂತೆ ಕರವನ್ನು ಹೇರಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಪಂಚಾಯತವು ಇಂಥ ಕರವನ್ನು ಈ ನಿಯಮಗಳನ್ನು ಮಾಡುವ ತಾರೀಖಿನ ಮೊದಲು ಹೇರುತ್ತಿದ್ದರೆ, ಅದು ಆ ಕರವನ್ನು ಅಂಥ ತಾರೀಖಿನ ಮೊದಲು ಅಮಲಿನಲ್ಲಿದ್ದ ದರದಂತೆ ಹೇರಬೇಕು.

೨) ಮದುವೆ; ದತ್ತಕ ಅಥವಾ ಮೇಜವಾನಿ ಸದರ ಪರಿಶಿಷ್ಟದ ಉದ್ದೇಶಗಳಿಗಾಗಿ ಯಾವ ವರ್ಗದಲ್ಲಿ ಬರುವದೆಂಬದನ್ನು ಪಂಚಾಯತಿಯು ನಿರ್ಧರಿಸಬೇಕು. ಪಂಚಾಯತಿಯು ಮಾಡಿದ ವರ್ಗೀಕರಣದಿಂದ ಅಸಮಾಧಾನಹೊಂದಿದ ಯಾವನೇ ಮನುಷ್ಯನು ಮಾಮಲೇದಾರನಿಗೆ ಅಪೀಲ ಮಾಡಬಹುದು, ಮತ್ತು ಮಾಮಲೇದಾರನ ನಿರ್ಣಯುವು ಕೊನೆಯದಾಗುವದು.

೩) ೧ನೇ ಉಪನಿಯಮದಲ್ಲಿ ನಿರ್ದಿಷ್ಟಪಡಿಸಿದ ದರಗಳು ಜನರಲ್ ಡಿಪಾರ್ಟಮೆಂಟಿನ ಸರಕಾರಿ ಪ್ರಕಟನೆ ನಂ. ಎಸ್. ೧೬೪/೧ ತಾರೀಖು ೨೩-೨-೧೯೪೩ ಇದರಿಂದ

ತಿದ್ದುಪಡಿ ಹೊಂದಿದ ಜನರಲ್ ಡಿಪಾರ್ಟಮೆಂಟಿನ ಸರಕಾರಿ ಪ್ರಕಟನೆ ನಂ. ಎಸ್. ೧೭೪ (೧) ತಾರೀಖು ೧೮–೧೨–೧೯೩೪ ಇದರಲ್ಲಿ ಗೊತ್ತುಮಾಡಿದ ಪರಾಕಾಷ್ಟದ ಮಿತಿಗೆ ಒಳಪಟ್ಟಿರಬೇಕು,

೨೨. ೧) ತಾಯಿತಂಡೆ, ಅಥವಾ ಪಾಲಕ ಇಲ್ಲವೆ ಇತರ ರೀತಿಯಿಂದ ಗ್ರಾಮದಲ್ಲಿ ಮದುವೆಯನ್ನು ಮಾಡುವ ಮನುಷ್ಯನು ಮದುವೆಯು ಜರಗುವ ದಿನಕ್ಕಿಂತ ಕನಿಷ್ಟ ಮೂರು ದಿವಸ ಮೊದಲು ಮದುವೆಯು ಜರಗುವ ವಿಷಯವನ್ನು ಮದುವೆಗಾಗಿ ಎಷ್ಟು ವೆಚ್ಚವನ್ನು ಮಾಡುವದು ಯೋಚಿಸಲಾಗಿದೆ ಎಂಬ ಮಾಹಿತಿಯೊಂದಿಗೆ, ಸರಪಂಚನಿಗೆ ತಿಳಿಸಬೇಕು.

೨) ಗ್ರಾಮದಲ್ಲಿ ಮಗುವನ್ನು ದತ್ತಕ ತೆಗೆದುಕೊಳ್ಳುವ ಮನುಷ್ಯನು, ದತ್ತಕ ವಿಧಾನವು ಜರಗುವ ದಿನಕ್ಕಿಂತ ಕನಿಷ್ಟ ಮೂರು ದಿವಸ ಮೊದಲು ದತ್ತಕದ ವಿಷಯವನ್ನು ದತ್ತಕ ವಿಧಾನದ ತಾರೀಖಿನ ದಿವಸ ಆಗುವ ತನ್ನ ಆಸ್ತಿಯ ಬೆಲೆಯ ಮಾಹಿತಿಯೊಂದಿಗೆ, ತಿಳಿಸಬೇಕು.

೩) ಗ್ರಾಮದಲ್ಲಿ ಮದುವೆ ಅಥವಾ ದತ್ತಕ ಸಮಾರಂಭದಲ್ಲಿ ಕೊಡುವ ಮೇಜವಾನಿಯನ್ನು ಬಿಟ್ಟು ಉಳಿದ ಮೇಜವಾನಿಯನ್ನು ಕೊಡುವ ಮನುಷ್ಯನು ಮೇಜವಾನಿಯ ದಿವಸಕ್ಕಿಂತ ಕನಿಷ್ಟ ಮೂರುದಿವಸ ಮೊದಲು, ಅದರ ವಿಷಯವನ್ನು, ಅದಕ್ಕಾಗಿ ಮಾಡಲು ಯೋಚಿಸಲಾದ ವೆಚ್ಚದ ಮಾಹಿತಿಯೊಂದಿಗೆ ತಿಳಿಸಬೇಕು.

೨೩. ೨೨ನೇ ನಿಯಮದಲ್ಲಿ ಮಾಹಿತಿಯನ್ನು ಕೊಡಬೇಕಾದ ಮನುಷ್ಯನು ೨೧ನೇ ನಿಯಮದನ್ವಯ ಆಕರಿಸಲ್ಪಡುವ ಕರವನ್ನು ಕೊಡಬೇಕು.

# ಪರಿಶಿಷ್ಟ

(೨೧ನೇ ನಿಯಮವನ್ನು ನೋಡಿರಿ)

| | |
|---|---|
| **(ಅ) ಮದುವೆ— ವರ್ಗ—** | ರೂ ಆ ಪೈ |
| ೧) ಯಾವ ಮದುವೆಗಾಗಿ ರೂ ೧೦೦೦–೦–೦ ಗಿಂತ ಹೆಚ್ಚು ವೆಚ್ಚವನ್ನು ಮಾಡಲು ಯೋಚಿಸಲಾಗಿದೆ. | ೫–೦–೦ |
| ೨) ಯಾವ ಮದುವೆಗಾಗಿ ರೂ ೫೦೦ ಕ್ಕಿಂತ ಹೆಚ್ಚು ಆದರೆ ರೂ ೧೦೦೦–೦–೦ ಮಿಕ್ಕದಷ್ಟು ವೆಚ್ಚವನ್ನು ಮಾಡಲು ಯೋಚಿಸಲಾಗಿದೆ. | ೨–೦–೦ |
| ೩) ಯಾವ ಮದುವೆಗಾಗಿ ರೂ ೨೦೦–೦–೦ ಗಿಂತ ಹೆಚ್ಚು ಆದರೆ ರೂ ೫೦೦–೦–೦ ಮೀರದಷ್ಟು ವೆಚ್ಚವನ್ನು ಮಾಡಲು ಯೋಚಿಸಲಾಗಿದೆ. | ೧–೦–೦ |
| ೪) ಯಾವ ಮದುವೆಗಾಗಿ ರೂ ೧೦೦–೦–೦ ಗಿಂತ ಹೆಚ್ಚು ಆದರೆ ರೂ ೨೦೦–೦–೦ ಮೀರದಷ್ಟು ವೆಚ್ಚವನ್ನು ಮಾಡಲು ಯೋಚಿಸಲಾಗಿದೆ. | ೦–೮–೦ |
| **ಬ) ದತ್ತಕ— ವರ್ಗ—** | |
| ೧) ಯಾವ ದತ್ತಕದಲ್ಲಿ ದತ್ತಕತೆಗೆದುಕೊಳ್ಳುವವನ ಆಸ್ತಿಯ ಬೆಲೆಯು ದತ್ತಕ ವಿಧಾನದ ತಾರೀಖಿನ ದಿವಸ ರೂ ೫೦೦–೦–೦ ಮೀರುತ್ತದೆ. | ೫–೦–೦ |
| ೨) ಯಾವ ದತ್ತಕದಲ್ಲಿ, ದತ್ತಕ ತೆಗೆದುಕೊಳ್ಳುವವನ ಆಸ್ತಿಯ ಬೆಲೆಯು ದತ್ತಕ ವಿಧಾನದ ತಾರೀಖಿನ ದಿವಸ ರೂ ೨೦೦೦–೦–೦ ಮೀರುತ್ತಿದ್ದರೆ, ಆದರೆ ರೂ ೫೦೦೦ ಗಿಂತ ಹೆಚ್ಚಾಗದಿದ್ದರೆ. | ೨–೮–೦ |
| ೩) ಯಾವ ದತ್ತಕದಲ್ಲಿ, ದತ್ತಕ ತೆಗೆದುಕೊಳ್ಳುವವನ ಆಸ್ತಿಯ ಬೆಲೆಯು ದತ್ತಕ ವಿಧಾನದ ತಾರೀಖಿನ | ೧–೦–೦ |

ದಿವಸ ರೂ ೧೦೦೦-೦-೦ ಮೀರುತ್ತಿದ್ದರೆ,
ಆದರೆ ರೂ ೨೦೦೦-೦-೦ ಗಿಂತ ಹೆಚ್ಚಾಗಿರದಿದ್ದರೆ,

೪) ಯಾವ ದತ್ತಕದಲ್ಲಿ, ದತ್ತಕ ತೆಗೆದುಕೊಳ್ಳುವವನ ೦-೮-೦
ಆಸ್ತಿಯ ಬೆಲೆಯು ದತ್ತಕ ವಿಧಾನದ ತಾರೀಖಿನ
ದಿವಸ ರೂ ೫೦೦-೦-೦ ಗಿಂತ ಅಧಿಕವಾದರೆ
ಆದರೆ ರೂ ೧೦೦೦-೦-೦ ಮೀರದಿದ್ದರೆ

ಕ) ಮೇಜವಾನಿಗಳು— ವರ್ಗ—

೧) ಯಾವ ಮೇಜವಾನಿಗಾಗಿ ರೂ ೫೦೦-೦-೦ ಗಿಂತ ೩-೦-೦
ಅಧಿಕ ವೆಚ್ಚವನ್ನು ಮಾಡಲು ಯೋಚಿಸಲಾಗಿದೆ

೨) ಯಾವ ಮೇಜವಾನಿಗಾಗಿ ರೂ ೨೫೦-೦-೦ ಗಿಂತ ೨-೦-೦
ಹೆಚ್ಚು ಆದರೆ ರೂ ೫೦೦-೦-೦ ಮಿಕ್ಕದಷ್ಟು
ವೆಚ್ಚವನ್ನು ಮಾಡಲು ಯೋಚಿಸಲಾಗಿದೆ

೩) ಯಾವ ಮೇಜವಾನಿಗಾಗಿ ರೂ ೧೦೦-೦-೦ ಗಿಂತ ೧-೦-೦
ಹೆಚ್ಚು ಆದರೆ ರೂ ೨೫೦-೦-೦ ಮಿಕ್ಕದಷ್ಟು
ವೆಚ್ಚವನ್ನು ಮಾಡಲು ಯೋಚಿಸಲಾಗಿದೆ.

೪) ಯಾವ ಮೇಜವಾನಿಗಾಗಿ ರೂ ೫೦-೦-೦ ಗಿಂತ ೦-೮-೦
ಹೆಚ್ಚು ಆದರೆ ರೂ ೧೦೦-೦-೦ ಮಿಕ್ಕದಷ್ಟು
ವೆಚ್ಚವನ್ನು ಮಾಡಲು ಯೋಚಿಸಲಾಗಿದೆ.

# ೬ನೇ ಭಾಗ— ಜನರಲ್ ಸ್ಯಾನಿಟರಿ ಸೆಸ್

೨೪. ಈ ಭಾಗದಲ್ಲಿ ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವುದೇ ಬಾಧೆ ಬರದಿದ್ದರೆ—

(೧) "ಸೆಸ್" ಅಂದರೆ ಜನರಲ್ ಸ್ಯಾನಿಟರಿ ಸೆಸ್ ಎಂದರ್ಥ;

(೨) "ಮನೆ" ಅಂದರೆ ಒಂದೇ ಆವಾರದಲ್ಲಿರುವ ಮತ್ತು ಒಬ್ಬನೇ ಭೋಗವಟಿ ಮಾಡುವವನಿಂದ ಉಪಯೋಗಿಸಲ್ಪಡುವ ಯಾವುದೇ ಕಟ್ಟಡ ಅಥವಾ ಕಟ್ಟಡಗಳ ಸಮೂಹ ಎಂದರ್ಥವಾಗುತ್ತದೆ.

(೩) "ಭೋಗವಟಿ ಮಾಡುವವನು" ಇದರಲ್ಲಿ ಒಡೆಯನೆಂದಾಗಲಿ, ಒಡೆಯನ ಏಜೆಂಟ ನೆಂದಾಗಲಿ ಅಥವಾ ಭಾಡಿಗೆದಾರನೆಂದಾಗಲಿ ಯಾವನ ಪ್ರತ್ಯಕ್ಷ ವಶದಲ್ಲಿ ಮನೆಯು ಇರುವದೋ ಅವನ ಸಮಾವೇಶ ವಾಗುತ್ತದೆ.

(೪) "ಒಡೆಯ" ಇದರಲ್ಲಿ ಮನೆಯನ್ನು ಭಾಡಿಗೆಗೆ ಕೊಟ್ಟರೆ, ಆ ಮನೆಯ ಭಾಡಿಗೆಯನ್ನು ಸ್ವೀಕರಿಸಲು ಇಲ್ಲವೆ ಸ್ವೀಕರಿಸಲು ಹಕ್ಕುಳ್ಳ ಮನುಷ್ಯನ ಸಮಾವೇಶವಾಗುತ್ತದೆ.

೨೫. (೧) ಸೆಸ್ ಹೇರಬೇಕೆಂದು ನಿರ್ಧರಿಸುವ ಪಂಚಾಯತು ಗ್ರಾಮದ ಹದ್ದಿಯಲ್ಲಿ ವಾಸಿಸಲ್ಪಟ್ಟ ಅಥವಾ ಭೋಗವಟಿ ಮಾಡಲ್ಪಡುವ ಎಲ್ಲ ಮನೆಗಳಮೇಲೆ, ಈ ಭಾಗಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟಪಡಿಸಿದ ದರದಂತೆ ಅದನ್ನು ಹೇರಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಈ ನಿಯಮಗಳನ್ನು ಮಾಡುವ ತಾರೀಖಿನ ತತ್ಪೂರ್ವದಲ್ಲಿ ಪಂಚಾಯತಿಯು ಇಂಥ ಸೆಸ್ಸನ್ನು ಕೂಡ್ರಿಸುತ್ತಿದ್ದರೆ, ಅದು ಸದರ ಸೆಸ್ಸನ್ನು ಇಂಥ ತಾರೀಖಿನ ಮೊದಲು ಇದ್ದ ದರದಂತೆ ಆಕರಣೆ ಮಾಡಬೇಕು. ಮತ್ತೆ ಗೊತ್ತುಪಡಿಸುವದೇನಂದರೆ,

ಅ) ಲೋಕಲ್ ಬೋರ್ಡುಗಳ, ಮುನಸಿಪಾಲಟಿಗಳ, ಮುಂಬಯಿ ನಗರ ಮುನಸಿಪಲ್ ಕಾರ್ಪೋರೇಶನದ ಮತ್ತು ಪಂಚಾಯತಿಗಳ ಒಡೆತನವುಳ್ಳ ಮತ್ತು ಸಾರ್ವಜನಿಕ ಉದ್ದೇಶಗಳಿಗಾಗಿ ಉಪಯೋಗಿಸಲ್ಪಡುವ ಮತ್ತು ಲಾಭದ ಉದ್ದೇಶಗಳಿಗಾಗಿ ಉಪ

ಯೋಗಿಸಲ್ಪಡದ ಅಥವಾ ಉಪಯೋಗಿಸುವ ಉದ್ದೇಶವಿಲ್ಲದ ಭೂಮಿಗಳು ಮತ್ತು ಕಟ್ಟಡಗಳು,

ಆ ಆ) ಲಾಭದ ಉದ್ದೇಶಗಳಿಗಾಗಿ ಉಪಯೋಗಿಸಲ್ಪಡುವ ಅಥವಾ ಉಪಯೋಗಿಸಲ್ಪಡದಿರುವ ಅಥವಾ ಉಪಯೋಗಿಸುವ ಉದ್ದೇಶ ವಿರುವ ಅಥವಾ ಉದ್ದೇಶವಿರದಿರುವ ಸರಕಾರಿ ಭೂಮಿಗಳು ಮತ್ತು ಕಟ್ಟಡಗಳು, ಆದರೆ ಇವುಗಳಲ್ಲಿ ೧೯೪೧ನೇ ಇಸ್ವಿಯ ರೇಲ್ವೆಗಳ (ಲೋಕಲ್ ಅಥಾರಿಟಿಜ ಟ್ಯಾಕ್ಸೇಶನ) ಕಾನೂನಿನ ೩ನೇ ಕಲಮಿನನ್ವಯ ತೆಗೆದ ನೋಟೀಫಿಕೇಶನಕ್ಕನುಸರಿಸಿ, ರೇಲ್ವೆ ಆಡಳಿತೆಯು ಯಾವ ಭೂಮಿಗಳ ಇಲ್ಲವೆ ಕಟ್ಟಡಗಳ ಸಂಬಂಧ ಕರವನ್ನು ಅಥವಾ ಅದರ ಬದಲಾಗಿ ಹಣವನ್ನು ಕೊಡ ಬೇಕಾಗುವದೋ ಅಂಥ ಭೂಮಿಗಳ ಮತ್ತು ಕಟ್ಟಡಗಳ ಸಮಾವೇಶವಾಗುವದಿಲ್ಲ. ಇವು ಈ ಭಾಗದನ್ವಯ ಕರದಿಂದ ಮುಕ್ತವಿರುತ್ತವೆ.

(೨) ೧ನೇ ಉಪನಿಯಮದಲ್ಲಿ ಉಲ್ಲೇಖಿಸಲ್ಪಟ್ಟ ದರವು ತಾರೀಖು ೧೮-೧೨-೧೯೩೪ನೇ ಇಸ್ವಿಯ ಸರಕಾರಿ ಪ್ರಕಟನೆ ಜನರಲ್ ಡಿಪಾರ್ಟ ಮೆಂಟ ನಂ ಎಸ್ ೧೭೪ (೧) ಇದರಲ್ಲಿಯ, ಕಾಲಕಾಲಕ್ಕೆ ತಿದ್ದುಪಡೆಹೊಂದಿ, ಗೊತ್ತುಮಾಡಲ್ಪಟ್ಟ ಪರಾಕಾಷ್ಟ ದರದ ಮಿತಿಗೆ ಒಳಪಟ್ಟಿರಬೇಕು.

೨೬ ಸೆಸ್ಸನ್ನು ಎಪ್ರಿಲ ೧ರಿಂದ ಪ್ರಾರಂಭವಾಗಿ ಮಾರ್ಚ ೩೧ಕ್ಕೆ ಮುಗಿಯುವ ವರ್ಷಕ್ಕಾಗಿ ಆಕರಣೆ ಮಾಡಬೇಕು. ೧ನೇ ಎಪ್ರಿಲವನ್ನು ಬಿಟ್ಟು ಉಳಿದ ತಾರೀಖಿನ ದಿವಸ ಸದರ ಸೆಸ್ ಅಮಲಿನಲ್ಲಿ ಬಂದರೆ, ಆ ತಾರೀಖು ೧ನೇ ಜುಲೈ, ೧ನೇ ಅಕ್ಟೋಬರ, ೧ನೇ ಜನೇವರಿ ಮತ್ತು ೧ನೇ ಎಪ್ರಿಲ ದಿವಸ ಮುಗಿಯುವ ತ್ರೈಮಾಸಿಕ ಅವಧಿಗಾಗಿ ಆಕರಿಸಲ್ಪಡಬೇಕು ಮತ್ತು ಆ ಮೇಲೆ ಇದೇ ವರ್ಷಕ್ಕಾಗಿ ಆಕರಿಸಲ್ಪಡಬೇಕು.

೨೭ (೧) ಮನೆಯನ್ನು ಪ್ರತ್ಯಕ್ಷ ಭೋಗವಟಿ ಮಾಡುವವನು ಅದರ ಒಡೆಯನಾಗಿದ್ದರೆ, ಸೆಸ್ಸನ್ನು ಮುಖ್ಯವಾಗಿ ಅವನಿಂದ ವಸೂಲ ಮಾಡಬೇಕು.

(೨) ಮನೆಯನ್ನು ಒಡೆಯನು ಭೋಗವಟಿ ಮಾಡದಿದ್ದರೆ, ಸೆಸ್ಸನ್ನು ಮುಖ್ಯವಾಗಿ,

ಅ) ಮನೆಯು ಭಾಡಿಗೆಗೆ ಕೊಡಲ್ಪಟ್ಟಿದ್ದರೆ, ಭಾಡಿಗೆಗೆ ಕೊಡುವವನ ಕಡೆಯಿಂದ

ಬ) ಅದು ಪೋಟ ಭಾಡಿಗೆಯಿಂದ ಕೊಡಲ್ಪಟ್ಟಿದ್ದರೆ, ವರಿಷ್ಟ ಭಾಡಿಗೆಗೆ ಕೊಡುವವನಿಂದ,

ಕ) ಅದು ಭಾಡಿಗೆಯಿಂದ ಕೊಡಲ್ಪಟ್ಟಿರದಿದ್ದರೆ, ಅದನ್ನು ಭಾಡಿಗೆಗೆ ಕೊಡಲು ಅಧಿಕಾರ ಪಡೆದವನಿಂದ,
ವಸೂಲ ಮಾಡಬೇಕು.

(೩) ಮುಖ್ಯವಾಗಿ ಕರವನ್ನು ಕೊಡಲು ಪಾತ್ರನಿದ್ದ ಮನುಷ್ಯನಿಂದ ಇಂಥ ಸೆಸ್ ಸಂಬಂಧದಲ್ಲಿ ಯಾವುದೇ ಹಣವು ವಸೂಲಾಗದಿದ್ದರೆ, ಅದು ಯಾವ ಮನೆಯ ಸಂಬಂಧ ಕೊಡಲ್ಪಡಬೇಕಾಗುವದೋ ಆ ಮನೆಯ ಯಾವುದೇ ಭಾಗವನ್ನು ಭೋಗವಟಿ ಮಾಡುವವನ ಕಡೆಯಿಂದ ಸರಪಂಚನು ಆ ಮನೆಯ ಭಾಗಕ್ಕೆ ಅದರ ಪ್ರಮಾಣಕ್ಕನುಸರಿಸಿ ಕೊಡಬೇಕೆಂದು ಗೊತ್ತು ಮಾಡುವಷ್ಟು(ಸೆಸ್ಸಿನ) ಭಾಗವನ್ನು ವಸೂಲ ಮಾಡಬೇಕು.

# ಪರಿಶಿಷ್ಟ

(೩೫ನೇ ನಿಯಮವನ್ನು ನೋಡಿರಿ).

## ಸೆಸ್ಸಿನ ದರ

"ನಿಯಮಗಳ" ಭಾಗದ ೨೮ನೇ ಮತ್ತು ೨೯ನೇ ಪುಟಗಳನ್ನು ನೋಡಿರಿ.

**ವಿವರಣೆ:—** ಈ ಪರಿಶಿಷ್ಟದ ಉದ್ದೇಶಗಳಿಗಾಗಿ, "ಭಂಡವಲಿನ ಕಿಮ್ಮತ್ತು" ಮತ್ತು "ವಾರ್ಷಿಕ ಭಾಡಿಗೆ ಕಿಮ್ಮತ್ತು" ಅಂದರೆ, 'ಸದರ ಆಕ್ಟಿನ ಆಕ್ಟಿನ ೮೯ನೇ (೧)ನೇ ಕಲಮಿನನ್ವಯ ಗ್ರಾಮದಲ್ಲಿ ಮನೆಗಳ ಮತ್ತು

ಭೂಮಿಗಳ ಒಡೆಯರ ಅಥವಾ ಭೋಗವಟೆ ಮಾಡುವವರಮೇಲೆ ಕರ ಹೇರುವದಕ್ಕಾಗಿ ತಯಾರಿಸಿದ ಆಕರಣೆಯ ಯಾದಿಯಲ್ಲಿ ನಮೂದಿಸಲ್ಪಟ್ಟ ಭಂಡವಲಿನ ಕಿಮ್ಮತ್ತು ಮತ್ತು ವಾರ್ಷಿಕ ಭಾಡಿಗೆಗೆ ಕಿಮ್ಮತ್ತು ಎಂದರ್ಥ.

## ೭ನೇ ಭಾಗ— ಸ್ಪೆಶಲ್ ಸ್ಯಾನಿಟರಿ ಸೆಸ್

೨೮. ಈ ಭಾಗದಲ್ಲಿ ವಿಷಯದ ಅಥವಾ ಸಂದರ್ಭದ ಮೇಲಿಂದ ಬಾಧೆ ಬರದಿದ್ದರೆ—

(೧) "ಸೆಸ್" ಅಂದರೆ ಸ್ಪೆಶಲ್ ಸ್ಯಾನಿಟರಿ ಸೆಸ್ ಎಂದರ್ಥ.

(೨) "ಕುಟುಂಬ" ಅಂದರೆ, ಬರಹೋಗುವವರು ಅತಿಥಿಗಳು ಮತ್ತು ಸೇವಕರು ಇವರನ್ನು ಒಳಗೊಂಡು, ಒಂದೇ ಮನೆಯಲ್ಲಿ ಒಟ್ಟಿಗೆ ಇರುವ ಮತ್ತು ಊಟಮಾಡುವ ಜನರ ಸಮೂಹ ಎಂದರ್ಥ.

(೩) "ಮನೆ" ಮತ್ತು "ಒಡೆಯ" ಈ ಶಬ್ದಗಳಿಗೆ ಈ ನಿಯಮಗಳ ೬ನೇ ಭಾಗದಲ್ಲಿ ಅವುಗಳಿಗೆ ಯಾವ ಅರ್ಥವಿರುವದೋ ಅದೇ ಅರ್ಥವಿರುತ್ತದೆ.

೨೯. (೧) ಸೆಸ್ಸನ್ನು ಕೂಡ್ರಿಸಬೇಕೆಂದು ನಿರ್ಧರಿಸುವ ಪಂಚಾಯತು, ಈ ಭಾಗಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟಪಡಿಸಿದ ದರವನ್ನು ಮೀರದ ದರದಂತೆ ಮನೆಗಿದ್ದ ಪ್ರತಿಯೊಂದು ಪಾಯಖಾನೆಗೆ ಅಥವಾ ಶೌಚಕೂಪಕ್ಕೆ ಅಥವಾ ಇಂಥ ಪಾಯಖಾನೆಯನ್ನು ಅಥವಾ ಶೌಚಕೂಪವನ್ನು ಉಪಯೋಗಿಸುವ ಕುಟುಂಬದಮೇಲೆ ಆಕರಣೆ ಮಾಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಈ ತಿದ್ದುಪಡೆಯು ಅಮಲಿನಲ್ಲಿ ಬರುವ ತಾರೀಖಿನ ಮೊದಲು, ಪಂಚಾಯತು. ಇಂಥ ಸೆಸ್ಸನ್ನು ಕೂಡ್ರಿಸಿದ್ದರೆ, ಇಂಥ ತಾರೀಖಿನ ಮೊದಲು ಅಮಲಿನಲ್ಲಿದ್ದ ದರದಂತೆ ಜೊತೆಗಿದ್ದ ಪರಿಶಿಷ್ಟದಲ್ಲಿಯ ದರಗಳಿಗೊಳಪಟ್ಟು, ಸದರ ಸೆಸ್ಸು ಹೆಚ್ಚಿಸಲ್ಪಡುವ ವರೆಗೆ ಆಕರಣೆ ಮಾಡಬೇಕು.

(೨) ೧ನೇ ಉಪನಿಯಮದಲ್ಲಿ ಉಲ್ಲೇಖಿಸಲ್ಪಟ್ಟ ದರವು ತಾ. ೧೮–೧೨–೧೯೩೪ರ ಸರಕಾರಿ ಪ್ರಕಟನೆ ಜನರಲ್ ಡಿಪಾರ್ಟಮೆಂಟ ನಂ ಎಸ್ ೧೭೪/೧ ಇದರಲ್ಲಿ, ಕಾಲಕಾಲಕ್ಕೆ ತಿದ್ದುಪಡೆಹೊಂದಿದ ಪ್ರಕಾರ ಗೊತ್ತು ಮಾಡಿದ ಪರಾಕಾಷ್ಟದರದ ಮಿತಿಗೆ ಒಳಪಟ್ಟಿರಬೇಕು.

೩೦. ಪಂಚಾಯತು,—

ಅ) ಪಾಯಖಾನೆಯನ್ನು ಅಥವಾ ಶೌಚಕೂಪವನ್ನು ದೈಹಿಕ ಸ್ವಚ್ಛ ಮಾಡುವ ಇಲ್ಲವೆ ಅದರಲ್ಲಿಯ ಹೊಲಸನ್ನು ಪಂಚಾಯತಿಯ ಚರಂಡಿ (ಗಟಾರ)ಗಳಲ್ಲಿ ಬಿಡುವದಕ್ಕೆ ಅಥವಾ ತೆಗೆದುಕೊಳ್ಳುವ ದಕ್ಕೆ ವ್ಯವಸ್ಥೆ ಮಾಡದವಿನಃ ಮತ್ತು ಮಾಡುವವರೆಗೆ;

ಬ) ಯಾರಮೇಲೆ ಸೆಸ್ಸಿನ ಆಕರಣೆ ಮಾಡಬೇಕಾಗಿದೆ ಅವರಿಗೆ ಪ್ರತ್ಯೇಕವಾಗಿ ಇಲ್ಲವೆ ಗ್ರಾಮದ ಅಥವಾ ಗ್ರಾಮದ ಭಾಗದ ರಹವಾಸಿಗಳಿಗೆ ಸಾಮಾನ್ಯವಾಗಿ, ಪಂಚಾಯತಿಗೆ ಇಂಥ ವ್ಯವಸ್ಥೆ ಯನ್ನು ಮಾಡುವ ಮತ್ತು ಸೆಸ್ಸನ್ನು ಕೂಡ್ರಿಸುವ ಇಚ್ಛೆ ಇದ್ದ ಬಗ್ಗೆ ಒಂದು ತಿಂಗಳ ನೋಟೀಸನ್ನು ಕೊಡದವಿನಃ ಮತ್ತು ಕೊಡುವವರೆಗೆ; ೨೯ನೇ ನಿಯಮದನ್ವಯ ಸೆಸ್ಸನ್ನು ಹೇರ ಬಾರದು.

೩೧. ಸೆಸ್ಸನ್ನು ಎಪ್ರಿಲ ೧ರಿಂದ ಪ್ರಾರಂಭವಾಗಿ ಮಾರ್ಚ ೩೧ಕ್ಕೆ ಮುಗಿಯುವ ವರ್ಷಕ್ಕಾಗಿ ಆಕರಣೆ ಮಾಡಬೇಕು. ೧ನೇ ಎಪ್ರಿಲನ್ನು ಬಿಟ್ಟು ಉಳಿದ ತಾರೀಖಿನ ದಿವಸ ಸದರ ಸೆಸ್ಸು ಅಮಲಿನಲ್ಲಿ ಬಂದರೆ ಆ ತಾರೀಖು ೧ನೇ ಜುಲೈ, ೧ನೇ ಅಕ್ಟೋಬರ, ೧ನೇ ಜನೇವರಿ ಮತ್ತು ೧ನೇ ಎಪ್ರಿಲ ದಿವಸ ಮುಗಿಯುವ ತ್ರೈಮಾಸಿಕ ಅವಧಿಗಾಗಿ ಆಕರಿಸಲ್ಪಡಬೇಕು ಮತ್ತು ಆ ಮೇಲೆ ಇಡೀ ವರ್ಷಕ್ಕಾಗಿ ಆಕರಿಸಲ್ಪಡಬೇಕು.

೩೨. ಯಾವ ಮನೆಗೆ ಪಾಯಖಾನೆ ಅಥವಾ ಶೌಚಕೂಪವಿರು ವದೋ ಆ ಮನೆಯ ಒಡೆಯನಿಂದ ಸೆಸ್ಸನ್ನು ವಸೂಲ ಮಾಡಬೇಕು; ಅವನು ಹಣಕೊಡಲು ತಪ್ಪಿದರೆ, ಯಾವ ಅವಧಿಗಾಗಿ ಸೆಸ್ಸನ್ನು ಕೊಡೆ

ಬೇಕಾಗುವದೋ, ಆ ಅವಧಿಯಲ್ಲಿ ಪಾಯಖಾನೆಯನ್ನು ಅಥವಾ ಶೌಚ ಕೂಪವನ್ನು ಪ್ರತ್ಯಕ್ಷವಾಗಿ ಯಾರು ಉಪಯೋಗಿಸುವರೋ ಅವರಿಂದ ವಸೂಲಮಾಡಬೇಕು. ಒಂದು ಪಾಯಖಾನೆಯು ಅಥವಾ ಶೌಚಕೂಪವು ಒಂದಕ್ಕಿಂತ ಅಧಿಕ ಕುಟುಂಬಗಳಿಂದ ಉಪಯೋಗಿಸಲ್ಪಟ್ಟಾಗ್ಗೆ, ಮತ್ತು ಸೆಸ್ಸದ ದರವು ಪ್ರತಿಯೊಂದು ಕುಟುಂಬಿಗಾಗಿ ಗೊತ್ತುಪಡಿಸಲ್ಪಟ್ಟಾಗ್ಗೆ, ಆ ಪಾಯಖಾನೆಯನ್ನು ಅಥವಾ ಶೌಚಕೂಪವನ್ನು ಉಪಯೋಗಿಸುವ ಪ್ರತಿಯೊಂದು ಕುಟುಂಬಿನ ಮುಖ್ಯಸ್ಥನಕಡೆಯಿಂದ ಸೆಸ್ಸನ್ನು ವಸೂಲ ಮಾಡಬೇಕು.

೩೩. ಯಾವುದೇ ಪಾಯಖಾನೆಯು ಇಲ್ಲವೆ ಶೌಚಕೂಪವು ೩ ತಿಂಗಳಿಗಿಂತ ಕಡಿಮೆಯಲ್ಲದ ಅವಧಿಯವರೆಗೆ ಉಪಯೋಗಿಸಲ್ಪಡದಿದ್ದರೆ, ಪಾಯಖಾನೆಯ ಅಥವಾ ಶೌಚಕೂಪದ ಸೆಸ್ಸಿನ ಸಂಬಂಧ ಸದರ ಅವಧಿಗಾಗಿ ವಸೂಲಮಾಡಲ್ಪಟ್ಟ ಎಲ್ಲ ಹಣವನ್ನು ಅಥವಾ ಅದರ ಭಾಗವನ್ನು ಪಂಚಾಯತಿಯು ತಿರುಗಿ ಕೊಡಬಹುದು.

ಆದರೆ ಗೊತ್ತುಪಡಿಸಲ್ಪಡುವದೇನಂದರೆ, ಸದರ ಪಾಯಖಾನೆಯು ಅಥವಾ ಶೌಚಕೂಪದ ಉಪಯೋಗವು ನಿಂತು ಹೋಗಿದೆ. ಎಂಬ ಸಂಗತಿಯ ಬಗ್ಗೆ ಪಂಚಾಯತಿಗೆ ಲೇಖೀ ನೋಟಿಸು ಕೊಡಲ್ಪಡದ ವಿನಃ ಹಣವು ತಿರುಗಿ ಕೊಡಲ್ಪಡಲಾರದು ಮತ್ತು ಇಂಥ ನೋಟೀಸನ್ನು ಕೊಡುವ ತಾರೀಖಿನ ಮೊದಲಿನ ಯಾವುದೇ ಅವಧಿಗಾಗಿ ತಿರುಗಿ ಕೊಡಲ್ಪಡಲಾರದು.

# ಪರಿಶಿಷ್ಟ

(೨೯ನೇ ನಿಯಮನ್ನು ನೋಡಿರಿ.)

## ಸೆಸ್ಸಿನ ದರ

"ನಿಯಮಗಳ" ಭಾಗದ ೨೯ನೇ ಮತ್ತು ೩೦ನೇ ಪುಟಗಳನ್ನು ನೋಡಿರಿ

## ಭಾಗ ೮— ಪೇಟೆ ಮತ್ತು ಸಂತೆಗಳ ಮೇಲೆ ಫೀಗಳು

೩೪. ೧) ಪೇಟೆಗಳ ಮತ್ತು ಸಂತೆಗಳ ಮೇಲೆ ಫೀ ಯನ್ನು ಕೂಡ್ರಿಸ ಬೇಕೆಂದು ನಿರ್ಧರಿಸುವ ಪಂಚಾಯತ ಈ ಭಾಗಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟ ಮಾಡಿದ ದರಗಳಂತೇ ಅದನ್ನು ಕೂಡ್ರಿಸಬೇಕು.

೨) ೧ನೇ ಉಪನಿಯಮದಲ್ಲಿ ಉಲ್ಲೇಖಿಸಲ್ಪಟ್ಟದರಗಳು ಸರಕಾರಿ ಪ್ರಕಟನೆ ನಂ ಎಸ್ ೧೭೪(೧)ತಾ ೨೩-೨-೧೯೪೩ನೇ ಇಸ್ವಿ ಇದರಿಂದ ತಿದ್ದುಪಡೆಹೊಂದಿದ ತಾ ೧೮-೧೨-೧೯೩೪ನೇ ಇಸ್ವಿಯ ಸರಕಾರಿ ಪ್ರಕಟನೆ ಜನರಲ್ ಡಿಪಾರ್ಟಮೆಂಟ ನಂ ಎಸ್ ೧೭೪ (೧) ಇದರಲ್ಲಿ ಗೊತ್ತುಮಾಡಿದ ಪರಿಶಿಷ್ಟ ದರದ ಮಿತಿಗೆ ಒಳಪಟ್ಟಿರಬೇಕು.

೩೫. ಪಂಚಾಯತು, ಜಿಲ್ಹಾ ಮ್ಯಾಜಿಸ್ಟ್ರೇಟನ ಅನುಮತಿಯಿಂದ, ಯಾವ ಪ್ರದೇಶದ ಹದ್ದಿಯಲ್ಲಿ ಪೇಟೆಯ ಮೇಲಿನ ಫೀ ಯನ್ನು ಕೂಡ್ರಿಸ ಬೇಕು ಮತ್ತು ಯಾವ ಪ್ರದೇಶದ ಹದ್ದಿಯಲ್ಲಿ ಸಂತೆಯ ಮೇಲಿನ ಫೀ ಯನ್ನು ಕೂಡ್ರಿಸಬೇಕೆಂಬುದನ್ನು ನಿರ್ಧರಿಸಬೇಕು.

೩೬. ೩೫ನೇ ನಿಯಮದನ್ವಯ ಗೊತ್ತುಮಾಡಲ್ಪಟ್ಟ ಹದ್ದಿಗಳಲ್ಲಿ ೩೪ನೇ ನಿಯಮದನ್ವಯ ಕೊಡಬೇಕಾದ ಫೀಗಳನ್ನು ಕೊಟ್ಟು ಪಂಚಾಯತಿ ಯಿಂದ ಅಪ್ಪಣೆ ಚೀಟಿಯನ್ನು ಪಡೆಯದಲೆ, ಯಾವನೇ ಮನುಷ್ಯನು, ಅಂಗಡಿ, ಚಪ್ಪರ ಅಥವಾ ಮಳಿಗಿ ಇವುಗಳ ಉದ್ದೇಶಕ್ಕಾಗಿ, ಇಲ್ಲವೆ ಯಾವುದೇ ವಿಧದ ವ್ಯಾಪಾರವನ್ನು ಮಾಡಲು ಪ್ರಸಂಗಾನುಸಾರ, ಪೇಟೆಯಲ್ಲಿ ಅಥವಾ

ಸಂತೆಯಲ್ಲಿ, ಯಾವುದೇ ಸರಕನ್ನು ಮಾರಬಾರದು ಅಥವಾ ಯಾವುದೇ ತೆರವಿದ್ದ ಸ್ಥಳವನ್ನು ಇಲ್ಲವೆ ಭೂಮಿಯ ಪ್ಲಾಟನ್ನು ಉಪಯೋಗ ಮಾಡ ಬಾರದು.

೩೭. ಪೇಟಿಯ ಸಂಬಂಧದ ಅಪ್ಪಣೆಚೀಟಿಯು ಯಾವ ಅವಧಿಗಾಗಿ ಕೊಡಲ್ಪಟ್ಟಿದೆಯೋ ಆ ಅವಧಿಗಾಗಿ ಮತ್ತು ಸಂತೆಯ ಸಂಬಂಧದ ಅಪ್ಪಣೆ ಚೀಟಿಯು ಅದರಲ್ಲಿ ನಿರ್ದಿಷ್ಟಪಡಿಸಿದ ಸಂತೆಯ ದಿವಸಕ್ಕಾಗಿ ಕ್ರಮಬದ್ಧ ವಿರುವದು.

೩೮. ಪಂಚಾಯತಿಯಿಂದ ಅಧಿಕಾರಪಡೆದ ಮನುಷ್ಯನು, ಫೀಯ ಹಣವನ್ನು ಸ್ವೀಕರಿಸಬೇಕು. ಅದಕ್ಕಾಗಿ ಪಾವತಿಯನ್ನು ಕೊಡಬೇಕು. ಮತ್ತು ಆ ಮೇಲೆ ಅಪ್ಪಣೆಚೀಟಿಯನ್ನು ಕೊಡಬೇಕು.

೩೯. ಪಂಚಾಯತಿಯು ೩೮ನೇ ನಿಯಮದನ್ವಯ ಕೊಡಬೇಕಾದ ಪಾವತಿಯ ಮತ್ತು ಅಪ್ಪಣೆಚೀಟಿಯ ನಮೂನೆಯನ್ನು ಗೊತ್ತುಮಾಡ ಬೇಕು.

೪೦. ಒಮ್ಮೆ ವಸೂಲಾದ ಫೀ ಹಣದಲ್ಲಿ ಸೂಟ ಬಿಡಲು ಇಲ್ಲವೆ ಅದನ್ನು ತಿರುಗಿ ಕೊಡಲು ಬರುವದಿಲ್ಲ.

೪೧. ಈ ನಿಯಮಗಳು, ೧೯೩೯ನೇ ಇಸ್ವಿಯ ಮುಂಬಯಿ ಒಕ್ಕಲ ತನ ಹುಟ್ಟುವಳಿ ಮಾರ್ಕೇಟ್ಸ ಕಾನೂನಿನ ಉದ್ದೇಶಗಳಿಗಾಗಿ ಸ್ಥಾಪಿಸಲ್ಪಟ್ಟ ಪೇಟೆಗೆ ಅನ್ವಯಿಸುವದಿಲ್ಲ.

# ಪರಿಶಿಷ್ಟ

(೩೪ನೇ ನಿಯಮನ್ನು ನೋಡಿರಿ.)

೯ ಚೌರಸಫೂಟಿಗಿಂತ ಅಧಿಕವಿಲ್ಲದ ಪ್ರತಿಯೊಂದು ಪ್ಲಾಟಿಗೆ ದಿನಕ್ಕೆ ೨ ಆಣೆ ಅಥವಾ ತಿಂಗಳಿಗೆ ೩ ರೂಪಾಯಿ ಮತ್ತು ೯ ಚೌರಸ ಫೂಟಿನ ಪ್ರತ್ಯೇಕ ಹೆಚ್ಚಿನ ಪ್ಲಾಟಿಗೆ ಅಥವಾ ಅದರ ಭಾಗಕ್ಕೆ ದಿನಕ್ಕೆ ೧ ಆಣೆ ಅಥವಾ ತಿಂಗಳಿಗೆ ರೂ ೧–೮–೦.

ವ್ಯಾಪಾರದ ಉದ್ದೇಶಗಳಿಗಾಗಿ ಪೇಟಿಗೆ ಅಥವಾ ಸಂತೆಗೆ ತರಲ್ಪಟ್ಟ ಯಾವುದೇ ಸರಕಿಗಾಗಿ ಒಂದು ಬುಟ್ಟಿಗೆ ೬ ಪೈ ಅಥವಾ ಒಂದು ಚೀಲಕ್ಕೆ ೩ ಆಣೆ ಅಥವಾ (೧೬ ಮುಂಬೈ ಮಣದ) ಪ್ರತಿ ಚಕ್ಕಡಿ ವಜ್ಜೆಗೆ ೧೨ ಆಣೆಗಳು.

**ಭಾಗ ೯— ವಾಹನ ಮತ್ತು ಪ್ರಾಣಿಗಳ ಮೇಲೆ ಜಕಾತಿ—**

೪೨. ಈ ಭಾಗದಲ್ಲಿ—

ಅ) "ಪರಿಶಿಷ್ಟ" ಅಂದರೆ, ಈ ಭಾಗಕ್ಕೆ ಜೋಡಿಸಿದ ಪರಿಶಿಷ್ಟ ವೆಂದರ್ಥ;

ಬ) "ವಾಹನ" ಅಂದರೆ, ಆ ಪರಿಶಿಷ್ಟದ ೧ನೇ ಆಸನದಲ್ಲಿ ನಿರ್ದಿಷ್ಟ ಪಡಿಸಿದ ವಾಹನವೆಂದರ್ಥ, ಆದರೆ ಇದರಲ್ಲಿ ಮೋಟರ ವಾಹನ ಅಥವಾ ಟ್ರೇಲರ ಇವರ ಸಮಾವೇಶವಾಗುವದಿಲ್ಲ.

೪೩. ೧) ಯಾವುದೇ ಜಾತ್ರೆಯ ಇಲ್ಲವೆ ಉತ್ಸವದ ಪ್ರದೇಶವನ್ನು ಪ್ರವೇಶಿಸುವ, ಪರಿಶಿಷ್ಟದ ೧ನೇ ಆಸನದಲ್ಲಿ ನಿರ್ದಿಷ್ಟಪಡಿಸಿದ ಪ್ರಾಣಿಗಳ ಅಥವಾ ವಾಹನಗಳ ಮೇಲೆ ಜಕಾತಿಯನ್ನು ಹೇರಲು ನಿರ್ಧರಿಸುವ ಪಂಚಾಯತು, ಪರಿಶಿಷ್ಟದ ೨ನೇ ಆಸನದಲ್ಲಿ ಅವುಗಳ ಮುಂದೆ ನಿರ್ದಿಷ್ಟಪಡಿಸಿದ ದರದಂತೆ ಹೇರಬೇಕು.

೨) ೧ನೇ ಉಪನಿಯಮದಲ್ಲಿ ಉಲ್ಲೇಖಮಾಡಲ್ಪಟ್ಟ ದರವು ತಾ ೧೦–೧–೧೯೪೪ ನೇ ಇಸ್ವಿಯ ಸರಕಾರಿ ಪ್ರಕಟನೆ

ನಂ ಎಸ್ ೧೭೪ (೧) ಇದರಿಂದ ತಿದ್ದುಪಡೆಹೊಂದಿದ ತಾ ೧೮-೧೨-೧೯೩೪ನೇ ಇಸ್ವಿಯ ಸರಕಾರಿ ಪ್ರಕಟನೆ ಜನರಲ್ ಡಿಪಾರ್ಟಮೆಂಟ ನಂ ಎಸ್ ೧೭೪ (೧) ಇದರಲ್ಲಿ ಗೊತ್ತುಮಾಡಿದ ಪರಿಶಿಷ್ಟ ದರದ ಮಿತಿಗೆ ಒಳಪಟ್ಟಿರ ಬೇಕು

೪೪. ಪಂಚಾಯತು, ಜಿಲ್ಹಾ ಲೋಕಲಬೋರ್ಡು ಮತ್ತು ಕಲೆಕ್ಟರನ ಪೂರ್ವ ಸಮ್ಮತಿಯಿಂದ, ೪೩ನೇ ನಿಯಮದನ್ವಯ ಜಕಾತಿಯನ್ನು ಹೇರುವ ಉದ್ದೇಶಕ್ಕಾಗಿ, ಯಾವುದೇ ಜಾತ್ರೆಯ ಇಲ್ಲವೆ ಉತ್ಸವದ ಕ್ಷೇತ್ರದ ಹದ್ದು ಗಳನ್ನು ಗೊತ್ತುಮಾಡಬೇಕು.

೪೫. ೪೩ನೇ ನಿಯಮದನ್ವಯ ವಸೂಲಮಾಡುವ ಜಕಾತಿಯನ್ನು ಒಂದು ದಿವಸದಲ್ಲಿ ಒಂದಕ್ಕಿಂತ ಅಧಿಕ ಸಲ ವಸೂಲ ಮಾಡಬಾರದು. ( ಮಧ್ಯರಾತ್ರಿಯಿಂದ ಮಧ್ಯರಾತ್ರಿಯವರೆಗೆ ಒಂದು ದಿವಸವೆಂದು ಗಣಿಸ ಬೇಕು. )

೪೬. ಪ್ರಾಣಿಯಿಂದ ಎಳೆಯಲ್ಪಡುವ ವಾಹನದ ಮೇಲೆ ಜಕಾತಿ ಯನ್ನು ವಸೂಲಮಾಡಿದ್ದರೆ, ಇಂಥ ಪ್ರಾಣಿಯ ಮೇಲೆ ಜಕಾತಿಯನ್ನು ವಸೂಲಮಾಡಬಾರದು.

೪೭. ಈ ಕೆಳಗಿನ ಪ್ರಸಂಗಗಳಲ್ಲಿ ಜಕಾತಿಯನ್ನು ವಸೂಲಮಾಡ ಬಾರದು.

೧) ಜಾತ್ರೆಯ ಅಥವಾ ಉತ್ಸವದ ಪ್ರದೇಶದಲ್ಲಿ ಕೆಲಸದ ಮೇಲಿದ್ದ ಸರಕಾರಿ ನೌಕರರ ಇಲ್ಲವೆ ಪಂಚಾಯತಿಯ ಸಭಾಸದರ ಮತ್ತು ಸೇವಕರ ಸಾಮಾನುಗಳನ್ನು ಒಯ್ಯುವ ವಾಹನ ಅಥವಾ ಪ್ರಾಣಿ.

೨) ಗೊಬ್ಬರ, ತಮ್ಮ ಹೊಲಗಳ ಒಕ್ಕಲತನದ ಹುಟ್ಟುವಳಿ ಅಥವಾ ಉಪಕರಣಗಳನ್ನು ಒಯ್ಯುವ ಗ್ರಾಮದ ಒಕ್ಕಲಿಗರ ಚಕ್ಕಡಿಗಳು.

೩) ಮಾರಾಟದ ಉದ್ದೇಶಕ್ಕಾಗಿ ಜಾತ್ರೆಯ ಅಥವಾ ಉತ್ಸವದ ಪ್ರದೇಶ ದಲ್ಲಿ ತರಲ್ಪಟ್ಟ ಪ್ರಾಣಿಗಳನ್ನು ಬಿಟ್ಟು ಯಾವ ಗ್ರಾಮದಲ್ಲಿ ಜಾತ್ರೆ ಅಥವಾ ಉತ್ಸವವು ಜರಗುತ್ತಿದೆಯೋ ಆ ಗ್ರಾಮದ ರಹವಾಸಿಗಳ ಪ್ರಾಣಿಗಳು.

೪೮. ಜಕಾತಿಯು ಇದರ ಬಗ್ಗೆ ಪಂಚಾಯತಿಯಿಂದ ಅಧಿಕಾರ ಪಡೆದ ಜನರಿಂದ, ಮತ್ತು ಈ ಉದ್ದೇಶಕ್ಕಾಗಿ, ಗೊತ್ತುಮಾಡಲ್ಪಡಬಹುದಾದಂಥ ಹೆಬ್ಬಾಗಿಲು (ಅಗಸಿ)ಗಳಲ್ಲಿ, ನಾಕೆಗಳಲ್ಲಿ ಅಥವಾ ತಪಾಸಮಾಡುವ ಸ್ಥಳಗಳಲ್ಲಿ ವಸೂಲ ಮಾಡಲ್ಪಡಬೇಕು. ವಾಹನಗಳ ಮತ್ತು ಪ್ರಾಣಿಗಳ ಸಂಬಂಧ ಕೊಡಬೇಕಾದ ದರವನ್ನು ತೋರಿಸುವ, ಜಿಲ್ಹೆಯ ಪ್ರಾದೇಶಿಕ ಭಾಷೆಯಲ್ಲಿ ಸುಸ್ಪಷ್ಟವಾಗಿ ಬರೆಯಲ್ಪಟ್ಟ ಅಥವಾ ಮುದ್ರಿಸಲ್ಪಟ್ಟ ಕೋಷ್ಟಕವನ್ನು ಸಾರ್ವಜನಿಕರ ಮಾಹಿತಿಗಾಗಿ, ಜಕಾತಿಯನ್ನು ವಸೂಲಮಾಡುವ ಹೆಬ್ಬಾಗಿಲು, ನಾಕೆ ಅಥವಾ ತಪಾಸಮಾಡುವ ಸ್ಥಳದ ಸಮೀಪದಲ್ಲಿ, ಕಾಣಿಸುವ ಸ್ಥಳದಲ್ಲಿ ಪ್ರದರ್ಶಿಸಬೇಕು.

೪೯. ಜಕಾತಿಯನ್ನು ಕೊಟ್ಟ ಬಗ್ಗೆ ಪಾವತಿಯನ್ನು ಪಂಚಾಯತಿಯು ನಿರ್ಧರಿಸಬಹುದಾದ ನಮೂನೆಯಲ್ಲಿ ಕೊಡಬೇಕು.

೫೦. ೧) ಈ ಭಾಗದನ್ವಯ ಬೇಡಿದ ಜಕಾತಿಯನ್ನು ಕೊಡದಿದ್ದರೆ, ೪೮ನೇ ನಿಯಮದನ್ವಯ ಜಕಾತಿಯನ್ನು ವಸೂಲಮಾಡಲು ಅಧಿಕಾರಪಡೆದ ಮನುಷ್ಯನು ಯಾವ ಪ್ರಾಣಿಯ ಮೇಲೆ ಅಥವಾ ವಾಹನದ ಮೇಲೆ ಜಕಾತಿಯನ್ನು ವಸೂಲಮಾಡಬೇಕಾಗಿದೆಯೋ ಆ ಪ್ರಾಣಿಯನ್ನು ಅಥವಾ ವಾಹನವನ್ನು ಇಲ್ಲವೆ (ಜಕಾತಿಯ) ಬೇಡಿಕೆಗೆ ಸಾಕಾಗುವಷ್ಟು ಬೆಲೆಯ ವಾಹನದ ಅಥವಾ ಪ್ರಾಣಿಯ ಮೇಲಿನ ಹೊರೆ (ಒಜ್ಜೆ)ಯ ಯಾವುದೇ ಭಾಗವನ್ನು ಜಪ್ತ ಮಾಡಬಹುದು. ಮತ್ತು ಅದನ್ನು ಹಿಡಿದಿಡಬಹುದು. ಜಪ್ತಮಾಡಿದ ಆಸ್ತಿಯ ಯಾದಿಯನ್ನು ಯಾವನ ವಶದಿಂದ ಆಸ್ತಿಯನ್ನು ಜಪ್ತಮಾಡಲಾಗಿದೆಯೋ ಅವನಿಗೆ (ಇನ್ನು ಮುಂದೆ ಇವನನ್ನು ತಪ್ಪುಮಾಡಿದವ ಎಂದು ಉಲ್ಲೇಖಿಸಲಾಗಿದೆ ) ಪೂರೈಸಬೇಕು. ಅದರ ಜೊತೆಗೆ ನೋಟೀಸಿನಲ್ಲಿ ನಿರ್ದಿಷ್ಟ ಪಡಿಸಿದ ರೀತಿಯಲ್ಲಿ ಆಸ್ತಿಯನ್ನು ಮಾಡಲಾಗುವದೆಂದು ಲೇಖೀ ನೋಟಿಸನ್ನು ಕೊಡಬೇಕು. ಅದೇ ಕಾಲಕ್ಕೆ ಆ ನೋಟೀಸಿನ ಒಂದು ಪ್ರತಿಯನ್ನು ಸರಪಂಚನಿಗೆ ಕೊಡಬೇಕು.

೨) ೧ನೇ ಉಪನಿಯಮದನ್ವಯ, ಜಪ್ತಮಾಡಲ್ಪಟ್ಟ ಯಾವುದೇ ಆಸ್ತಿಯು ಬೇಗನೆ ಮತ್ತು ಸ್ವಾಭಾವಿಕವಾಗಿ ಹಾಳಾಗುತ್ತಿದ್ದರೆ, ಅಥವಾ

ಅದನ್ನು ಕಾಯ್ದಿಡುವ ವೆಚ್ಚವು ತಪ್ಪುಮಾಡಿದವನಿಂದ ವಸೂಲ ಬರತಕ್ಕ ಜಕಾತಿಯ ಹಣಕ್ಕಿಂತ ಅಧಿಕವಾಗುವ ಸಂಭವವಿದ್ದಾಗ್ಗೆ, ಆಸ್ತಿಯನ್ನು ಜಪ್ತಮಾಡುವ ಮನುಷ್ಯನು ಅಥವಾ ಮನುಷ್ಯರು, ತಪ್ಪುಮಾಡಿದವನಿಗೆ ಮತ್ತು ಸರಪಂಚನಿಗೆ ಅಥವಾ ಅವನ ಗೈರಹಾಜರಿಯಲ್ಲಿ ಉಪಸರಪಂಚನಿಗೆ, ಅದನ್ನು ಕೂಡಲೆ ಮಾರಲಾಗುವದೆಂದು ತಿಳಿಸಬೇಕು. ಆ ಮೇಲೆ ಪ್ರಸಂಗಾನುಸಾರ, ಸರಪಂಚನು, ಅಥವಾ ಉಪಸರಪಂಚನು, ಬೇಡಿದ ಜಕಾತಿಯ ಹಣವು ಕೂಡಲೆ ಕೊಡಲ್ಪಡದಿದ್ದರೆ, ಅದನ್ನು ಮಾರಬೇಕು, ಅಥವಾ ಮಾರಾಟಮಾಡಿಸಬೇಕು

೩) ಮಾರಾಟವು ಪ್ರಾರಂಭವಾಗುವ ಮೊದಲು ಯಾವುದೇ ಕಾಲಕ್ಕೆ ತಪ್ಪುಮಾಡಿದವನು, ಜಕಾತಿಯನ್ನು ವಸೂಲಮಾಡುವವನು ಮಾಡಿದ ವೆಚ್ಚದ ಎಲ್ಲ ಹಣವನ್ನು ಮತ್ತು ತಾನು ಕೊಡತಕ್ಕ ಜಕಾತಿಯನ್ನು ಪಂಚಾಯತಿಯ ಕಚೇರಿಯಲ್ಲಿ ಕೊಟ್ಟರೆ, ೧ನೇ ನಿಯಮದನ್ವಯ ಜಪ್ತಮಾಡಲ್ಪಟ್ಟ ಆಸ್ತಿಯು ಕೂಡಲೆ ಅವನಿಗೆ ಕೊಡಲ್ಪಡುವದು.

೪) ಹೀಗೆ ಹಣವು ಕೊಡಲ್ಪಡದಿದ್ದರೆ, ಮಾರಾಟವು ನಡೆಯಬೇಕು. ಮಾರಾಟದ ಹಣವನ್ನು ಜಕಾತಿ, ಮತ್ತು ಜಪ್ತಿ, ಹಿಡದಿಡುವಿಕೆ ಮತ್ತು ಮಾರಾಟ ಇವುಗಳ ಆನುಷಂಗಿಕ ವೆಚ್ಚಗಳಿಗಾಗಿ ಉಪಯೋಗಿಸಬೇಕು. ಏನಾದರೂ ಬಾಕಿ ಉಳಿದರೆ, ಅದನ್ನು ತಪ್ಪುಮಾಡಿದವನಿಗೆ ಕೊಡಬೇಕು.

೫೧. ಈ ಭಾಗದನ್ವಯ ಜಕಾತಿಯನ್ನು, ಜಿಲ್ಹಾ ಲೋಕಲಬೋರ್ಡಿನ ಅನುಮತಿ ಮತ್ತು ರಾಜ್ಯ ಸರಕಾರದ ಒಪ್ಪಿಗೆಯಿಲ್ಲದೆ, ವಸೂಲ ಮಾಡಬಾರದು.

# ಪರಿಶಿಷ್ಟ

(೪೩ನೇ ನಿಯಮವನ್ನು ನೋಡಿರಿ)

# ವಾಹನ ಮತ್ತು ಪ್ರಾಣಿಗಳ ಮೇಲಿನ ಜಕಾತಿಯ ದರ

“ನಿಯಮಗಳ” ಭಾಗದ ೩೦ನೇ ಮತ್ತು ೩೧ನೇ ಪುಟಗಳನ್ನು ನೋಡಿರಿ

## ಭಾಗ ೧೦ ಅಂಗಡಿ ಮತ್ತು ಹಾಟೆಲ್‌ಗಳ ಮೇಲೆ ಕರ—

೫೨. ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವುದೇ ಬಾಧೆ ಬರದಿದ್ದರೆ.

೧) “ಅಂಗಡಿ” ಅಂದರೆ ಯಾವ ಕಟ್ಟಡದಲ್ಲಿ ಸರಕುಗಳು ಕಿರುಕಳ ಅಥವಾ ಠೋಕ ರೀತಿಯಿಂದ ಇಲ್ಲವೆ ಎರಡೂ ರೀತಿಯಿಂದ ಮಾರಲ್ಪಡುತ್ತ ದೆಯೋ ಅಥವಾ ಎಲ್ಲ ಗಿರಾಕಿಗಳಿಗೆ ಸೇವೆಯನ್ನು ನೀಡಲಾಗಿದೆಯೋ ಅದು ಎಂದರ್ಥ. ಮತ್ತು ಇದರಲ್ಲಿ ಇಂಥ ಅಂಗಡಿಗಳಿಗೆ ಜೋಡಿಸಲ್ಪಟ್ಟ ಇಲ್ಲವೆ ಜೋಡಿಸಲ್ಪಡದ ಕಚೇರಿಗಳು, ಗೋಡವುನಗಳು, ಸ್ಟೋರ ರೂಮುಗಳು ಮತ್ತು ವಖಾರಗಳು ಸಮಾವೇಶದಾಗುತ್ತವೆ; ಆದರೆ ಹಾಟೆಲ್, ರೆಸ್ಟೋರಂಟ, ಭೋಜನಾಲಯ ಅಥವಾ ವಾಣಿಜ್ಯ ಸಂಸ್ಥೆ ಇವುಗಳ ಸಮಾವೇಶವಾಗುವ ದಿಲ್ಲ.

(೨) “ಹಾಟೆಲಾ” ಅಂದರೆ ಆಹಾರ ಪದಾರ್ಥಗಳನ್ನು ಅಥವಾ ಪಾನೀಯ ಗಳನ್ನು ಇಲ್ಲವೆ ಇಲ್ಲವೆ ಇವೆರಡನ್ನು ಕೊಡುವ ಭೋಜನಾಲಯ ಮತ್ತು ರೆಸ್ಟಾರಂಟ ಎಂದರ್ಥ; ಮತ್ತು “ಹಾಟೆಲಿ”ನಲ್ಲಿ ಭೋಜನಾಲಯ ಮತ್ತು ರೆಸ್ಟಾರಂಟಗಳು ಸಮಾವೇಶವಾಗುತ್ತವೆ.

(೩) “ಒಡೆಯ” ಅಂದರೆ, ಮಾಲಕ, ಮ್ಯಾನೇಜರ, ಎಜಂಟ ಅಥವಾ ಇಂಥ ಅಂಗಡಿಯ ಇಲ್ಲವೆ ಹಾಟೆಲಿನ ಮೇಲ್ವಿಚಾರಣೆ ಮಾಡುವ ಕಾಲಕ್ಕಿದ್ದ ಯಾವನೇ ಇತರ ಮನುಷ್ಯನೆಂದರ್ಥ; ಮತ್ತು “ಒಡೆಯ” ಶಬ್ದದಲ್ಲಿ ಇವರೆಲ್ಲರ ಸಮಾವೇಶವಾಗುತ್ತದೆ.

೫೩. ಅಂಗಡಿ ಅಥವಾ ಹಾಟೆಲಗಳ ಮೇಲೆ ಕರ ಹೇರಬೇಕೆಂದು ನಿರ್ಧರಿಸುವ ಪಂಚಾಯತು ಈ ಭಾಗಕ್ಕೆ ಜೋಡಿಸಿದ ಪರಿಶಿಷ್ಟವಲ್ಲಿ ನಿರ್ದಿಷ್ಟ ಪಡಿಸಿದ ದರಗಳಂತೆ ಕರವನ್ನು ಆಕರಣೆ ಮಾಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಪಂಚಾಯತುಗಳಿಂದ, ಸ್ಥಾನಿಕ ಸಂಸ್ಥೆಗಳಿಂದ ಅಥವಾ ಸರಕಾರದವರಿಂದ ತೆರೆಯಲ್ಪಟ್ಟ ಮತ್ತು ನಡೆಸಲ್ಪಡುವ ಅಂಗಡಿಗಳು ಕರದಿಂದ ಮುಕ್ತವಿರುತ್ತವೆ.

೫೪. ಕರವು ಅಂಗಡಿಯ ಅಥವಾ ಹಾಟೆಲಿನ ಒಡೆಯನಿಂದ ಕೊಡಲ್ಪಡ ಬೇಕು, ಮತ್ತು ಅದನ್ನು ಎಪ್ರಿಲ ೧ರಿಂದ ಪ್ರಾರಂಭವಾಗಿ ಮಾರ್ಚ ೩೧ಕ್ಕೆ ಮುಗಿಯುವ ಇಡೀ ವರ್ಷಕ್ಕಾಗಿ, ಅಂಗಡಿಯು ಅಥವಾ ಹಾಟೆಲು ವರ್ಷದ ಯಾವುದೇ ಭಾಗಕ್ಕಾಗಿ ತೆರೆಯಲ್ಪಟ್ಟಿದ್ದರೂ, ಆಕರಣೆ ಮಾಡಬೇಕು, ಮತ್ತು ಕರವು ಎಪ್ರಿಲ ೧೫ರ ಪೂರ್ವದಲ್ಲಿ ಇಲ್ಲವೆ ಹೊಸ ಅಂಗಡಿಯು ಅಥವಾ ಹಾಟೆಲು ತೆರೆಯಲ್ಪಟ್ಟ ೧೫ ದಿವಸಗಳೊಳಗಾಗಿ ಕೊಡಲ್ಪಡಬೇಕು.

೫೫. ಪಂಚಾಯತಿಯ ಸೆಕ್ರೆಟರಿಯು, ಅಥವಾ ಇದರ ಸಂಬಂಧ ಪಂಚಾಯತಿಯಿಂದ ಅಧಿಕಾರ ಪಡೆದ ಮನುಷ್ಯನು ಕರದ ಹಣವನ್ನು ಸ್ವೀಕರಿಸ ಬೇಕು, ಮತ್ತು ಅದಕ್ಕೆ ಪಾವತಿಯನ್ನು ಕೊಡಬೇಕು.

೫೬. ಪಂಚಾಯತು, ಕಲೆಕ್ಟರನ ಅನುಮತಿಯಿಂದ ಪಾವತಿಯ ನಮೂನೆಯನ್ನು ಗೊತ್ತು ಮಾಡಬೇಕು.

## ಪರಿಶಿಷ್ಟ

(೫೩ನೇ ನಿಯಮವನ್ನು ನೋಡಿರಿ).

| | | ಕರದ ದರ |
|---|---|---|
| ೧ | ಅಂಗಡಿಗಳು | ಪ್ರತಿ ವರ್ಷಕ್ಕೆ ರೂ ೫-೦-೦ |
| ೨ | ಹಾಟೆಲಗಳು | ,, ರೂ ೧೦-೦-೦ |

# ೧೧ನೇ ಭಾಗ— ಕಾರಖಾನೆ ಮತ್ತು ಗಿರಣಿಗಳಮೇಲಿ ಕರ.

೫೭. ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವುದೇ ಬಾಧೆ ಬರದಿದ್ದರೆ—

(೧) "ಕಾರಖಾನೆ ಅಥವಾ ಗಿರಣಿ" ಅಂದರೆ, ಯಾವ ಕಟ್ಟಡದಲ್ಲಿ ಯಂತ್ರವು, ಉಗಿ, ಎಣ್ಣೆ ಅಥವಾ ವಿದ್ಯುಚ್ಛಕ್ತಿಯಿಂದ, ಕೌಟುಂಬಿಕ ಅಥವಾ ಒಕ್ಕಲತನದ ಉದ್ದೇಶಗಳನ್ನು ಬಿಟ್ಟು ಇತರ ಯಾವುದೇ ಉದ್ದೇಶಕ್ಕಾಗಿ ನಡೆಯುವದೋ ಅದು ಎಂದರ್ಥ ಮತ್ತು "ಕಾರಖಾನೆ ಅಥವಾ ಗಿರಣಿ" ಈ ಶಬ್ದದಲ್ಲಿ ಕಟ್ಟಡದ ಸಮಾವೇಶವಾಗುತ್ತದೆ.

(೨) "ಒಡೆಯ" ಅಂದರೆ, ಮಾಲಕ, ಮ್ಯಾನೇಜರ, ಎಜೆಂಟ ಇಲ್ಲವೆ ಇಂಥ ಕಾರಖಾನೆಯ ಅಥವಾ ಗಿರಣಿಯ ಮೇಲ್ವಿಚಾರಣೆಮಾಡುವ ಕಾಲಕ್ಕಿದ್ದ ಇತರ ಯಾವುದೇ ಮನುಷ್ಯನೆಂದರ್ಥ.

೫೮. ಕಾರಖಾನೆ ಅಥವಾ ಗಿರಣಿಯಮೇಲೆ ಕರವನ್ನು ಹೇರಲು ನಿರ್ಧರಿಸುವ ಪಂಚಾಯತು ಈ ಭಾಗಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟ ಪಡಿಸಿದ ದರಗಳಂತೆ ಕರವನ್ನು ಆಕರಣೆ ಮಾಡಬೇಕು.

೫೯. ಕರವನ್ನು ಕಾರಖಾನೆಯ ಅಥವಾ ಗಿರಣಿಯ ಒಡೆಯನು ಕೊಡಬೇಕು, ಮತ್ತು ಅದನ್ನು ಎಪ್ರಿಲ ೧ರಿಂದ ಪ್ರಾರಂಭವಾಗಿ ಮಾರ್ಚ ೩೧ಕ್ಕೆ ಮುಗಿಯುವ ಇಡಿ ವರ್ಷಕ್ಕಾಗಿ, ಕಾರಖಾನೆಯು, ಅಥವಾ ಗಿರಣಿಯು ವರ್ಷದ ಯಾವುದೇ ಭಾಗಕ್ಕಾಗಿ ತೆರೆಯಲ್ಪಟ್ಟಿದ್ದರೂ, ಆಕರಣೆ ಮಾಡಬೇಕು; ಮತ್ತು ಕರವು ಎಪ್ರಿಲ ೧೫ರ ಪೂರ್ವದಲ್ಲಿ ಇಲ್ಲವೆ ಹೊಸ ಕಾರಖಾನೆಯು ಅಥವಾ ಗಿರಣಿಯು ತೆರೆಯಲ್ಪಟ್ಟ ೧೫ ದಿವಸಗಳೊಳಗಾಗಿ ಕೊಡಲ್ಪಡಬೇಕು.

೬೦. ಪಂಚಾಯತಿಯ ಸೆಕ್ರೆಟರಿಯು, ಅಥವಾ ಇದರಬಗ್ಗೆ ಪಂಚಾಯತದಿಂದ ಅಧಿಕಾರಪಡೆದ ಮನುಷ್ಯನು ಕರದ ಹಣವನ್ನು ಸ್ವೀಕರಿಸಬೇಕು, ಮತ್ತು ಅದಕ್ಕೆ ಪಾವತಿಯನ್ನು ಕೊಡಬೇಕು.

೬೧. ಪಂಚಾಯತು, ಕಲೆಕ್ಟರನ ಅನುಮತಿಯಿಂದ ಪಾವತಿಯ ನಮೂನೆಯನ್ನು ನಿರ್ಧರಿಸಬೇಕು.

# ಪರಿಶಿಷ್ಟ

## (೫೮ನೇ ನಿಯಮವನ್ನು ನೋಡಿರಿ).

| | | ಕರದ ದರ. |
|---|---|---|
| ೧. | ಉಗಿಯಿಂದ ಅಥವಾ ಎಣ್ಣೆಯಿಂದ ನಡೆಯುವ ಕಾರಖಾನೆಗಳು ಇಲ್ಲವೆ ಗಿರಣಿಗಳು. | ಪ್ರತಿ ವರ್ಷಕ್ಕೆ ರೂ೨೫-೦-೦ |
| ೨. | ವಿದ್ಯುಚ್ಛಕ್ತಿಯಿಂದ ನಡೆಯುವ ಕಾರಖಾನೆಗಳು ಅಥವಾ ಗಿರಣಿಗಳು. | ,, ರೂ೫೦-೦-೦ |

—{ ಸಂಪೂರ್ಣ }—